# ಸಮಗ್ರ ದಾಸ ಸಾಹಿತ್ಯ

ಸಂಪುಟ : ೧೩



# ಮೋಹನದಾಸರು ಮತ್ತು ಇತರ ಹರಿದಾಸರ ಕೀರ್ತನೆಗಳು

ಸಮಗ್ರ ದಾಸಸಾಹಿತ್ಯ

ಸಂಪುಟ : ೧೩

# ಶ್ರೀ ಮೋಹನದಾಸರು ಮತ್ತು ಇತರ ಹರಿದಾಸರ ಕೀರ್ತನೆಗಳು

[ಶ್ರೀಮೋಹನದಾಸರು, ಶ್ರೀವೇಣುಗೋಪಾಲದಾಸರು (ಶ್ರೀಪಂಗನಾಮ ತಿಮ್ಮಣ್ಣದಾಸರು), ಶ್ರೀ ವ್ಯಾಸವಿಠ್ಠಲರು (ಶ್ರೀಕಲ್ಲೂರ ಸುಬ್ಬಣ್ಣದಾಸರು), ಶ್ರೀಗುರುವಿಜಯವಿಠಲರು, ಶ್ರೀಕೇಶವವಿಠಲರು, ಶ್ರೀಕಮಲಾಪತಿವಿಠಲರು, ಶ್ರೀವೆಂಕಟವಿಠಲರು]

ಸಂಪಾದಕರು :

ಡಾ । ರಮಾ ಕಲ್ಲೂರಕರ

ಡಾ । ಸೀತಾಗುಡೂರ

ಕರ್ನಾಟಕ ಸರ್ಕಾರ

ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ

ಬೆಂಗಳೂರು

**SAMAGRA DASA SAHITYA VOLUME - 13** :
*Keerthanas of Shi Mohana Dasaru........* , Edited by Dr. Rama Kallurkara and Dr. Seetha Gudoora and published by Sri. Y.K. Muddukrishna, Director, Directorate of Kannada and Culture, Kannada Bhavana, J.C. Road, Bangalore - 560 002.

ಪುಟಗಳು : 46 + ೫೨೯


ಪ್ರಥಮ ಮುದ್ರಣ : ೨೦೦೩
ಪ್ರತಿಗಳು : ೧೨೫೦

ಬಿಡಿ ಪ್ರತಿ ಬೆಲೆ : ರೂ. ೬೦=೦೦
ಸಮಗ್ರ ಸಂಪುಟಗಳ ಬೆಲೆ : ರೂ. ೨೪೦೦=೦೦

ಮುದ್ರಣ ನಿರ್ವಹಣೆ :
ಮೈಸೂರು ಸೇಲ್ಸ್ ಇಂಟರ್‌ನ್ಯಾಷನಲ್ ಲಿಮಿಟೆಡ್
೩೬, ಕನ್ನಿಂಗ್‌ಹ್ಯಾಂ ರಸ್ತೆ
ಬೆಂಗಳೂರು – ೫೬೦ ೦೫೨

ಮುದ್ರಕರು :
ಮೆ. ಡಾಟ್ಸ್
೧೨೪, ಸುಲ್ತಾನ್‌ಪೇಟೆ
ಬೆಂಗಳೂರು – ೫೬೦ ೦೫೩

# ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆ

## ಸಂಪಾದಕ ಮಂಡಳಿ

### ಕಾರ್ಯನಿರ್ವಾಹಕ ಸಂಪಾದಕರು

ಡಾ. ಶ್ರೀನಿವಾಸ ಹಾವನೂರ
ಡಾ. ಟಿ. ಎನ್. ನಾಗರತ್ನ
ಪ್ರೊ. ವಸಂತ ಕುಷ್ಟಗಿ

### ಸದಸ್ಯರು

ಡಾ. ಎಂ. ಎಂ. ಕಲಬುರ್ಗಿ
ಪ್ರೊ. ಎಂ. ರಾಜಗೋಪಾಲಾಚಾರ್ಯ (ಫೆಬ್ರವರಿ '೯೮ ರವರೆಗೆ)
ಡಾ. ಕೃಷ್ಣ ಕೊಲ್ಹಾರಕುಲಕರ್ಣಿ
ಡಾ. ಮಂದಾಕಿನಿ
ಪ್ರೊ. ಸುಧಾಕರ
ಡಾ. ಬಸವರಾಜ ಸಬರದ

### ಸದಸ್ಯ ಕಾರ್ಯದರ್ಶಿ

ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ

# ಮುನ್ನುಡಿ

ಹರಿದಾಸ ಸಾಹಿತ್ಯ ಕನ್ನಡ ಸಂಸ್ಕೃತಿ ಪರಂಪರೆಯ ಮಹತ್ವಪೂರ್ಣ ಭಾಗವಾಗಿದೆ. ದೇಶೀಯತೆ ಹಾಗೂ ಗೇಯತೆಗಳೆರಡನ್ನೂ ಮೇಳವಿಸಿಕೊಂಡು, ಕನ್ನಡ ಸಾಹಿತ್ಯವಾಹಿನಿಗೆ ಇದು ಹೊಸತನವನ್ನು ನೀಡಿದೆ. ಮನುಜಮತ, ಸಾಹಿತ್ಯಪಥ ಹಾಗೂ ಭಕ್ತಿಸಿದ್ಧಾಂತದ ತ್ರಿವೇಣಿಯಾಗಿರುವ ಈ ಪ್ರಜಾಸಾಹಿತ್ಯವನ್ನು ಪ್ರಜೆಗಳಿಗೆ ಮುಟ್ಟಿಸುವುದು ಪ್ರಜಾಸತ್ತಾತ್ಮಕ ಸರಕಾರದ ಆದ್ಯ ಕರ್ತವ್ಯವಾಗಿದೆ.

ಕನ್ನಡ ಭಾಷಿಕಶಕ್ತಿಯ ವಿವಿಧ ಆಯಾಮಗಳನ್ನು ಸೆಳೆದು ತೋರಿರುವ ಸಾಹಿತ್ಯ-ಸಂಗೀತಗಳ ಸಾಮರಸ್ಯವನ್ನು ಮೆರೆದಿರುವ ಈ ಸಾಹಿತ್ಯ ಕನ್ನಡ ಸಾಹಿತ್ಯಕ್ಕೆ ಜಾಗತಿಕ ಮಹತ್ವವನ್ನು ತಂದುಕೊಟ್ಟಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಮಾನವಾನುಕಂಪ, ಸಮಾಜಸುಧಾರಣೆ, ಲೋಕದ ಡೊಂಕುಗಳನ್ನು ನಗೆ ವಿಡಂಬನೆಗಳ ಮೂಲಕ ತಿದ್ದುವ ಕೌಶಲ ದಾಸಸಾಹಿತ್ಯದ ಪ್ರಮುಖ ಲಕ್ಷಣವಾಗಿದೆ.

ಆಧ್ಯಾತ್ಮಿಕ ಸಾಧನೆ, ಅನುಭವ – ಅನುಭಾವಗಳು ದಾಸಸಾಹಿತ್ಯದ ಪ್ರಮುಖ ಅಂಶವಾದರೂ, ಸುತ್ತಮುತ್ತಲಿರುವ ಜೀವನದ ಕಡೆಗೆ, ಮಾನವ ಸ್ವಭಾವದ ಕಡೆಗೆ ಕಣ್ಣು ಹರಿಸಿದ ಹರಿದಾಸರು ಸಾತ್ವಿಕ ಜೀವನ ನಿರ್ವಹಣೆಗೆ, ಮಾನವನ ಮೇಲ್ಮೆಗೆ, ನೈತಿಕ ಆಚರಣೆಗೆ ಒತ್ತು ನೀಡಿದವರು.

ಹರಿದಾಸ ಸಾಹಿತ್ಯ ಅಪಾರವಾದುದು ಹಾಗೂ ವೈವಿಧ್ಯವಾದುದು. ಈ ವಿಪುಲ ಸಾಹಿತ್ಯರಾಶಿಯನ್ನು ಒಂದೆಡೆ ಕ್ರೋಡೀಕರಿಸಿ, ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಕನ್ನಡ ಜನತೆಗೆ ನೀಡುತ್ತಿದೆ.

ಈ ಯೋಜನೆಗೆ ದುಡಿದ ಸಂಪಾದಕ ಮಂಡಳಿಯ ಶ್ರದ್ಧೆ ಹಾಗೂ ಮಾರ್ಗದರ್ಶನವನ್ನು, ವಿವಿಧ ಸಂಪುಟಗಳ ಸಂಪಾದಕರಾಗಿ ನಾಡಿನ ಅನೇಕ ವಿದ್ವಾಂಸರು ತೋರಿರುವ ಆಸಕ್ತಿ ಹಾಗೂ ನೆರವನ್ನು ಮತ್ತು ಈ ಸಂಪುಟದ ಸಂಪಾದಕರ ಶ್ರಮವನ್ನು ಸ್ಮರಿಸುತ್ತ ಕನ್ನಡ ಜನತೆಯ ಕೈಗೆ ಈ ಮೌಲಿಕ ಪ್ರಕಟಣೆಗಳನ್ನು ಸಂತೋಷದಿಂದ ಅರ್ಪಿಸುತ್ತೇನೆ.

**ಎಸ್. ಎಂ. ಕೃಷ್ಣ**
ಮುಖ್ಯಮಂತ್ರಿಗಳು
ಕರ್ನಾಟಕ ಸರ್ಕಾರ

# ಎರಡು ಮಾತು

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಕರ್ನಾಟಕದ ಸಾಹಿತ್ಯ, ಸಂಗೀತ, ಸಂಸ್ಕೃತಿಗಳನ್ನು ಪ್ರಭಾವಪೂರ್ಣವಾಗಿ ಸಮೃದ್ಧಿಗೊಳಿಸಿದವರು ಹರಿದಾಸರು. ಬದುಕಿನಲ್ಲಿ ನಿಷ್ಠೆ, ಸಾಹಿತ್ಯದಲ್ಲಿ ಬದುಕಿನ ತತ್ತ್ವಗಳನ್ನು ಅಡಗಿಸಿ ಜನಸಾಮಾನ್ಯರನ್ನು ಉನ್ನತ ಜೀವನದತ್ತ ಉದ್ದೀಪಿಸುವ ಮಹಾಕಾಯಕದಲ್ಲಿ ತೊಡಗಿದವರು ಹರಿದಾಸರು. ಕನ್ನಡ ಸಾಹಿತ್ಯಕ್ಕೆ ಅಪೂರ್ವ ಕೊಡುಗೆಯಾಗಿರುವ ಹರಿದಾಸ ಸಾಹಿತ್ಯ ಸಮಾಜದ ಮೌಢ್ಯವನ್ನು ಬಯಲಿಗೆಳೆದು, ಜಾತಿ, ಮತ, ಪಂಥಗಳನ್ನು ಮೀರಿ ನಿಂತ ಮಾನವೀಯ ಮೌಲ್ಯಗಳನ್ನು ಸಾಹಿತ್ಯದ ಮೂಲಕ ಅಭಿವ್ಯಕ್ತಿಸಿತು.

ಹರಿದಾಸ ಸಾಹಿತ್ಯಕ್ಕೆ ಪ್ರೇರಣೆ ಭಕ್ತಿಯಾದರೂ, ಕರ್ನಾಟಕ ಸಂಗೀತಕ್ಕೆ ಸಮೃದ್ಧಿಯನ್ನು ನೀಡಿದವರು ಹರಿದಾಸರು. ಗ್ರಾಮ್ಯ ಮತ್ತು ದೇಶ್ಯ ಶಬ್ದಗಳಿಗೆ ಸಾಹಿತ್ಯದ ಮುದ್ರೆಯನ್ನು ಒತ್ತಿ, ಭಾಷೆಗೊಂದು ಪರಿಪಕ್ವತೆಯನ್ನೂ ತಂದುಕೊಟ್ಟರು. ಇಂಥ ಸಾಹಿತ್ಯ ಸಂಪತ್ತನ್ನು ರಕ್ಷಿಸುವುದು ಮತ್ತು ಪ್ರಸಾರ ಮಾಡುವುದು ನಮ್ಮ ಕರ್ತವ್ಯ. ಈ ದೃಷ್ಟಿಯಿಂದ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆಗೆ ಸಮಿತಿಯೊಂದನ್ನು ರಚಿಸಿದ್ದು, ಇದರಲ್ಲಿ ನಾಡಿನ ಅನೇಕ ವಿದ್ವಾಂಸರು ಸಂಪುಟ ಸಂಪಾದಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಈ ಸಂಪುಟಗಳು ಹೊರಬರಲು ಕಾರಣರಾದ ಸಂಪಾದಕ ಮಂಡಳಿಯ ಸದಸ್ಯರಿಗೆ ಹಾಗೂ ಈ ಸಂಪುಟದ ಸಂಪಾದಕರಿಗೆ ನನ್ನ ಕೃತಜ್ಞತೆಗಳು.

ದಾಸರು ತಮ್ಮ ಸಾಹಿತ್ಯದಲ್ಲಿ ಸಾರ್ವಕಾಲಿಕ ಮೌಲ್ಯಗಳನ್ನು ಉಳಿಸಿ ಹೋಗಿದ್ದಾರೆ. ನಮ್ಮ ಸಾಮಾಜಿಕ ಜೀವನವನ್ನು ರೂಪಿಸುವಲ್ಲಿ ಈ ಕೀರ್ತನೆಗಳು ಮೌಲಿಕವಾದುವು. ಕನ್ನಡ ಜನತೆ ಈ ಕೃತಿಯ ಪ್ರಯೋಜನವನ್ನು ಪಡೆದರೆ ಪಟ್ಟ ಶ್ರಮ ಸಾರ್ಥಕವಾಗುತ್ತದೆ.

**ರಾಣಿ ಸತೀಶ್**

ಕನ್ನಡ ಮತ್ತು ಸಂಸ್ಕೃತಿ ಸಚಿವರು

# ಯೋಜನೆಯನ್ನು ಕುರಿತು

ಕನ್ನಡ ಸಾಹಿತ್ಯ ಚರಿತ್ರೆಯ ಸಿರಿವಂತಿಕೆಯಲ್ಲಿ ಕೀರ್ತನ ಸಾಹಿತ್ಯದ ಕೊಡುಗೆ ವಿಪುಲವಾದುದು : ವೈಶಿಷ್ಟ್ಯಪೂರ್ಣವಾದುದು. ಈ ಸಮಗ್ರ ಸಾಹಿತ್ಯದ ಸಂಗ್ರಹ ಮತ್ತು ಪ್ರಕಾಶನದ ಕಾರ್ಯ ಪೂರ್ಣವಾಗಿ ಆಗಿರಲಿಲ್ಲ. ಇದನ್ನು ಮನಗಂಡ ಸರ್ಕಾರ ಸಮಗ್ರ ದಾಸ ಸಾಹಿತ್ಯ ಪ್ರಕಟಣೆಯ ಕಾರ್ಯವನ್ನು ಕೈಗೆತ್ತಿಕೊಂಡಿತು.

ಸುಮಾರು ಒಂದು ನೂರ ಮೂವತ್ತೊಂಬತ್ತು ಜನ ದಾಸರ ಸುಮಾರು ಹದಿನಾರು ಸಾವಿರ ಕೀರ್ತನೆಗಳ ಬೃಹತ್ ಸಾಹಿತ್ಯ ಸಾಮಗ್ರಿ ದೊರಕಿತು. ಹೀಗೆ ಸಾಂಪ್ರದಾಯಿಕ ರೀತಿಯಲ್ಲಿ ಸಂಗ್ರಹಿಸಿ, ಸಂಪಾದಿಸಿದ ಕೀರ್ತನ ಸಾಹಿತ್ಯವನ್ನು ಸಂಪುಟಗಳಲ್ಲಿ ಮುದ್ರಿಸುವುದು ಕಷ್ಟವೇನಾಗಿರಲಿಲ್ಲ. ಆದರೆ, ಅದನ್ನು ಮಾಹಿತಿ ತಂತ್ರಜ್ಞಾನದ ಇವತ್ತಿನ ಸಂದರ್ಭದಲ್ಲಿ ಬಹು ಉಪಯೋಗಿ ನೆಲೆಯಲ್ಲಿ ಬಹುಮಾಧ್ಯಮದಲ್ಲಿ ಹೊರತರಬೇಕೆಂಬ ಕನಸು ರೋಮಾಂಚಕಾರಿ ಅನುಭವವೇ ಸರಿ. ಇದನ್ನು ಕೃತಿ ರೂಪಕ್ಕಿಳಿಸುವ ಹಾದಿಯಲ್ಲಿ ಎದುರಾದ ತಾಂತ್ರಿಕ ಸವಾಲು ಬಹು ಕ್ಲಿಷ್ಟಕರವಾಗಿಯೇ ಕಂಡಿತು.

ದಿಟ, ಈ ಸಮಗ್ರ ಸಾಹಿತ್ಯವನ್ನು ಕೇವಲ ಮುದ್ರಣದಲ್ಲಷ್ಟೇ ಅಲ್ಲ ಆಯ್ದ ಕೀರ್ತನೆಗಳನ್ನು ಗಾಯನಕ್ಕೆ ಅಳವಡಿಸಿ, ಸಿಡಿ ಮತ್ತು ಅಂತರ್ಜಾಲದಲ್ಲಿ ಹೊರತರ ಬೇಕೆಂದಾಗ ಬಳಕೆದಾರರ ಅವಶ್ಯಕತೆಯನ್ನು ಆಧರಿಸಿ ತಯಾರಿಸುವ ಅಗತ್ಯ ಇತ್ತು. ಆದರೆ ಇವುಗಳಲ್ಲಿ ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಗಳಲ್ಲಿ ಸರ್ಚ್ ಎಂಜಿನ್ (ಹುಡುಕುವಿಕೆ) ಇಲ್ಲದಿರುವುದು ಒಂದು ತಾಂತ್ರಿಕ ಸಮಸ್ಯೆಯೇ ಆಯಿತು.

ಈ ರೀತಿಯ ಪ್ರಯತ್ನ ಕನ್ನಡ ಭಾಷೆಯಲ್ಲಿ ಹಿಂದೆಂದೂ ಆಗದಿದ್ದುದರಿಂದ ತಂತ್ರಾಂಶವನ್ನು ಹೊಸದಾಗಿಯೇ ಅಭಿವೃದ್ಧಿ ಪಡಿಸಬೇಕಾದ ಸವಾಲನ್ನು ಕೈಗೆತ್ತಿ ಕೊಳ್ಳಲಾಯಿತು. ಇದಕ್ಕಾಗಿ ಕನ್ನಡ ಗಣಕ ಪರಿಷತ್ತು, ರಾಷ್ಟ್ರೀಯ ಮಾಹಿತಿ ಕೇಂದ್ರ (ಎನ್‌ಐಸಿ), ಮಾಹಿತಿ ಮತ್ತು ತಂತ್ರಜ್ಞಾನ ಇಲಾಖೆ, ಮಹಾಭಾರತ ಸಂಶೋಧನಾ ಪ್ರತಿಷ್ಠಾನ ಮುಂತಾದ ಹಲವಾರು ತಂತ್ರಾಂಶ ಸಂಸ್ಥೆಗಳೊಂದಿಗೆ ನಿರಂತರ ಸಮಲೋಚನೆ, ಚಿಂತನೆಗಳನ್ನು ನಡೆಸಲಾಯಿತು.

ಹೀಗೆ ಸಾಹಿತ್ಯ ಸಂಗ್ರಹ, ಸಂಪಾದನೆ, ಸಂಗೀತ ಸಂಯೋಜನೆ, ಧ್ವನಿಮುದ್ರಣ, ಬಹುಮಾಧ್ಯಮಕ್ಕೆ ಅಳವಡಿಸುವ ತಾಂತ್ರಿಕ ಕುಶಲತೆಯ ನಿರಂತರ ಕಾರ್ಯಾನುಷ್ಠಾನಕ್ಕೆ ಸಂಪಾದಕ ಮಂಡಳಿ ಸದಸ್ಯರು, ಸಂಪುಟ ಸಂಪಾದಕರು, ಇಲಾಖಾ ಅಧಿಕಾರಿಗಳು, ತಂತ್ರಜ್ಞರು, ಕೋರ್ ಸಮಿತಿ ಸದಸ್ಯರು, ಸಂಗೀತ ನಿರ್ದೇಶಕರು, ಗಾಯಕರು – ಈ ಎಲ್ಲರ ಪರಿಶ್ರಮ ಅಗಾಧವಾಗಿ ದೊರಕಿದೆ. ಈ ಶ್ರಮದ ಫಲವಾಗಿ ಬಹುಮಾಧ್ಯಮದಲ್ಲಿ ಸಮಗ್ರ ದಾಸ ಸಾಹಿತ್ಯ ಯೋಜನೆಯ ಬೃಹತ್ ಕಾರ್ಯ ಸಾಕಾರಗೊಂಡಿದೆ.

ಈ ವಿಪುಲ ಸಾಹಿತ್ಯವನ್ನು ಕನ್ನಡ ಅಕ್ಷರಜ್ಞಾನಿಗಳು ಪುಸ್ತಕ ರೂಪದಲ್ಲಿಯೂ, ಬಹುಗಾತ್ರದ ಸಾಹಿತ್ಯವನ್ನು ಕೈ ಅಳತೆಯ ಸಿಡಿ ರೂಪದಲ್ಲಿಯೂ ಈಗ ಪಡೆಯಬಹುದಾಗಿದೆ. ಅಲ್ಲದೆ, ಅಂತರ್ಜಾಲದ ಮೂಲಕ ವಿಶ್ವದ ಯಾವುದೇ ಮೂಲೆಯಲ್ಲಿರುವ ಆಸಕ್ತ ಜನತೆ ಕುಳಿತಲ್ಲಿಯೇ ಆರಾಮವಾಗಿ ವೀಕ್ಷಿಸುವ, ಕೇಳುವ ಹಾಗೂ ಕನ್ನಡ ಅಕ್ಷರ ಜ್ಞಾನವಿರದ ಭಾಷಿಕರು ಸಹಿತ ಸಂಗೀತವನ್ನು ಕೇಳಿ ಆಸ್ವಾದಿಸುವ ಅವಕಾಶವನ್ನು ಏಕಕಾಲದಲ್ಲಿ ಕಲ್ಪಿಸಲಾಗಿದೆ. ಪ್ರಕಾಶನದ ಇತಿಹಾಸದಲ್ಲಿಯೇ ದಾಖಲನೀಯವಾದ ಈ ಕಾರ್ಯ ಮುಂದೆ ಸರ್ಕಾರಿ ಸಂಸ್ಥೆಗಳಿಗಾಗಲಿ ಖಾಸಗಿ ಸಂಸ್ಥೆಗಳಿಗಾಗಲಿ ಮಾದರಿಯಾಗಬಹುದೆಂದು ನಂಬಲಾಗಿದೆ.

ನಮ್ಮ ಸಂಸ್ಕೃತಿಯನ್ನು ಬಿತ್ತರಿಸಲು ನಾಲ್ಕು ಗೋಡೆಗಳೊಳಗಿನ ರಂಗ ಮಂದಿರಗಳು, ವೇದಿಕೆಗಳು ಅಗತ್ಯವಿದೆ ದಿಟ. ಆದರೆ ಭವಿತವ್ಯದಲ್ಲಿ ವಿಶ್ವದ ಜನರನ್ನು ತಲಪಲು ಮತ್ತು ಮುಖ್ಯವಾಗಿ ಯುವಜನಾಂಗಕ್ಕೆ ನಮ್ಮ ಸಾಂಸ್ಕೃತಿಕ ಕ್ಷಿತಿಜದ ವಿಸ್ತಾರವನ್ನು ಪರಿಚಯಿಸಲು ಸೂಕ್ಷ್ಮ ಸಂವೇದನಾಶೀಲವಾದ ಸಾಹಿತ್ಯವನ್ನು ಬಹುಮಾಧ್ಯಮದಲ್ಲಿ ಅಳವಡಿಸುವುದು ಅತ್ಯಾವಶ್ಯಕ. ಈ ನಿಟ್ಟಿನಲ್ಲಿ ಇದೊಂದು ವಿನೂತನ ಪ್ರಯೋಗ; ಈ ಪ್ರಯೋಗದ ಫಲ ಎಲ್ಲರಿಗೂ ಲಭ್ಯವಾಗಲೆಂಬುದು ನಮ್ಮ ಆಶಯ.

**ಸಿ. ಎಸ್. ಕೇದಾರ್**

ಸರ್ಕಾರದ ಕಾರ್ಯದರ್ಶಿ

# ಪ್ರಕಾಶಕರ ಮಾತು

ಕರ್ನಾಟಕದ ಧಾರ್ಮಿಕ, ಸಾಂಸ್ಕೃತಿಕ ಇತಿಹಾಸದಲ್ಲಿ ಹರಿದಾಸರ ಸ್ಥಾನ ವಿಶಿಷ್ಟವಾದದ್ದು. ಸಾವಿರಾರು ವರ್ಷಗಳಿಂದ ಭಾರತದಲ್ಲಿ ಅವಿರತವಾಗಿ ಹರಿದುಬಂದ ಜೀವನಮೌಲ್ಯಗಳನ್ನು ಜನಸಾಮಾನ್ಯರ ಆಡುಭಾಷೆಯಲ್ಲಿ ಮುಟ್ಟಿಸಿ, ಲೌಕಿಕ ವಿಡಂಬನೆಯ ಮೂಲಕ ಅವರ ಮಾನಸಿಕ ವಿಕಾಸವನ್ನು ಯಶಸ್ವಿಯಾಗಿ ಸಾಧಿಸಿದವರು ಹರಿದಾಸರು. ಪಾಂಡಿತ್ಯ, ಲೋಕಾನುಭವಗಳ ಹಿನ್ನೆಲೆಯಿಂದಾಗಿ, ಆಡುಭಾಷೆಯ ಸೊಗಡಿನಿಂದಾಗಿ ಇವರು ಹಾಡಿದ್ದೆಲ್ಲ ಸಾಹಿತ್ಯವಾಯಿತು, ಕಾವ್ಯವಾಯಿತು, ಕೇಳುಗರನ್ನು ಸೆರೆಹಿಡಿಯಿತು. ಗೇಯಗುಣವುಳ್ಳ, ನೃತ್ಯಕ್ಕೆ ಅಳವಡುವ, ಛಂದೋಬದ್ಧವಾದ, ಜನತೆಯ ಮಧ್ಯದಲ್ಲಿಯೇ ಸಂದರ್ಭಾನುಸಾರ ಹುಟ್ಟಿದ ಹರಿದಾಸಸಾಹಿತ್ಯ ವೈಶಿಷ್ಟ್ಯಪೂರ್ಣವೆನಿಸಿತು. ಕನ್ನಡ ವಾಙ್ಮಯದಲ್ಲಿ ದಾಸಸಾಹಿತ್ಯ ಒಂದು ವಿಶೇಷ ಸ್ಥಾನ ಪಡೆಯಿತು. ಹೀಗೆ ಸಾಹಿತ್ಯ, ಸಂಗೀತ ಮತ್ತು ಸಾಮಾಜಿಕ ಕ್ಷೇತ್ರಕ್ಕೆ ದಾಸಸಾಹಿತ್ಯದ ಕೊಡುಗೆ ಗಣನೀಯವಾದುದು.

ಸುಮಾರು ನೂರಮುವ್ವತ್ತೊಂಬತ್ತು ಜನ ದಾಸರು ಆಗಿಹೋಗಿದ್ದು, ಅವರ ಕೀರ್ತನೆಗಳ ಸಂಖ್ಯೆ ಸುಮಾರು ಹದಿನಾರು ಸಾವಿರಕ್ಕೂ ಅಧಿಕ. ಈವರೆಗೆ ಕೆಲವು ದಾಸರ ಕೀರ್ತನೆಗಳು ಬಿಡಿ ಬಿಡಿಯಾಗಿ ಪ್ರಕಟವಾಗಿವೆಯಾದರೂ, ಇನ್ನೂ ಅನೇಕ ದಾಸವರೇಣ್ಯರ ಕೀರ್ತನೆಗಳು ಹಸ್ತಪ್ರತಿ ರೂಪದಲ್ಲಿಯೇ ಉಳಿದುಕೊಂಡಿವೆ. ಅವುಗಳನ್ನು ಸಂಗ್ರಹಿಸಿ, ಸಂಪಾದಿಸಿ, ಪ್ರಕಟಿಸಿ, ಸಮಗ್ರ ದಾಸಸಾಹಿತ್ಯವು ಕನ್ನಡಿಗರಿಗೆ ಒಂದೆಡೆ ಲಭ್ಯವಾಗುವಂತೆ ಮಾಡುವ ಉದ್ದೇಶದಿಂದ ಕರ್ನಾಟಕ ಸರ್ಕಾರದ ಮತ್ತು ಸಂಸ್ಕೃತಿ ನಿರ್ದೇಶನಾಲಯವು ಸಮಗ್ರ ದಾಸಸಾಹಿತ್ಯ ಪ್ರಕಟಣೆಯ ಬೃಹತ್ ಯೋಜನೆಯನ್ನು ಹಾಕಿಕೊಂಡಿದೆ. ಈ ಉದ್ದೇಶಕ್ಕಾಗಿ ಕಾರ್ಯನಿರ್ವಾಹಕ ಸಂಪಾದಕರಾದ ಡಾ. ಶ್ರೀನಿವಾಸ ಹಾವನೂರ, ಡಾ. ಟಿ. ಎನ್. ನಾಗರತ್ನ, ಪ್ರೊ. ವಸಂತ ಕುಷ್ಟಗಿ, ಸದಸ್ಯರಾದ ಡಾ. ಎಂ. ಎಂ. ಕಲಬುರ್ಗಿ, ಡಾ. ಬಸವರಾಜ ಸಬರದ, ಪ್ರೊ. ಸುಧಾಕರ, ಡಾ. ಕೃಷ್ಣ ಕೊಲ್ಹಾರಕುಲಕರ್ಣಿ, ಡಾ. ಮಂದಾಕಿನಿ (ಈಗ ದಿವಂಗತರು), ಹಾಗೂ ಪ್ರೊ. ಎಂ. ರಾಜಗೋಪಾಲಾಚಾರ್ಯ (ಈಗ ದಿವಂಗತರು) ಅವರನ್ನೊಳಗೊಂಡಂತೆ ಸಂಪಾದಕ ಸಮಿತಿಯನ್ನು ರಚಿಸಲಾಯಿತು. ಇಲಾಖಾ ನಿರ್ದೇಶಕರು ಸಮಿತಿಯ ಸದಸ್ಯ–ಕಾರ್ಯದರ್ಶಿಗಳಾಗಿರುತ್ತಾರೆ. ಇದರಲ್ಲಿ ನಾಡಿನ ಅನೇಕ ವಿದ್ವಾಂಸರ ನೆರವನ್ನು ಬಳಸಿಕೊಳ್ಳಲಾಗುತ್ತಿದೆ.

ಈ ಯೋಜನೆಯನ್ವಯ 'ಸಮಗ್ರ'ವಾಗಿ ದಾಸರ ಕೀರ್ತನೆಗಳನ್ನು ಸಂಗ್ರಹಿಸಿ ಪ್ರಕಟಿಸುವುದಿದ್ದರೂ, ಕೆಲವು ಹರಿದಾಸರ ರಚನೆಗಳು ಬಿಟ್ಟು ಹೋಗಿರುವ ಸಾಧ್ಯತೆ ಇರುತ್ತದೆ. ಅಂಥ ಹರಿದಾಸರ ಕೀರ್ತನೆಗಳು ದೊರೆತಲ್ಲಿ ಮುಂದೆ ಪರಿಷ್ಕರಣ ಸಂದರ್ಭದಲ್ಲಿ ಪ್ರಕಟಿಸಲು ಕ್ರಮಕೈಗೊಳ್ಳಲಾಗುವುದು.

ಸಮಗ್ರ ದಾಸಸಾಹಿತ್ಯ ಯೋಜನೆಯಡಿ ಪ್ರಕಟವಾಗುತ್ತಿರುವ ಆಯಾ ಸಂಪುಟಗಳ ಸಂಪಾದಕರಿಗೆ ಹಾಗೂ ಈ ಕಾರ್ಯದಲ್ಲಿ ನಮ್ಮೊಡನೆ ಸಹಕರಿಸಿದ ಸಂಪಾದಕ ಮಂಡಳಿಯವರಿಗೆ ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರಾದ ಶ್ರೀ ಕೆ. ಸಿ. ರಾಮಮೂರ್ತಿ, ಶ್ರೀ ಸಿ. ಸೋಮಶೇಖರ ಅವರಿಗೆ, ಜಂಟಿ ನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ ಅವರಿಗೆ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ. ಎಸ್. ವಿಜಯಲಕ್ಷ್ಮಿ ಹಾಗೂ ಡಾ. ಮಂಜುಳ ಅವರಿಗೆ ಕೃತಜ್ಞತೆಗಳು.

ಹರಿದಾಸರ ಕೀರ್ತನೆಗಳನ್ನು ಆಯ್ದು ಸಂಗೀತಕ್ಕೆ ಆಯ್ಕೆ ಮಾಡಲು ನೆರವಾದ ಶ್ರೀ ವಿನಾಯಕ ತೊರವಿ, ಶ್ರೀ ಮೈಸೂರು ಸುಬ್ರಮಣ್ಯಂ, ಶ್ರೀ ಆರ್. ಕೆ. ಪದ್ಮನಾಭ, ಶ್ರೀ ಬಾನಂದೂರು ಕೆಂಪಯ್ಯ ಹಾಗು ಶ್ರೀಮತಿ ಮಾಲತಿ ಶರ್ಮರವರಿಗೆ, ಸಂಗೀತ ನಿರ್ದೇಶಕರಿಗೆ ಹಾಗೂ ಗಾಯಕರಿಗೆ ಕೃತಜ್ಞತೆಗಳು.

ಸಂಪುಟಗಳನ್ನು ಮುದ್ರಣಕ್ಕೆ ಅನುಗೊಳಿಸುವ ಕಾರ್ಯ ನಿರ್ವಹಿಸಿದ ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಅನಂತ ಪದ್ಮನಾಭರಾವ್ ಮತ್ತು ಪ್ರೊ. ನಾ. ಗೀತಾಚಾರ್ಯ ಇವರಿಗೂ ಸಹ ಕೃತಜ್ಞತೆಗಳು.

ಈ ಸಮಗ್ರ ದಾಸಸಾಹಿತ್ಯ ಸಂಪುಟಗಳ ಮುದ್ರಣ ಕಾರ್ಯವನ್ನು ನಿರ್ವಹಿಸಿದ ಎಂ.ಎಸ್.ಐ.ಎಲ್. ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಅಶೋಕ್ ವಿ. ಡೇವಿಡ್ ಹಾಗೂ ವಿಶೇಷಾಧಿಕಾರಿಗಳಾದ ಶ್ರೀ ಎಂ. ರವಿಶಂಕರ್ ಅವರಿಗೆ ನನ್ನ ಕೃತಜ್ಞತೆಗಳು. ಸಮಗ್ರ ದಾಸಸಾಹಿತ್ಯವನ್ನು ಪ್ರಕಟಿಸುವುದು ಹರಿದಾಸರಿಗೂ ಕನ್ನಡ ಜನತೆಗೂ ನಾವು ಸಲ್ಲಿಸಬೇಕಾದ ಸೇವೆಯೆಂದು ಭಾವಿಸಿದ್ದೇನೆ. ಪಂಡಿತ ಪಾಮರರನ್ನು ಏಕ ಕಾಲಕ್ಕೆ ಆಕರ್ಷಿಸಬಲ್ಲ ವಿಶಿಷ್ಟ ಸಾಮರ್ಥ್ಯ ದಾಸಸಾಹಿತ್ಯದ್ದು ಎಂದರೆ ತಪ್ಪಾಗಲಾರದು. ಕನ್ನಡ ಜನತೆಯು ಈ ಪ್ರಕಟಣೆಯ ಸದುಪಯೋಗ ಪಡೆದುಕೊಂಡೀತು ಎಂದು ಆಶಿಸಿದ್ದೇನೆ.

**ವೈ. ಕೆ. ಮುದ್ದುಕೃಷ್ಣ**

ನಿರ್ದೇಶಕರು

# ಸಂಪಾದಕ ಮಂಡಳಿಯ ನುಡಿ

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಓದಲಾರದ ಕನ್ನಡ ಜನಕ್ಕೆ ಪಂಪನಂತಹ ಪ್ರೌಢಕವಿಗಳು ಗೊತ್ತಿರಲಿ ಬಿಡಲಿ, ದಾಸರ ಹಾಡುಗಳು ಗೊತ್ತಿಲ್ಲದವರು ಮಾತ್ರ ಅಪರೂಪ. ಜನರ ಮೇಲೆ ನಿರಂತರ ಪ್ರಭಾವವನ್ನು ಬೀರುವ ಜನಸಮ್ಮುಖತೆ ದಾಸಸಾಹಿತ್ಯದ ಪ್ರಮುಖ ಲಕ್ಷಣಗಳಲ್ಲಿ ಒಂದು. ಇಂತಹ ದಾಸರ ಹಾಡುಗಳು ಜ್ಞಾನಸಂಪದ ಹಾಗೂ ಭಕ್ತಿಸಂಪದಗಳ ಸಾರ್ವತ್ರಿಕ ಹಬ್ಬುಗೆಗೆ ಸಾಧನವಾಗಿ ಪರಿಣಮಿಸಿವೆ.

ಕನ್ನಡ ನಾಡಿನಾದ್ಯಂತ ಎಲ್ಲ ಸ್ತರಗಳಲ್ಲಿ ವರ್ಗ-ವರ್ಣಗಳ ಭೇದವಿಲ್ಲದೆ, ಜನರ ಬಾಯಲ್ಲಿ ಉಳಿದುಕೊಂಡು ಬಂದ ಈ ಸಾಹಿತ್ಯವನ್ನು ಮೊಟ್ಟಮೊದಲಿಗೆ ಪ್ರಕಟಿಸಿದ ಶ್ರೇಯಸ್ಸು ಬಾಸೆಲ್ ಮಿಶನ್ನಿನ ರೆ. ಹರ್ಮನ್ ಮೊಗ್ಲಿಂಗ್‌ರಿಗೆ ಸೇರುತ್ತದೆ. ಇವರು ತಮ್ಮ ಇಲ್ಲಿಯ ವಾಸ್ತವ್ಯದಲ್ಲಿ (೧೮೩೬ರಿಂದ), ನಾಲ್ಕುನೂರಕ್ಕೂ ಮಿಕ್ಕಿದ ದಾಸರ ಪದಗಳನ್ನು ಸಂಗ್ರಹಿಸಿದ್ದರು. ಅವುಗಳಲ್ಲಿಯ ಒಂದು ನೂರು ಪದಗಳ ಸಂಗ್ರಹವನ್ನು 'ದಾಸರ ಪದಗಳು' ಎಂಬ ಹೆಸರಿನಿಂದ ಕ್ರಿ. ಶ. ೧೮೫೦ರಲ್ಲಿ, ಮತ್ತೆ ಕ್ರಿ.ಶ. ೧೮೫೨ರಲ್ಲಿ ೧೭೪ ಪದಗಳುಳ್ಳ ಸಂಕಲನವನ್ನು ಮಂಗಳೂರಿನಲ್ಲಿ ಕಲ್ಲಚ್ಚಿನಲ್ಲಿ ಛಾಪಿಸಿ ಪ್ರಕಟಿಸಿದರು. ಈ ವಿಷಯವನ್ನು ೧೮೭೩ರಲ್ಲಿ ಪ್ರಕಟವಾದ ಇಂಡಿಯನ್ ಎಂಟಿಕ್ವೆರಿಯ 'On the Karnataka Vaishnava Dasas' - ಎಂಬ ತಮ್ಮ ಲೇಖನದಲ್ಲಿ ರೆ. ಕಿಟೆಲ್ಲರು ಕಾಣಿಸಿದ್ದಾರೆ. ಇದರಿಂದ ಕಿಟೆಲ್‌ರಂಥವರು ಕೂಡ ದಾಸರ ಪದಗಳ ಮಹತ್ವವನ್ನು ಮತ್ತು ಜನಪ್ರಿಯತೆಯನ್ನು ಗುರುತಿಸಿದ್ದರು ಎಂಬುದು ಗೊತ್ತಾಗುತ್ತದೆ. ಪ್ರಾಸಂಗಿಕವಾಗಿ ಇದುವೆ ದಾಸಸಾಹಿತ್ಯದ ಕುರಿತಾದ ಮೊದಲ ಲೇಖನವೂ ಆಗಿದೆ.

ಅನಂತರದ ದಿನಗಳಲ್ಲಿ ಈ ಕ್ಷೇತ್ರದಲ್ಲಿ ಹಲವಾರು ಜನರು ಕೆಲಸವನ್ನು ಮುಂದುವರಿಸಿದರು. ರೆ. ಮೊಗ್ಲಿಂಗರ 'ದಾಸರ ಪದಗಳು' ಇದರ ದ್ವಿತೀಯ ಆವೃತ್ತಿಯನ್ನು ೧೮೭೧ರಲ್ಲಿ ಜಾನ್ ಗ್ಯಾರೆಟರ ಸೂಚನೆಯ ಮೇರೆಗೆ ಹೊಳಕಲ್ಲು ನರಸಿಂಹಯ್ಯನವರು ಬೆಂಗಳೂರಿನಿಂದ ಪ್ರಕಟಿಸಿದರು. ೧೮೭೩ರಲ್ಲಿ ಹಿಂದೂ ಭಾಷಾ ಸಂಜೀವಿನೀ ಮುದ್ರಣ ಶಾಲೆಯಲ್ಲಿ 'ಹರಿಭಜನೆ, ಕೀರ್ತನೆ' ಎಂಬ ಸಂಗ್ರಹ ಪ್ರಕಟವಾಯಿತು. ೧೮೯೦ನೆ ದಶಕದಲ್ಲಿ ಬೆಳಗಾವಿಯ ಆಬಾಜಿ ರಾಮಚಂದ್ರ ಸಾವಂತ ಇವರು ದೇವನಾಗರಿ ಲಿಪಿಯಲ್ಲಿ "ದಾಸರ ಪದಗಳ ಸಂಗ್ರಹವು" ಎಂಬುದಾಗಿ ಎರಡು ಭಾಗಗಳಲ್ಲಿ ಪ್ರಕಟಿಸಿದರು. ಆ ದಶಕದಲ್ಲಿಯೇ ಮಡಕಶಿರಾದ ಬಾಲಕೃಷ್ಣರಾಯರು ೧೮೯೪ರಲ್ಲಿ 'ಪುರಂದರ ದಾಸರು ಮೊದಲಾದ ಅಪರೋಕ್ಷ ಜ್ಞಾನಿಗಳ ಪದಗಳು' ಎಂಬ ಪುಸ್ತಕವನ್ನು ತೆಲುಗು ಲಿಪಿಯಲ್ಲಿ ಮುದ್ರಿಸಿದ್ದು ಗಮನಾರ್ಹವಾಗಿದೆ. ಮತ್ತೆ ೧೯೦೮ರಲ್ಲಿ ಅವರೇ ಇನ್ನೊಂದು ಸಂಕಲನವನ್ನೂ ಪ್ರಕಟಿಸಿದ್ದಾರೆ.

ಹೀಗೆ ೧೮೫೦ರಷ್ಟು ಹಿಂದೆಯೇ ಪ್ರಾರಂಭವಾದ ದಾಸರ ಪದಗಳ ಸಂಗ್ರಹ ಹಾಗೂ ಪ್ರಕಟಣೆಯ ಕಾರ್ಯಕ್ಕೆ ಒಂದು ವ್ಯವಸ್ಥಿತ ರೂಪವನ್ನು ಕೊಟ್ಟು, ನಾಡಿನಾದ್ಯಂತ ಹರಿದು ಹಂಚಿಹೋದ, ಜನರ ಬಾಯಲ್ಲಿ ಉಳಿದುಕೊಂಡು ಬಂದ ವಿವಿಧ ದಾಸರ ಪದಗಳನ್ನು ಸಂಗ್ರಹಿಸಿ ಪ್ರಕಟಿಸಲು ಪ್ರಾರಂಭಿಸಿದವರು ಉಡುಪಿಯ ಪಾವಂಜೆ ಗುರುರಾಯರು. ಅವರು ೧೯೧೪ರಲ್ಲಿ ಪ್ರಕಟಿಸಿದ ಮೊದಲ ಸಂಕಲನದ ಹೆಸರು 'ಉದಯರಾಗವು' ಎಂಬುದು. ಅನಂತರದ ದಿನಗಳಲ್ಲಿ ಪುರಂದರದಾಸರ ಕೀರ್ತನೆಗಳನ್ನು ಐದು ಸಂಪುಟಗಳಲ್ಲಿ ಮತ್ತು ಉಳಿದ ದಾಸರ ಕೃತಿಗಳನ್ನು ಬಿಡಿಬಿಡಿಯಾಗಿ ಪ್ರಕಟಿಸಿದರು. ಹೀಗೆ ನಾಡಿನ ದಕ್ಷಿಣದ ಅಂಚಿನ ಉಡುಪಿಯಲ್ಲಿ ಪ್ರಾರಂಭವಾದ ಕೆಲಸವನ್ನು ಉತ್ತರದ ಅಂಚಿನ ಲಿಂಗಸುಗೂರಿನಲ್ಲಿ ಗೊರಾಬಾಳ ಹಣಮಂತರಾಯರು 'ವರದೇಂದ್ರ ಸಾಹಿತ್ಯ ಮಾಲೆ'ಯನ್ನು ಪ್ರಾರಂಭಿಸಿ ತಮ್ಮ ಇಡೀ ಜೀವನವನ್ನೇ ಹರಿದಾಸ ಸಾಹಿತ್ಯದ ಸಂಗ್ರಹ ಮತ್ತು ಪ್ರಕಟಣೆಗೆ ಮೀಸಲಾಗಿರಿಸಿದರು. ಇತ್ತ ಮೈಸೂರು ಭಾಗದಲ್ಲಿ ಸುಪ್ರಸಿದ್ಧ ದಾಸರ ಹಾಡುಗಳನ್ನು ತಕ್ಕಮಟ್ಟಿಗೆ ಶಾಸ್ತ್ರಶುದ್ಧವಾಗಿ ಪ್ರಕಟಿಸಲು

ಸುಬೋಧ ರಾಮರಾಯರು ಮುಂದಾದರು. ಇದೇ ಬಗೆಯ ಕೆಲಸವನ್ನು ಧಾರವಾಡ ಪ್ರದೇಶದಲ್ಲಿ ನಾರಾಯಣರಾವ ಕಲಮದಾನಿ, ಹುಚ್ಚರಾವ ಬೆಂಗೇರಿ ಹಾಗೂ ಬೆಟಗೇರಿ ಕೃಷ್ಣಶರ್ಮರು ಮಾಡಿದರು. ಇದರೊಂದಿಗೆ, ಭಜನೆಯ ದೃಷ್ಟಿಯಿಂದ ಅನುಕೂಲವಾಗುವಂತೆ ನಾಡಿನ ವಿವಿಧ ಭಾಗಗಳಲ್ಲಿ ದಾಸಸಾಹಿತ್ಯಾಸಕ್ತರು ತಮತಮಗೆ ಬೇಕಾದ ಪದಗಳ ಸಂಗ್ರಹವನ್ನು ಪ್ರಕಟಿಸತೊಡಗಿದರು. ಇದರಿಂದಾಗಿ ನಾಡಿನ ಬಹುತೇಕ ಭಾಗಗಳಲ್ಲಿ ಬೇರೆ ಬೇರೆ ದಾಸರು ಇದ್ದುದು ಮತ್ತು ಅವರು ಹಾಡುಗಳನ್ನು ಬರೆದಿದ್ದಾರೆ ಎಂಬುದು ಗಮನಕ್ಕೆ ಬಂದಿತು. ಅದು 'ದಾಸ-ಪೀಳಿಗೆ' ಯನ್ನು ಗುರುತಿಸಲು ಸಹಾಯವಾಯಿತು.

ಶ್ರೀಪಾದರಾಜರಿಂದ ಪ್ರಾರಂಭವಾದ ಕೀರ್ತನೆಗಳ ರಚನೆಯ ಸಂಪ್ರದಾಯವು ಈ ಐದುನೂರು ವರ್ಷಗಳಲ್ಲಿ ಸುಮಾರು ಮುನ್ನೂರು ಜನ ದಾಸರು ಹುಟ್ಟಿ ಮೂವತ್ತು ಸಾವಿರಕ್ಕೂ ಮಿಕ್ಕ ಕೀರ್ತನೆಗಳನ್ನು ರಚಿಸಿದ್ದಾರೆಂದರೆ ಅವುಗಳ ಮಹತ್ವ ಗೊತ್ತಾಗದೇ ಇರದು.

ಇಡಿಯಾಗಿ-ಬಿಡಿಬಿಡಿಯಾಗಿ ವ್ಯಕ್ತಿಗಳಿಂದ, ಸಂಘ ಸಂಸ್ಥೆಗಳಿಂದ ದಾಸರ ಪದಗಳು ಪ್ರಕಟವಾಗುತ್ತ ಬರುತ್ತಿರುವಾಗಲೇ ಪುರಂದರ ಕನಕದಾಸರ ಚತುಃಶತಮಾನೋತ್ಸವ ಸಂದರ್ಭಗಳಲ್ಲಿ ಅವರ ಸಮಗ್ರ ಕೃತಿಗಳು ಸರ್ಕಾರದಿಂದ ಹಾಗೂ ವಿವಿದ ಸಂಘ ಸಂಸ್ಥೆಗಳಿಂದ ಪ್ರಕಟವಾದವು. ಆದರೆ ಸಮಗ್ರ ದಾಸಸಾಹಿತ್ಯದ ಪ್ರಕಟಣೆ ಈವರೆಗೆ ಆಗಲೇ ಇಲ್ಲವೆಂದು ಹೇಳಬಹುದು. ಇಂಥದೊಂದು ಪ್ರಯತ್ನವನ್ನು ಮೂರು ದಶಕಗಳ ಹಿಂದೆ ಮೈಸೂರು ವಿಶ್ವವಿದ್ಯಾನಿಲಯವು ಕೈಗೊಂಡಿತು. ವೈಜ್ಞಾನಿಕ ರೀತಿಯಲ್ಲಿ ಶಾಸ್ತ್ರ ಶುದ್ಧವಾಗಿ ದಾಸಸಾಹಿತ್ಯವನ್ನು ಪ್ರಕಟಿಸುವುದರ ಅಡಿಗಲ್ಲನ್ನು ಹಾಕಿದ ಶ್ರೇಯಸ್ಸು ಆ ಮಾಲೆಯ ಸಂಪಾದಕರಾಗಿದ್ದ ಡಾ. ಜಿ. ವರದರಾಜರಾವ್ ಅವರಿಗೆ ಸಲ್ಲಬೇಕು. ಇದುವರೆಗೆ ಕೆಲವು ಸಂಪುಟಗಳು ಮಾತ್ರ ಬಂದಿವೆ. ಆದರೆ ಹಸ್ತಪ್ರತಿಗಳಲ್ಲಿ ವಿಪುಲ ದಾಸಸಾಹಿತ್ಯವನ್ನು ಸಂಗ್ರಹಿಸಲಾಗಿದೆ. ಅದೇ ರೀತಿಯಲ್ಲಿ ಲಿಂಗಸುಗೂರಿನಲ್ಲಿ, ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಹಾಗೂ ತಿರುಪತಿಯ ದಾಸಸಾಹಿತ್ಯ ಪ್ರೊಜೆಕ್ಟದಲ್ಲಿ ಕೂಡ ವಿಪುಲ ಹಸ್ತಪ್ರತಿಗಳ ಸಂಗ್ರಹವಿದೆ. ಇವರೆಲ್ಲರ ಸಹಕಾರದಿಂದ ಈಗ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸಿ ಪ್ರಕಟಿಸುವ ಸಾಹಸದ ಕಾರ್ಯವನ್ನು ಮಾಡುತ್ತಿದೆ.

## ಸಂಪುಟ ಯೋಜನೆ

ದಾಸಸಾಹಿತ್ಯದ ಪರಿಷ್ಕರಣ ಕಾರ್ಯ ತುಂಬ ಜಟಿಲವಾದುದೆಂಬುದು ಸಂಪಾದಕ ಮಂಡಳಿಯ ಪ್ರಥಮ ಸಭೆಯಲ್ಲಿಯೇ ಅನುಭವಕ್ಕೆ ಬಂದಿತು. ಕಳೆದ ಐದು ಶತಮಾನಗಳಿಂದ ನಿರಂತರ ಹರಿದು ಬಂದ ದಾಸಸಾಹಿತ್ಯ ರಚನೆಯಲ್ಲಿಯ ದಾಸರ ಹಾಗೂ ದಾಸರ ಪದಗಳ ಸಂಖ್ಯಾಬಾಹುಳ್ಯವನ್ನು ಗಮನಿಸಿ ಅದಕ್ಕೊಂದು ಕಾಲಮಿತಿಯನ್ನು ಹಾಕಿಕೊಳ್ಳುವುದು ಅನಿವಾರ್ಯವಾಯಿತು. ಹಾಗೆ ದಾಸಸಾಹಿತ್ಯದ ಪ್ರಾರಂಭ ಕಾಲದಿಂದ ೧೯ನೆಯ ಶತಮಾನದ ಅಂತ್ಯದ ವರೆಗೆ ರಚಿತಗೊಂಡ ವೈದಿಕ ಪರಂಪರೆಯ ದಾಸರ ಪದಗಳನ್ನು ಸಂಗ್ರಹಿಸುವುದೆಂದು, ಅದರಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಪರಂಪರೆಯ ಲಭ್ಯವಿದ್ದ ಹಾಡುಗಳನ್ನು ಸೇರಿಸಿಕೊಂಡು ೩೫ ಸಂಪುಟಗಳಲ್ಲಿ ಪ್ರಕಟಿಸುವುದೆಂದು ನಿರ್ಧರಿಸಲಾಯಿತು.

ಈ ೩೫ ಸಂಪುಟಗಳನ್ನು*, ಸಂಪಾದಕ ಮಂಡಳಿಯ ಸದಸ್ಯರಲ್ಲದೆ ನಾಡಿನ ಹಲವಾರು ವಿದ್ವಾಂಸರನ್ನು ಸಂಪಾದಿಸಿ ಕೊಡಲು ಕೇಳಿಕೊಳ್ಳಲಾಯಿತು.

ಇಂಥದೊಂದು ಬೃಹತ್ ಕಾರ್ಯವನ್ನು ಕೈಗೊಂಡಾಗ ಕೆಲವು ಮಾರ್ಗದರ್ಶಿ ಸೂತ್ರಗಳನ್ನು ಅನುಸರಿಸುವುದು ಅನಿವಾರ್ಯವಾಗುತ್ತದೆ. ಅನ್ಯ ಮತ-ಪಂಥಗಳ ಟೀಕೆಗಳು ಬಂದಿದ್ದರೆ ಅಂಥ ಹಾಡುಗಳನ್ನು ಕೈಬಿಡಬೇಕು. ಒಂದೇ ಹಾಡು ಇಬ್ಬರು ದಾಸರ ಅಂಕಿತದಲ್ಲಿ ಪ್ರಚಲಿತದಲ್ಲಿದ್ದರೆ, ಎರಡೂ ಕಡೆಗೆ ಅವುಗಳನ್ನು ಕೊಟ್ಟು ಕೆಳಗೆ 'ಈ ಕೀರ್ತನೆ . . . . ದಾಸರ ಅಂಕಿತದಲ್ಲೂ ಇದೆ' ಎಂದೂ ಸೂಚಿಸಬೇಕು. ದ್ವೈತ ಸಂಪ್ರದಾಯದ ಕೀರ್ತನೆಗಳನ್ನು ಪ್ರಕಟಿಸುವಾಗ ದೇವ-ಗುರು ತಾರತಮ್ಯವನ್ನು ಪಾಲಿಸಬೇಕು ; ಉಳಿದೆಡೆ ಗಣೇಶ ಪ್ರಾರ್ಥನೆ, ಭಗವಂತನ ನಾಮಸಂಕೀರ್ತನೆ, ಆತ್ಮನಿವೇದನೆ, ಲೋಕನೀತಿ, ತಾತ್ವಿಕ, ಕಥನಾತ್ಮಕ, ಸಂಪ್ರದಾಯ ಹಾಗೂ ವಿಶೇಷ ಹಾಡುಗಳೆಂದು ಮುಂತಾಗಿ ವಿಂಗಡಿಸಿ ಕೊಡಬೇಕು - ಎಂಬುದಾಗಿ ನಿರ್ಧರಿಸಿತು.

---

*ಇವುಗಳಲ್ಲಿ ಕೆಲವುಗಳಿಗೆ ಎರಡು ಮೂರು ಭಾಗಗಳಿವೆ.

ಪ್ರತಿಯೊಂದು ಸಂಪುಟದ ಪ್ರಾರಂಭದಲ್ಲಿ ಹಾಡುಗಳ ಪರಿವಿಡಿಯನ್ನು ಕೊಟ್ಟು ಪ್ರಸ್ತಾವನೆಯಲ್ಲಿ ಆಯಾ ದಾಸರ ಸಂಕ್ಷಿಪ್ತ ಜೀವನ ಚರಿತ್ರೆ, ಕೃತಿಗಳ ಸಮೀಕ್ಷೆ, ಶೈಲಿ ಇತ್ಯಾದಿಗಳನ್ನು ವಿವರಿಸಿ, ಗ್ರಂಥಸಂಪಾದನೆಯ ಆಕರಗಳನ್ನೂ ಕೊಡಲು ಪ್ರಯತ್ನಿಸಲಾಗಿದೆ. ಕೊನೆಯಲ್ಲಿ ಬರುವ ಅನುಬಂಧಗಳಲ್ಲಿ ಕಠಿಣ ಶಬ್ದಗಳ ಅರ್ಥ, ಟಿಪ್ಪಣಿ ಮತ್ತು ವಿಶಿಷ್ಟ ಅಂಕಿತನಾಮಗಳ ಸೂಚಿ ಹಾಗೂ ಹಾಡುಗಳ ಅಕಾರಾದಿಯನ್ನು ಕೊಡಲಾಗಿದೆ.

ಈ ಸಂಪುಟಗಳು ಜನಪ್ರಿಯ ಆವೃತ್ತಿಗಳಾಗಿರುವುದರಿಂದ ಲಭ್ಯವಿರುವ ಪಾಠಾಂತರಗಳಲ್ಲಿ ಯೋಗ್ಯವಾದುದನ್ನು ಸ್ವೀಕರಿಸಿದೆ. ಅನ್ಯ ಪಾಠಗಳನ್ನು ಅಡಿಯಲ್ಲಿ ನಮೂದಿಸಿಲ್ಲ. ಆದರೂ ಇವು ವಿದ್ವಜ್ಜನಪ್ರಿಯ ಆವೃತ್ತಿಗಳೂ ಆಗಬೇಕೆಂಬ ರೀತಿಯಲ್ಲಿ ಈ ಸಂಪುಟಗಳನ್ನು ರೂಪಿಸಲು ಪ್ರಯತ್ನಿಸಿದ್ದೇವೆ.

## ಕೃತಜ್ಞತೆಗಳು

ಕಳೆದ ನೂರೈವತ್ತು ವರ್ಷಗಳಿಂದ ಪಾಶ್ಚಾತ್ಯ ಮಿಶನರಿಗಳಿಂದ ಹಿಡಿದು ಈ ಮೊದಲು ಉಲ್ಲೇಖಿಸಿದ ನಾಡಿನ ಅನೇಕ ವಿದ್ವಜ್ಜನರು, ಸಂಘ ಸಂಸ್ಥೆಗಳು, ವಿಶ್ವವಿದ್ಯಾಲಯಗಳು ದಾಸಸಾಹಿತ್ಯ ಕುರಿತು ನಿರಂತರ ದುಡಿದು ವಿಪುಲ ಸಾಮಗ್ರಿಯನ್ನು ಪ್ರಕಟಿಸಿದ್ದಾರೆ. ಈ ಎಲ್ಲ ವ್ಯಕ್ತಿಗಳಿಗೂ ಸಂಘ ಸಂಸ್ಥೆಗಳಿಗೂ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು ಸಲ್ಲುತ್ತವೆ.

ಈ ಯೋಜನೆ ಅಸ್ತಿತ್ವಕ್ಕೆ ಬಂದುದೂ ಒಂದು ವಿಶಿಷ್ಟ ಸಂದರ್ಭದಲ್ಲಿ ಎಂಬುದನ್ನು ಇಲ್ಲಿ ನಮೂದಿಸಬೇಕು. ಕರ್ನಾಟಕ ಸರ್ಕಾರವು ನಾಡಿನ ಖ್ಯಾತ ಸಂಶೋಧಕರಾದ ಡಾ. ಎಂ. ಎಂ. ಕಲಬುರ್ಗಿ ಅವರ ಪ್ರಧಾನ ಸಂಪಾದಕತ್ವದಲ್ಲಿ ಸಮಗ್ರ ವಚನಸಾಹಿತ್ಯವನ್ನು ಪ್ರಕಟಿಸಿತಷ್ಟೇ. ಅವರೇ 'ದಾಸಸಾಹಿತ್ಯ' ಯೋಜನೆಯನ್ನು ರೂಪಿಸಿ ಶ್ರೀ ಪೇಜಾವರ ಮಠಾಧೀಶರಾದ ಶ್ರೀ ವಿಶ್ವೇಶತೀರ್ಥರ ಮೂಲಕ ಈ ಯೋಜನೆಯತ್ತ ಸರ್ಕಾರದ ಗಮನ ಸೆಳೆದರು. ಇದನ್ನು ಅರಿತ ಅಂದಿನ ಮುಖ್ಯಮಂತ್ರಿಗಳೂ ಅನಂತರ ಭಾರತದ ಪ್ರಧಾನಮಂತ್ರಿಗಳೂ ಆಗಿದ್ದ ಸನ್ಮಾನ್ಯ ಶ್ರೀ ಹೆಚ್. ಡಿ. ದೇವೇಗೌಡರು ಮುಧೋಳದಲ್ಲಿ (೧೯೯೫) ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸರ್ಕಾರವು ಸಮಗ್ರ

ದಾಸಸಾಹಿತ್ಯವನ್ನು ಪ್ರಕಟಿಸಲು ಒಪ್ಪಿಕೊಂಡಿದೆ ಎಂದು ಘೋಷಿಸಿದರು. ಅದರಂತೆ ಸರ್ಕಾರವು ಒಂಬತ್ತು ಜನರ ಸಂಪಾದಕ ಮಂಡಳಿಯನ್ನು ರಚಿಸಿತು. ಅದರಲ್ಲಿ ಡಾ. ಶ್ರೀನಿವಾಸ ಹಾವನೂರ, ಡಾ. ಟಿ.ಎನ್. ನಾಗರತ್ನ ಮತ್ತು ಪ್ರೊ. ವಸಂತ ಕುಷ್ಟಗಿ ಅವರನ್ನು ಸಮಿತಿಯ ಕಾರ್ಯನಿರ್ವಾಹಕ ಸಂಪಾದಕರೆಂದು ನಿಯಮಿಸಿತು. ಜೊತೆಗೆ ಈ ಮೊದಲು ಇಂಥ ಕಾರ್ಯವನ್ನು ಯಶಸ್ವಿಯಾಗಿ ಮಾಡಿದ ಅನುಭವಿ ಡಾ. ಎಂ. ಎಂ. ಕಲಬುರ್ಗಿ, ದಾಸಸಾಹಿತ್ಯದಲ್ಲಿ ನುರಿತ ವಿದ್ವಾಂಸರುಗಳಾದ ಪ್ರೊ. ಎಂ. ರಾಜಗೋಪಾಲಾಚಾರ್ಯ, ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ, ಡಾ. ಮಂದಾಕಿನಿ, ಪ್ರೊ. ಸುಧಾಕರ ಮತ್ತು ಡಾ. ಬಸವರಾಜ ಸಬರದ ಅವರನ್ನು ಸಂಪಾದಕ ಮಂಡಳಿಯ ಸದಸ್ಯರನ್ನಾಗಿ ನಿಯಮಿಸಿತು. ಅವರುಗಳ ನಿರಂತರ ಪರಿಶ್ರಮದ ಫಲವೇ ಈ ಸಮಗ್ರ ದಾಸಸಾಹಿತ್ಯದ ಪ್ರಕಟಣಾ ಕಾರ್ಯ. ಈ ಪ್ರಕಟಣಾ ಕಾರ್ಯದಲ್ಲಿ ಅವರುಗಳೊಂದಿಗೆ ೩೫ ಸಂಪುಟಗಳನ್ನು ಸಿದ್ಧಪಡಿಸುವಲ್ಲಿ ಸರ್ವಶ್ರೀ ಅರಳುಮಲ್ಲಿಗೆ ಪಾರ್ಥಸಾರಥಿ, ಡಾ. ಡಿ. ಆರ್. ಪಾಂಡುರಂಗ, ಡಾ. ಅನಂತಪದ್ಮನಾಭರಾವ್, ಪ್ರೊ. ಬಿ. ಆರ್. ಕುಲಕರ್ಣಿ, ಡಾ. ಕೆ.ಜಿ. ವೆಂಕಟೇಶ್, ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಕೆ. ಗೋಕುಲನಾಥ, ಡಾ. ಕೆ. ಎಂ. ಕೃಷ್ಣರಾವ್, ಶ್ರೀ ಹಣಮಂತ ತಾಸಗಾಂವಕರ್, ಪ್ರೊ. ನಾ. ಗೀತಾಚಾರ್ಯ, ಡಾ. ಸ್ವಾಮಿರಾವ್ ಕುಲಕರ್ಣಿ, ಶ್ರೀ ಹನುಮನಗೌಡ, ಶ್ರೀ ಎ. ಎನ್. ಅನಂತಸ್ವಾಮಿರಾವ್, ಶ್ರೀ ನಾರಾಯಣಾಚಾರ್ಯ ಧೂಳಖೇಡ, ಶ್ರೀ ಶಾಶ್ವತಸ್ವಾಮಿ ಮುಕ್ಕುಂದಿಮಠ, ಶ್ರೀ ಕೆ. ಎಸ್. ವೆಂಕಟೇಶ್ ಮತ್ತು ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ ಅವರುಗಳು ಹಾಗೂ ಶ್ರೀಮತಿಯರಾದ ನಳಿನಿ ವೆಂಕಟೇಶ್, ಮೀನಾರಾವ್, ಲೀಲಾವತಿ ಎಸ್. ರಾವ್, ಡಾ. ಜಯಲಕ್ಷ್ಮಿ ಮಂಗಳಮೂರ್ತಿ, ಡಾ. ಅಕ್ಕಮಹಾದೇವಿ, ಶೀಲಾ ದಾಸ್, ಡಾ. ರಮಾ ಕಲ್ಲೂರಕರ, ಡಾ. ಸೀತಾ ಗುಡೂರ ಕುಲಕರ್ಣಿ, ಹೆಚ್. ಎಸ್. ಪದ್ಮಾ ಮೂರ್ತಿ, ಮತ್ತು ರುಕ್ಮಿಣಿ ಗಿರಿಮಾಜಿ ಅವರುಗಳು ತುಂಬ ಶ್ರಮವಹಿಸಿ ಸಂಪುಟಗಳನ್ನು ಸಿದ್ಧಪಡಿಸಿಕೊಟ್ಟಿದ್ದಾರೆ. ಅವರುಗಳಿಗೆ ಸಂಪಾದಕ ಮಂಡಳಿಯು ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಈ ಮಧ್ಯೆ ಸಂಪಾದಕ ಸಮಿತಿಯ ಸದಸ್ಯರಲ್ಲೊಬ್ಬರಾದ ಪ್ರೊ. ಎಂ. ರಾಜಗೋಪಾಲಾಚಾರ್ಯರು ಮತ್ತು ಡಾ. ಮಂದಾಕಿನಿ ಹಾಗೂ ಸಂಪುಟ ಸಂಪಾದಕರಲ್ಲಿ ಒಬ್ಬರಾದ ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ, ಡಾ. ಕೆ.ಎಂ. ಕೃಷ್ಣರಾವ್, ಶ್ರೀಮತಿ ಪದ್ಮಾ ಮೂರ್ತಿ ಹಾಗೂ ಶ್ರೀ ಹನುಮನಗೌಡ ಮಾನ್ವಿ ಅವರು ನಮ್ಮನ್ನು ಅಗಲಿದ್ದು ದುಃಖದ ವಿಷಯವಾಗಿದೆ.

ಆಯಾ ಕಾಲದಲ್ಲಿ ಈ ಯೋಜನೆಗೆ ಸಹಕರಿಸಿದ ಹಾಗೂ ಈ ಯೋಜನೆಯ ಪರಿಕಲ್ಪನೆ ಯಶಸ್ವಿಯಾಗಿ ಕಾರ್ಯಾನುಷ್ಠಾನಕ್ಕೆ ಬರುವ ದಿಸೆಯಲ್ಲಿ ಸಹಕರಿಸಿದ ಈ ಹಿಂದಿನ ಸರ್ಕಾರದ ಮಾನ್ಯ ಮುಖ್ಯಮಂತ್ರಿಗಳಿಗೆ ಹಾಗೂ ವಿಶೇಷವಾಗಿ ಇಂದಿನ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಎಸ್. ಎಂ. ಕೃಷ್ಣ ಅವರಿಗೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವೆ ಶ್ರೀಮತಿ ರಾಣಿ ಸತೀಶ್ ಅವರಿಗೆ, ಇಲಾಖೆಯ ಹಿಂದಿನ ಕಾರ್ಯದರ್ಶಿಗಳಾದ ಶ್ರೀ ಚಂದ್ರಹಾಸ ಗುಪ್ತ ಮತ್ತು ಈಗಿನ ಕಾರ್ಯದರ್ಶಿಗಳಾದ ಶ್ರೀ ಸಿ. ಎಸ್. ಕೇದಾರ್ ಅವರಿಗೆ ನಮ್ಮ ನಮನಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ಈ ಯೋಜನೆಗೆ ನೆರವಾದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರುಗಳು ಹಾಗೂ ಈಗಿನ ನಿರ್ದೇಶಕರಾದ ಶ್ರೀ ವೈ. ಕೆ. ಮುದ್ದುಕೃಷ್ಣ, ಜಂಟಿ ನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಮತ್ತು ಡಾ. ಮಂಜುಳಾ ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ನೆರವಾದ ಎಂ. ಎಸ್. ಐ. ಎಲ್. ಸಂಸ್ಥೆಯ ಅಧಿಕಾರಿ ಹಾಗೂ ಸಿಬ್ಬಂದಿವರ್ಗಕ್ಕೆ, ವಿಶೇಷವಾಗಿ ಶ್ರೀ ಎಂ. ರವಿಶಂಕರ್, ವಿಶೇಷಾಧಿಕಾರಿ, ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ.

ಇದು ಒಂದು ದೊಡ್ಡ ಯೋಜನೆ. ಇದರ ಸಂಪಾದನೆಯ ಸಮಸ್ಯೆಗಳು ದೊಡ್ಡವು. ಪಾಠಾಂತರ, ರೂಪಾಂತರ, ಪ್ರಕ್ಷಿಪ್ತತೆ ಇತ್ಯಾದಿಗಳ ಗೊಂದಲಕ್ಕೆ ಗುರಿಯಾಗುತ್ತ ಬಂದ ವ್ಯಾಪಕ ಪ್ರಮಾಣದ ಈ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸುವುದು, ಪುನರುಕ್ತಿಗಳನ್ನು ಗುರುತಿಸುವುದು, ಅಂಕಿತ ಪಲ್ಲಟಗಳನ್ನು ಸರಿಪಡಿಸುವುದು, ಪ್ರಕ್ಷಿಪ್ತಗಳನ್ನು ದೂರೀಕರಿಸುವುದು, ಕೊನೆಯದಾಗಿ ಕೀರ್ತನೆಗಳನ್ನು ಶುದ್ಧೀಕರಿಸುವುದು ಎಂಥವರನ್ನೂ ಧೈರ್ಯಗೆಡಿಸುವ ಕೆಲಸ. ಹೀಗಿದ್ದೂ ದಾಸಸಾಹಿತ್ಯದ ಮೇಲಿನ ಗೌರವ ಪ್ರೀತಿಗಳು ನಮ್ಮಿಂದ ಈ ಕೆಲಸ ಮಾಡಿಸಿದೆ. ನಮ್ಮ ಶಕ್ತಿಗೆ ಮೀರಿ ಉಳಿದಿರಬಹುದಾದ ದೋಷಗಳನ್ನು ಮನ್ನಿಸಬೇಕೆಂದು ಕೋರುತ್ತೇವೆ. ಈ ಮೂವತ್ತೈದು ಸಂಪುಟಗಳನ್ನು ಸಹೃದಯ ಲೋಕಕ್ಕೆ ಅರ್ಪಿಸುತ್ತೇವೆ. ಸಮಗ್ರ ದಾಸಸಾಹಿತ್ಯವು ಸುಲಭ ಬೆಲೆಯಲ್ಲಿ ಕನ್ನಡಿಗರ ಮನೆ–ಮನಗಳಲ್ಲಿ ಬೆಳಗಲೆಂದು ಹಾರೈಸುತ್ತೇವೆ.

ಸಂಪಾದಕ ಮಂಡಳಿ

# ಪರಿವಿಡಿ

# ಪ್ರಸ್ತಾವನೆ

## ಶ್ರೀ ಮೋಹನದಾಸರು (ಕ್ರಿ.ಶ. ೧೭೩೦-೧೮೧೫)

ಬಳ್ಳಾರಿಜಿಲ್ಲೆಯ 'ಚಿಪ್ಪಗಿರಿ' ಮೋಹನದಾಸರ ಸ್ಥಳ. ಅಲ್ಲಿ ಭೀಮಪ್ಪ ನಾಯಕನೆಂಬ ಶ್ರೀಮಂತನು ಬೆಳ್ಳಿ ಬಂಗಾರದ ವ್ಯಾಪಾರ ಮಾಡುತ್ತಿದ್ದನು. ಕಾಲಾಂತರದಲ್ಲಿ ತನ್ನ ಗರ್ಭಿಣಿ ಹೆಂಡತಿಗೆ ಜೀವನೋಪಾಯಕ್ಕೆ ಆಸ್ತಿ ಕೊಡದೆ, ತನ್ನ ತಮ್ಮಂದಿರ ವಶಕ್ಕೆ ಐಶ್ವರ್ಯವನ್ನು ಒಪ್ಪಿಸಿ, ಮೃತನಾದನು. ಅಣ್ಣನ ಆಸ್ತಿಯನ್ನು ಪಡೆದುಕೊಂಡ ತಮ್ಮಂದಿರು ಅತ್ತಿಗೆಯನ್ನು ಮನೆಯಿಂದ ಹೊರ ಹಾಕಿದರು. ತನ್ನ ತೌರುಮನೆಯಲ್ಲಿ ಗಂಡುಮಗುವಿಗೆ ಜನ್ಮವಿತ್ತಳು. ಅವಳ ತಾಯಿಯೂ ತೀರಿಕೊಂಡ ಮೇಲೆ ಅನಾಥಳಾದ ಆ ಹೆಂಗಸು ತನ್ನ ಮಗನೊಂದಿಗೆ ಆನೆಗೊಂದಿಗೆ ಬಂದಳು. ಸರಿಯಾದ ಆರೈಕೆಯಿಲ್ಲದೆ, ಮಗುವಿನ ಮೈಯೆಲ್ಲಾ ಕಜ್ಜಿಯಾಗಿ ದುರ್ಗಂಧ ಬರುತ್ತಿತ್ತು. ಅದರ ಸಂಪರ್ಕದಿಂದಾಗಿ ತಾಯಿಯೂ ಆ ರೋಗಕ್ಕೆ ತುತ್ತಾಗಿದ್ದಳು.

ಆ ಸಮಯಲ್ಲಿ ಶ್ರೀವಿಜಯದಾಸರು ಚಕ್ರತೀರ್ಥದ ಬಳಿಯಲ್ಲಿ ಶ್ರೀಪುರಂದರದಾಸರ ಆರಾಧನೆಯ ಅಂಗವಾಗಿ ಅನ್ನಸತ್ರವನ್ನು ಹಮ್ಮಿಕೊಂಡಿದ್ದರು. ಇದನ್ನು ತಿಳಿದ ಆ ಹೆಂಗಸು ಅಲ್ಲಿಗೆ ಬಂದಳು. ರೋಗದ ಕಾರಣ ಯಾರೂ ಅವಳನ್ನು ಹತ್ತಿರ ಸೇರಿಸುತ್ತಿರಲಿಲ್ಲ. ಊಟದ ಮಧ್ಯದಲ್ಲಿ ಆದ ಅವಮಾನದಿಂದ ಜೀವನದಲ್ಲಿ ಜಿಗುಪ್ಸೆ ಹೊಂದಿ ಸಾಯಲು ನಿರ್ಧರಿಸಿದಳು. ಅವಳು ಆ ಪ್ರಯತ್ನದಲ್ಲಿದ್ದಾಗ ಅದನ್ನು ತಡೆದ ಶ್ರೀವಿಜಯದಾಸರು ಅವಳಿಂದ ಆ ಮಗುವನ್ನು ತಾವೇ ಪಡೆದು 'ಮೋಹನ' ಎಂದು ಹೆಸರಿಟ್ಟರು. ಆ ಹೆಂಗಸನ್ನು ತಂಗಿಯಂತೆ ಮನೆಯಲ್ಲಿಟ್ಟುಕೊಂಡರು. ಆ ಮಗುವೇ ಮುಂದೆ 'ಮೋಹನದಾಸ'ರೆಂದು ಪ್ರಖ್ಯಾತಿ ಪಡೆಯಿತು.

ಶ್ರೀವಿಜಯದಾಸರಿಂದ 'ಶ್ರೀಮೋಹನ ವಿಠಲ' ಎಂಬ ಅಂಕಿತ ಪಡೆದು ನೂರಾರು ಕೀರ್ತನೆಗಳನ್ನು ರಚಿಸಿದರು. ಮುಂದೆ ತಮಗೆ ದೊರೆತ ಐಶ್ವರ್ಯವನ್ನು ತ್ಯಾಗ ಮಾಡಿ, ಹೆಂಡತಿಯೊಂದಿಗೆ ತಂಬೂರಿ ಹಿಡಿದು ಹೊರಟರು. ಇವರು ಮಾಂಡವ್ಯ ಋಷಿಗಳ ಅಂಶವೆಂದು ತಿಳಿದುಬರುತ್ತದೆ. ಇವರಿಗೆ 'ವೆಂಕಪ್ಪ

ದಾಸ'ನೆಂಬ ಹೆಸರಿನ ಮಗನಿದ್ದನು. ತಂದೆಯಿಂದ ಉಪದೇಶ ಪಡೆದು 'ತಂದೆ ಮೋಹನ ವಿಠಲ' ಎಂಬ ಅಂಕಿತದಿಂದ ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ.

ಒಂದು ಸಲ ಮೋಹನದಾಸರಿಗೆ ಒದಗಿದ ಅಪಮೃತ್ಯುವನ್ನು ಶ್ರೀವಿಜಯ ದಾಸರು ಪರಿಹರಿಸಿದಂತೆ ತಿಳಿದುಬರುತ್ತದೆ. ಆಗ ಮೋಹನದಾಸರು ಗುರು ಗಳನ್ನು ಕುರಿತು –

'ತಂದೆ ವಿಜಯರಾಯಾ । ಈ ವೇಳೆಗೆ । ಬಂದೆ ವಿಜಯ ರಾಯಾ.., – ಎಂಬ ಕೀರ್ತನೆ ರಚಿಸಿದ್ದಾರೆ. ಅಲ್ಲದೇ ಅವರೇ ರಚಿಸಿದ –

'ನಿನ್ನ ಪಾದವನಂಬಿ ಅನ್ಯರಾಶ್ರಯವೇಕೊ ।
ಚನ್ನಗುರು ವಿಜಯರಾಯಾ ।

ಎಂಬ ಕೀರ್ತನೆಯಲ್ಲಿ ತಮ್ಮ ವಂಶವನ್ನು ಕುರಿತು, ಶ್ರೀವಿಜಯದಾಸರು ಅನುಗ್ರಹಿಸಿದ್ದನ್ನು ಹೇಳಿದ್ದಾರೆ. ಮೋಹನದಾಸರಿಗೆ ಮಧ್ವವರದ ವಿಠಲ, 'ವಿರಜಿ ಪ್ರಾಣೇಶವಿಠಲ'ರು ಶಿಷ್ಯರಾಗಿದ್ದರು.

ಇವರು ಅನೇಕ ಕೀರ್ತನೆ, ಸುಳಾದಿ, ಉಗಾಭೋಗಗಳನ್ನು ರಚಿಸಿದ್ದಾರೆ.

## ಶ್ರೀವೇಣುಗೋಪಾಲದಾಸರು (ಕ್ರಿ.ಶ. ೧೭೩೨)

ಕ್ರಿ.ಶ. ೧೮ ನೆಯ ಶತಮಾನದಲ್ಲಿ ಬಾಳಿದವರು ಶ್ರೀ ವೇಣುಗೋಪಾಲ ದಾಸರು. ಆದವಾನಿಯ ನವಾಬನ ಆಸ್ಥಾನದಲ್ಲಿ ದಿವಾನರಾಗಿದ್ದ ಶ್ರೀ ರುಕ್ಮಣ್ಣ ನವರ ಎರಡನೆಯ ಮಗನಾಗಿ ಜನಿಸಿದರು. ತಿಮ್ಮಣ್ಣನೆಂಬುದು ಇವರ ಹೆಸರು. ಧಾರ್ಮಿಕ ಪರಂಪರೆಯ, ಸಾತ್ವಿಕ ವಾತಾವರಣದಲ್ಲಿ ಬಾಳಿದರು.

ಶ್ರೀ ವಿಜಯದಾಸರು ಒಮ್ಮೆ ಆದವಾನಿಗೆ ಬಂದಿದ್ದರು. ಆಗ ದಿವಾನರ ಮನೆಯಲ್ಲಿ ಬಂದಿಳಿದಿದ್ದರು. ಆಗ ತಮಗೆ ನಮಸ್ಕರಿಸಿದ ಬಾಲಕನನ್ನು ಆಶೀರ್ವದಿಸುತ್ತಾ, ಏನು ಪಂಗನಾಮದ ತಿಮ್ಮಣ್ಣ ಎಂದರು. ಪಂಗನಾಮ ಎಂದರೆ ತ್ರಿಪುಂಡ್ರನಾಮ. ಶ್ರೀ ತಿಮ್ಮಣ್ಣ ದಾಸರು ಹಿಂದಿನ ಜನ್ಮದಲ್ಲಿ ಶ್ರೀವೈಕುಂಠ ದಾಸರಾಗಿದ್ದು, ಪಂಗನಾಮವನ್ನು ಹಚ್ಚಿಕೊಂಡಿರುತ್ತಿದ್ದರು. ಆ ಪೂರ್ವದ ಸ್ಮರಣೆಯನ್ನು ಶ್ರೀವಿಜಯದಾಸರು ಪಂಗನಾಮ ಎಂಬ ಪದದಿಂದ ಸೂಚಿಸಿ ದರೆಂದು ತಿಳಿದು ಬರುತ್ತದೆ. ಇವರ ಅನುಗ್ರಹದ ಅನಂತರ ತಿಮ್ಮಣ್ಣನವರು ಆಧ್ಯಾತ್ಮಿಕದಲ್ಲಿ ಆಸಕ್ತರಾದರು. ಅವರ ಇಪ್ಪತ್ನಾಲ್ಕನೆಯ ವಯಸ್ಸಿನಲ್ಲಿ

ಶ್ರೀವಿಜಯದಾಸರು ಶ್ರೀವೇಣುಗೋಪಾಲ ವಿಠಲ ಎಂಬ ಅಂಕಿತ ಪ್ರದಾನ ಮಾಡಿದರು. ಈ ಅಂಕಿತವಿಟ್ಟುಕೊಂಡು ಮೊದಲು ಗೋಪಾಲ ಗೋಪಾಲ ಎಂಬ ಕೀರ್ತನೆಯನ್ನು ರಚಿಸಿದರು.

ತಂದೆಯ ಅನಂತರ ವಂಶದ ಅಧಿಕಾರದಂತೆ ಇವರು ಆದವಾನಿಯ ಬಸಾಲತ್ ಜಂಗನ ದಿವಾನರಾದರು. ಆದರೆ ದೊರೆಯ ಕ್ರೂರ ಕೃತ್ಯಗಳಿಂದ, ದುರಾಚಾರಗಳಿಂದ ಬೇಸತ್ತು ಲೌಕಿಕ ವೃತ್ತಿಯಿಂದ ನಿವೃತ್ತರಾಗಲು ಬಯಸಿದರು. ಆದರೆ ವಿಜಯದಾಸರು ನಮ್ಮ ನಮ್ಮ ಕರ್ಮಫಲಗಳನ್ನು ನಾವು ಪೂರೈಸಬೇಕೆಂದು ಹೇಳಿದರು. ಆದ್ದರಿಂದ ಗುರುಗಳ ಆಜ್ಞೆಯಂತೆ ದಿವಾನರಾಗಿ ಮುಂದುವರಿಯ ಬೇಕಾಯಿತು. ಈ ನೋವನ್ನು 'ನಿನ್ನ ನಂಬಿದ ನರಗೆ ಅನ್ಯರಾಶ್ರಯವೇಕೋ' ಎಂಬ ಕೀರ್ತನೆಯಲ್ಲಿ, ಗುರುಗಳಲ್ಲಿ ತೋಡಿಕೊಂಡಿದ್ದಾರೆ.

ಒಮ್ಮೆ ಕಾರ್ತಿಕಮಾಸದಲ್ಲಿ ತಿಮ್ಮಣ್ಣನವರು ಜ್ಞಾನಸತ್ರವನ್ನು ಹಮ್ಮಿ ಕೊಂಡರು. ಆಗ ಶ್ರೀವಿಜಯದಾಸರು ಮತ್ತು ಶ್ರೀಗೋಪಾಲದಾಸರನ್ನು ಆಹ್ವಾನಿಸಿದ್ದರು. ಆದರೆ ಉತ್ಸವದ ಕಾಲದಲ್ಲಿ ತಿಮ್ಮಣ್ಣನವರು ರೋಗಕ್ಕೆ ತುತ್ತಾದರು. ಆಗ ಗುರುಗಳನ್ನುದ್ದೇಶಿಸಿ ಪ್ರಾರ್ಥಿಸಿದರು. ಶ್ರೀ ವಿಜಯದಾಸರು, 'ನಂಬಿದೆ ಎಲೊ ಹರಿ ಅಂಬರರುಪಹಾರಿ' ಎಂಬ ಸುಳಾದಿಯ ಮೂಲಕ ಹರಿಯನ್ನು ಪ್ರಾರ್ಥಿಸಿ, ಇವರ ಅಪಮೃತ್ಯುವನ್ನು ಪರಿಹರಿಸಿದರು.

ಲೌಕಿಕದಲ್ಲಿ ತಿಮ್ಮಣ್ಣನವರು ಅತ್ಯಂತ ದಕ್ಷರಾದ ದಿವಾನರಾಗಿದ್ದರು. ಆಗ ಪ್ರಬಲರಾಗಿದ್ದ ಮರಾಠರು ಆದವಾನಿಯ ಮೇಲೆ ದಾಳಿ ಮಾಡಲು ಹಿಂದೇಟು ಹಾಕಲು ಕಾರಣ, ತಿಮ್ಮಣ್ಣನಂಥ ದಕ್ಷರೊಂದಿಗೆ ಗೆಲ್ಲುವುದು ಕಷ್ಟ ವೆಂಬುಂದಾಗಿತ್ತು. ತಿಮ್ಮಣ್ಣ ನವರಿಗೆ ಒಬ್ಬನೇ ಪುತ್ರನಿದ್ದನು. ನವಾಬನು ಅವನನ್ನು ಇಸ್ಲಾಂಧರ್ಮಕ್ಕೆ ಸೇರಿಕೊಂಡು, ತನ್ನ ಮಗಳನ್ನು ಕೊಟ್ಟು ವಿವಾಹ ಮಾಡಿದ. ಮುಂದೆ ಅವನೂ ಆದವಾನಿಯ ಪದವಿಯನ್ನು ಅಲಂಕರಿಸಿದ. ಈ ಘಟನೆ ತಿಮ್ಮಣ್ಣ ನವರಿಗೆ ನೋವುಂಟುಮಾಡಿತು. ಆದರೂ ಗುರುಗಳ ಮಾತಿಗೆ ಬೆಲೆಕೊಟ್ಟು, ತಮ್ಮ ವೃತ್ತಿಯಲ್ಲಿ ಮುಂದುವರಿದರು.

ನವಾಬನಿಗೆ ತಿಮ್ಮಣ್ಣನವರಲ್ಲಿ ಗೌರವ, ವಿಶ್ವಾಸಗಳಿದ್ದವು. ಇದನ್ನು ಸಹಿಸದ ಜನ, ಸಲ್ಲದ ವಿಷಯವನ್ನು ಹೇಳಿ, ಅವನಲ್ಲಿ ದ್ವೇಷ ಹುಟ್ಟುವಂತೆ ಮಾಡಿದರು. ಇದರಿಂದಾಗಿ, ತಿಮ್ಮಣ್ಣನವರ ಮಗಳ ಮದುವೆಯಲ್ಲಿ ಅವರ ಮನೆಯನ್ನು ಜಪ್ತು ಮಾಡಲಾಯಿತು. ಈ ಅಪಮಾನದಿಂದ ನೊಂದ ದಾಸರು, ಎಂದಿಗೂ ಲೌಕಿಕ

ವೃತ್ತಿ ಮಾಡೆನೆಂದು ನಿರ್ಧರಿಸಿದರು. 'ಮಲಗವೇಲಿ' ಎಂಬ ಸ್ಥಳದಲ್ಲಿ ಪ್ರಾಯೋಪವೇಶ. ನಿರ್ಜಲವ್ರತವನ್ನು ಕೈಗೊಂಡರು. ನಿರ್ಜಲವ್ರತದಿಂದ ಕಳೆದ ದಿವಸಗಳ ಸಂಖ್ಯೆಯನ್ನು ನಲವತ್ತೆರಡೆಂದು ಬಲ್ಲವರು ಹೇಳುತ್ತಾರೆ.* ಈ ವ್ರತಾಚರಣೆಗಳಲ್ಲಿಯೇ ತಮ್ಮ ಬದುಕನ್ನು ಕೊನೆಗೊಳಿಸಿದರು. ಇಂದಿಗೂ ಅವರ ವಂಶಿಕರು ಆದವಾನಿ ಪ್ರಾಂತ್ಯದಲ್ಲಿದ್ದು, ಪ್ರತಿವರ್ಷ ದಾಸರ ಆರಾಧನೆ ನಡೆಸುತ್ತಾರೆ.

## ಶ್ರೀ ವ್ಯಾಸವಿಠಲರ ಚರಿತ್ರೆ (ಕ್ರಿ.ಶ ೧೭೯೦)
## (ಕಲ್ಲೂರ ಸುಬ್ಬಣ್ಣದಾಸರು)

ಹೈದ್ರಾಬಾದ್ ಕರ್ನಾಟಕದ ರಾಯಚೂರು ಜಿಲ್ಲೆಯ ಮಾನ್ವಿ ತಾಲ್ಲೂಕಿಗೆ ಸೇರಿದ ಸ್ಥಳ ಕಲ್ಲೂರು. ಈ ಗ್ರಾಮದಲ್ಲಿ ಶ್ರೀಲಕ್ಮೀಕಾಂತಾಚಾರ್ಯರೆಂಬ ಪಂಡಿತೋತ್ತಮರ ಭಕ್ತಿಗೆ ಮೆಚ್ಚಿ, ಶ್ರೀಕೊಲ್ಹಾ ಪುರದ ಮಹಾಲಕ್ಷೀ ಸಾಣೇಕಲ್ಲಿನ ಮೇಲೆ ಕಂಗೊಳಿಸಿದ್ದಾಳೆ. ಈ ಪುಣ್ಯಕ್ಷೇತ್ರದ ದೇವಸ್ಥಾನದ ಪಕ್ಕದ ಮನೆಯಲ್ಲಿ 'ಸುಧಾ ಪಂಡಿತರಾದ' ಶ್ರೀಸುಬ್ಬಣ್ಣಾಚಾರ್ಯ್ಯರು ವಾಸಿಸುತ್ತಿದ್ದರು. "ಸುಧಾಯಾಮ ದ್ವಿತೀಯೋಸ್ಮಿ ಯಾದುಪತ್ಯೇ ವಿಶೇಷತಃ" ಎಂಬ ಪ್ರತಿಜ್ಞಾ ಪಾಲಕ ಪಂಡಿತರಲ್ಲಿ ಒಬ್ಬರಾಗಿದ್ದರು. ಆ ಕಾಲದಲ್ಲಿ ವಿದ್ವಾಂಸರಿಗೆ ಪುಣೆಯ ಪೇಷ್ವಾಯಿಗಳು ಆಶ್ರಯದಾತರಾಗಿದ್ದರು.

ಸುಬ್ಬಣ್ಣಾಚಾರ್ಯರ ಕಾಲಕ್ಕಾಗಲೇ ಶ್ರೀವಿಜಯದಾಸರು ಜನಮನದಲ್ಲಿ ಕೀರ್ತಿ, ಗೌರವವನ್ನು ಸಂಪಾದಿಸಿದ್ದರು. ಕನ್ನಡದಲ್ಲಿ ಪದ ರಚಿಸುವ ಹರಿದಾಸರ ಬಗ್ಗೆ ಪಂಡಿತವರ್ಗದಲ್ಲಿ ಅಷ್ಟೊಂದು ಗೌರವ ಇರದಂಥ ಕಾಲ ಅದು. ಅದಕ್ಕೆ ಸುಬ್ಬಣ್ಣಾಚಾರ್ಯರು ಹೊರತಾಗಿರಲಿಲ್ಲ. "ಕೂಸಿ ಮಗ ದಾಸ" ಎಂದು ಶ್ರೀವಿಜಯದಾಸರನ್ನು ಇವರೂ ನಿಂದಿಸುತ್ತಿದ್ದರು. ಈ ಸಂಗತಿ ವಿಜಯದಾಸರಿಗೆ ತಿಳಿದಿದ್ದರೂ, ಯಾವ ವಿಧದ ಪ್ರತಿಕ್ರಿಯೆಯನ್ನೂ ವ್ಯಕ್ತಪಡಿಸಿರಲಿಲ್ಲ. ಪ್ರತಿಭೆ, ದೈವಾನುಗ್ರಹಗಳು ಒಂದಿಲ್ಲೊಂದು ದಿನ ಹೊರಬರಬೇಕು. ಅಂತರ ಒಂದು ಘಟನೆ ಸುಬ್ಬಣ್ಣಾಚಾರ್ಯರ ಬದುಕಿನಲ್ಲಿ ನಡೆಯಿತು. ಅದರಿಂದ ಅವರ ಬದುಕಿನ ದಿಕ್ಕೇ ಬದಲಾಯಿತು.

ಭಗವದನುಗ್ರಹವಾಗಬೇಕಾದರೆ, ಗುರುಗಳು ಶಿಷ್ಯರು ಇದ್ದಲ್ಲಿಗೆ ಹೋಗಿ

---

* ಶ್ರೀಕರ್ನಾಟಕ ಭಕ್ತ ವಿಜಯ – ಬೇಲೂರು ಕೇಶವದಾಸರು – ಪುಟ – ೫೯೭

ಯಾವ ಕಾರ್ಯವನ್ನೂ ಮಾಡಲಾಗಿಲ್ಲ. ಜನರ ಮನದಿಂದ ಹರಿದಾಸರು ಮರೆಯಾಗುವ ಮೊದಲು ಅವರ ಸ್ಮರಣಾರ್ಥ ಸ್ಮಾರಕಗಳನ್ನು ನಿರ್ಮಿಸುವ ಅವಶ್ಯಕತೆಯಿದೆ. ಶ್ರೀವ್ಯಾಸವಿಠಲರ ಜೀವನದ ಬಗ್ಗೆ ಹೆಚ್ಚಿನ ವಿವರಗಳು ಇಂದು ಸಿಗುತ್ತಿಲ್ಲ. ಇಂಥ ಸಂದರ್ಭದಲ್ಲಿ ಅವರ ನೆನಪಿಗಾಗಿರುವ ಒಂದು ಸ್ಥಳವನ್ನಾದರೂ ಜೀರ್ಣೋದ್ಧಾರ ಮಾಡುವತ್ತ ಕನ್ನಡದ ಜನತೆ, ಸರ್ಕಾರ ಪ್ರಯತ್ನಿಸಬೇಕಾಗಿದೆ.

## ಶ್ರೀಗುರುವಿಜಯವಿಠ್ಠಲರು

ಶ್ರೀ ಗುರುವಿಜಯವಿಠಲರ ಚರಿತ್ರೆ (ಕ್ರಿ.ಶ. ೧೮೦೨-೧೮೮೩) ಆದಿಶಿಲೆ (ಮೊದಲಕಲ್ಲು)ಯು ತುಂಗಭದ್ರಾ, ಕೃಷ್ಣನದಿಗಳ ಮಧ್ಯದಲ್ಲಿದೆ. ಇಲ್ಲಿ ಸ್ವಯಂವ್ಯಕ್ತನಾದ ಶ್ರೀವೆಂಕಟೇಶನ ದೇವಾಲಯವು ಊರ ಹೊರಗಿನ ಗುಡ್ಡದಲ್ಲಿದೆ. ಈ ಸ್ಥಳದಲ್ಲಿ ಕುಳಿತು ತಪಸ್ಸು ಮಾಡಿ, ಪ್ರಸಿದ್ಧಿ ಪಡೆದವರು ಶ್ರೀ ಮೊದಲಕಲ್ಲು ಶೇಷದಾಸರು. ಗದ್ವಾಲ ಸಂಸ್ಥಾನದಿಂದ ಐದು ಮೈಲು ದೂರದಲ್ಲಿರುವ 'ದರೂರು' ಎಂಬಲ್ಲಿ ಇವರ ಜನನವಾಯಿತು. ಭಾರದ್ವಾಜ ಗೋತ್ರ ದಲ್ಲಿ, 'ಶೇಷಪ್ಪ' ಎಂಬ ಹೆಸರಿನಿಂದ ಲೋಕಕ್ಕೆ ಪರಿಚಿತರಾದ, ಇವರ ಜನ್ಮ ದಿನಾಂಕ ಕ್ರಿ.ಶ.ಸು. ೧೮೦೦. ಗ್ರಾಮದ ಕುಲಕರಣಿಯಾಗಿ, ಸದ್ಗೃಹಸ್ಥ ರಾಗಿ, ವಿದ್ವಜ್ಜನರಿಗೆ ಆಶ್ರಯದಾತರಾಗಿದ್ದರು. ಇದರಿಂದ ಸುತ್ತಲಿನ ಪ್ರದೇಶದಲ್ಲಿ ಹೆಸರನ್ನೂ ಗೌರವವನ್ನೂ ಸಂಪಾದಿಸಿದ್ದರು.

ಗದ್ವಾಲ ಸಂಸ್ಥಾನವನ್ನು ಸೋಮ ಭೂಪಾಲನೆಂಬವನು ಆಳುತ್ತಿದ್ದ. ಒಮ್ಮೆ ಸರಕಾರಕ್ಕೆ ಇವರು ಸಲ್ಲಿಸಬೇಕಾಗಿದ್ದ ಹಣ ಸಂದಾಯಮಾಡಲು ತಡವಾಯಿತು. ಇವರ ಕೀರ್ತಿಯಿಂದ ಅಸಮಾಧಾನಗೊಂಡಿದ್ದ ದೊರೆಯು ಇದೇ ನೆಪದಿಂದ ಆಸ್ಥಾನಕ್ಕೆ ಕರೆಸಿದ. ಸೇವಕರ ಕೈಯಿಂದ ಅವರ 'ರುಮಾಲು' ಕೆಳಗುರುಳುವಂತೆ ಹೊಡೆಸಿದ. ತಲೆಯ ಮೇಲಿನ ರುಮಾಲು ಶ್ರೇಷ್ಠ ಎಂದು ತಿಳಿದಿದ್ದ ಕಾಲ ಅದು. ಒಮ್ಮೆ ಕೆಳಗೆ ಬಿದ್ದ ರುಮಾಲನ್ನು ಮತ್ತೆ ಧರಿಸೆನೆಂದು ಪ್ರತಿಜ್ಞೆ ಮಾಡಿ, ಲೌಕಿಕ ವೃತ್ತಿಗೆ ವಿದಾಯ ಹೇಳಿದರು. ಮತ್ತೆ ಮನೆಗೆ ಮರಳದೆ, 'ಚಿಂತರವೇಲಿ' ಪ್ರಾಣದೇವರಲ್ಲಿ ಸೇವೆಗೆ ತೊಡಗಿದರು. ಆ ದಿನಗಳಲ್ಲಿ ಬೇವಿನ ಸೊಪ್ಪಿನ ಗುಳಿಗೆ ಗಳೇ ಆಹಾರವಾಗಿದ್ದವು. ದೈವ ಸಾಕ್ಷಾತ್ಕಾರಕ್ಕಾಗಿ ಕಠಿಣ ತಪಸ್ಸಿಗೆ ತೊಡಗಿದರು. ಅನಂತರ 'ಚೀಕಲ ಪರವಿ', 'ಚಿಪ್ಪಿಗಿರಿ'ಯ ಯಾತ್ರೆ ಮಾಡಿದರು. ಆ ಸಂದರ್ಭ

ದಲ್ಲೇ ಶ್ರೀವಿಜಯದಾಸರಿಂದ ಸ್ವಪ್ನದ್ವಾರ 'ಶ್ರೀಗುರುವಿಜಯವಿಠಲ'ಎಂಬ ಅಂಕಿತ ದೊರೆಯಿತು.

ಶ್ರೀಗುರುವಿಜಯವಿಠಲರ ಕೀರ್ತಿ, ತಪಶ್ಶಕ್ತಿಯ ಪ್ರಭಾವ ಜನಮನದಲ್ಲಿ ಬೇರೂರತೊಡಗಿತು. ಇವರಿದ್ದಲ್ಲಿಗೆ ಜನರು ಬರತೊಡಗಿದರು. ತಮ್ಮ ಜೀವನದಲ್ಲಿ ಅನೇಕ ಪವಾಡಗಳನ್ನೂ (ಮಹಿಮೆ) ತೋರಿಸಿದರು. ಇವರು ಅರ್ಜುನಾಂಶರೆಂದು ಅವರ ಕೃತಿಗಳಿಂದ ತಿಳಿದು ಬರುತ್ತದೆ. ತಮ್ಮ ತಪಸ್ಸಿದ್ಧಿಯ ಬಲದಿಂದ ತಮ್ಮ ಬಳಿಬಂದ ಜನರ ಸಮಸ್ಯೆಗಳನ್ನು ಪರಿ ಹರಿಸಿದರು. ರಾಜ ಪ್ರಜೆ ಎಂಬ ಭೇದವಿಲ್ಲದೆ ಜನರಿಗುಪಕಾರ ಮಾಡಿದರು. ಹನುಮಂತರಾಯನೆಂಬ ಜಹಗೀರದಾರನ ಪತ್ನಿಯ ಪಿಶಾಚ ಬಾಧೆಯನ್ನು ಪರಿಹರಿಸಿದರು. ಇದರಿಂದ ಇವರ ಬಗೆಗಿನ ಭಕ್ತಿ ಜನರಲ್ಲಿ ಅಧಿಕವಾಯಿತು.

ಜನ್ಮಸ್ಥಳವಾದ 'ಧರೂರಿ'ನಲ್ಲಿ 'ಶ್ರೀಪಾರ್ಥಸಾರಥಿ'ಯ ದೇವಸ್ಥಾನವನ್ನು ನಿರ್ಮಿಸಿದರು. ಆ ಸಮಯದಲ್ಲಿ ಸಾಮೂಹಿಕ ಉಪನಯನ, ಸಾಮೂಹಿಕ ವಿವಾಹ ಕಾರ್ಯಗಳನ್ನು ನೆರವೇರಿಸಿದರು. ಗದ್ವಾಲಿನಲ್ಲಿ ಬಾಲಮಹಾ ರಾಜನಿಗೆ ಹಿತಬೋಧನೆ ಮಾಡಿದರು. ಮೊದಲಕಲ್ಲಿಗೆ ಹಿಂತಿರುಗಿ ಹೋದರು. ಅನಂತರ ತಮ್ಮ ಅಂತಿಮಕಾಲ ಬಂತೆಂದು ತಿಳಿದುಕೊಂಡು ತಮ್ಮ ಇಬ್ಬರು ಮಕ್ಕಳಾದ ಭೀಮದಾಸ ಮತ್ತು ಗೋವಿಂದದಾಸರಿಗೆ ಅಂಕಿತೋಪದೇಶ ಮಾಡಿದರು. ಕ್ರಿ.ಶ. ೧೮೮೫ರ ಪಾರ್ಥಿವ ಸಂವತ್ಸರ ವೈಶಾಖ ಶುದ್ಧ ಅಷ್ಟಮಿಯಂದು ದೇಹತ್ಯಾಗ ಮಾಡಿದರು. ಅವರ ದೇಹಸಂಸ್ಕಾರ ಮಾಡಿದ ಸ್ಥಳದಲ್ಲಿ ಕಟ್ಟೆ ಯೊಂದನ್ನು ಕಟ್ಟಿದ್ದಾರೆ. ಅದು ಇಂದಿಗೂ ಪವಿತ್ರ ಸ್ಥಳವಾಗಿದೆ.

ಶ್ರೀ ಗುರುವಿಜಯವಿಠಲರು ಅನೇಕ ಸುಳಾದಿ, ಉಗಾಭೋಗ, ಕೀರ್ತನೆ ಗಳನ್ನು ರಚಿಸಿದ್ದಾರೆ. ಶ್ರೀ ವಿಜಯದಾಸರ 'ಚಕ್ರಾಬ್ಜಮಂಡಲ'ದ ನಕ್ಷೆಯನ್ನು ರಚಿಸಿದ್ದಾರೆ. ಅಲ್ಲದೇ, ಹರಿಕಥಾಮೃತಸಾರದ ಮೊದಲ ಪದ್ಯಕ್ಕೆ ವಿಸ್ತಾರವಾದ ಟೀಕೆಯನ್ನು ಬರೆದಿದ್ದಾರೆ. ಆದರೆ ಅದು ಸಂಪೂರ್ಣವಾಗಿ ಲಭ್ಯವಾಗಿಲ್ಲ. ಇವರ ಸುಳಾದಿಗಳಲ್ಲಿ ಶ್ರೀಹರಿ, ಶ್ರೀವಾಯುದೇವರ ಸ್ತೋತ್ರಗಳು ಪ್ರಮೇಯ ಶಾಸ್ತ್ರಾರ್ಥ ಭರಿತವಾಗಿವೆ. ಇವರ ರಚನೆಗಳಲ್ಲಿ ಹೆಚ್ಚಿನ ಭಾಗ ಸುಳಾದಿ ರಚನೆ ಯಾಗಿವೆ. ಅವುಗಳಲ್ಲಿ ಆತ್ಮನಿವೇದನೆಯೇ ಹೆಚ್ಚಿನ ಸುಳಾದಿಗಳ ವಸ್ತುವಾಗಿದೆ. ತಮ್ಮ ಹಿಂದಿನ ಜನ್ಮದ ವಿಷಯಗಳನ್ನು ಈ ನಿವೇದನಾ ಸುಳಾದಿಗಳಲ್ಲಿ ಗುರುತಿಸಬಹುದು.

## ಶ್ರೀಕೇಶವ ವಿಠಲರು ( ಕ್ರಿ. ಶ. ೧೭೭೫ )

ಶ್ರೀಕೇಶವ ವಿಠಲರ ಜೀವನದ ಬಗ್ಗೆ ಬಹಳ ಕಡಿಮೆ ವಿಷಯಗಳು ತಿಳಿದುಬಂದಿವೆ. ಇವರ ಹೆಸರು 'ಸುಬ್ಬಣ್ಣದಾಸ' ರೆಂದು ಇವರ ಸ್ಥಳ 'ಗದ್ವಾಲ' ಶ್ರೀಗೋಪಾಲದಾಸರ ಶಿಷ್ಯ ಪರಂಪರೆಯಲ್ಲಿ ಇವರು ಬರುತ್ತಾರೆ. 'ಕೇಶವ ವಿಠಲ' ಎಂಬುದು ಇವರ ಅಂಕಿತ. ಶ್ರೀಗೋರೆಬಾಳ ಹನುಮಂತರಾಯರು ಪ್ರಕಟಿಸಿದ 'ಶ್ರೀಕರ್ನಾಟಕ ಹರಿದಾಸರ ಪರಂಪರೆ ಪೀಳಿಗೆ'ಯಲ್ಲಿ ಕೇಶವ ವಿಠಲರನ್ನು ಉಲ್ಲೇಖಿಸಿದ್ದಾರೆ. ಶ್ರೀ ಗೋಪಾಲದಾಸರ ನಂತರದ ಆರು ಜನ ದಾಸರಾದ ನಂತರ ಇವರ ಹೆಸರು ಬಂದಿದೆ. 'ಅಭಿನವ ಜನಾರ್ಧನ ವಿಠಲ' ರ ನಂತರ ಇವರ ಹೆಸರು ಇರುವುದರಿಂದ, ಇವರ ಅಂಕಿತ ಗುರುಗಳು 'ಅಭಿನವ ಜನಾರ್ಧನ ವಿಠಲ'ರು ಇರಬಹುದೆಂದು ಊಹಿಸಬಹುದಾಗಿದೆ. ಇವರ ಶಿಷ್ಯರಲ್ಲಿ 'ಕಮಲೇಶ ವಿಠಲ'ರು ಪ್ರಮುಖರೆಂದು ತಿಳಿದುಬರುತ್ತದೆ. ಇವರ ಜೀವನ ಕುರಿತಂತೆ ಇನ್ನೂ ಸಾಕಷ್ಟು ವಿಷಯವನ್ನು ಸಂಗ್ರಹಿಸು ವದು ಅತ್ಯಾವಶ್ಯಕವಾಗಿದೆ.

ಕೇಶವ ವಿಠಲರು ಅನೇಕ ಕೀರ್ತನೆ ರಚಿಸಿದ್ದಾರೆ. ಬಹಳ ಸುಂದರವಾದ ಭಾಷೆಯಲ್ಲಿ ಇವರ ಪದಗಳು ರಚಿತವಾಗಿವೆ.

## ಶ್ರೀಕಮಲಾಪತಿ ವಿಠಲರು (ಸು. ಕ್ರಿ. ಶ. ೧೮೨೦)

ಸಂತೆಬೆನ್ನೂರು 'ರಾಮದಾಸ' ರೆಂಬುದು ಇವರ ಹೆಸರು. ಇವರು ಕಮಲೇಶ ವಿಠಲರ ಶಿಷ್ಯರು. ಇವರು ದಾಸಕೂಟ, ವ್ಯಾಸ ಕೂಟ ಎರಡರಲ್ಲಿಯೂ ಪಂಡಿತರಾಗಿದ್ದರು. ತಿರುಮಲಕೂಡ್ಲು ನರಸೀಪುರದಲ್ಲಿ ಬಹಳ ಕಾಲ ವಾಸ ಮಾಡಿದ್ದರು. 'ಕಮಲಾಪತಿ ವಿಠಲ' ಎಂಬ ಹೆಸರಿನಿಂದ ಅನೇಕ ಕೀರ್ತನೆ ಗಳನ್ನು ರಚಿಸಿದ್ದಾರೆ. ಅಲ್ಲದೇ ಶ್ರೀಜಗನ್ನಾಥದಾಸರ 'ಶ್ರೀಹರಿಕಥಾಮೃತಸಾರ' ಕ್ಕೆ 'ಭಾವದರ್ಪಣ' ಎಂಬ ಹೆಸರಿನ ಸುಂದರವಾದ ವ್ಯಾಖ್ಯಾನವನ್ನು ಬರೆದಿದ್ದಾರೆ. ಈ ವ್ಯಾಖ್ಯಾನದ ಮಂಗಳಾಚರಣ ಪದ್ಯದಲ್ಲಿ ಹೀಗೆ ಹೇಳಿಕೊಂಡಿದ್ದಾರೆ –

ಧೀರಕೃಷ್ಣಾಪುರದ ಯತಿಗಳ ।
ಚಾರುಚರಣ ಸರೋಜಯುಗಳಕೆ ।
ಸ್ಥೈರ್ಯಮನದಿಂ ನಮಿಪೆ ಸಮ್ಯಜ್ಞಾನಪ್ರದರೆಂದು ॥೭॥

ಸರಸಕಾವ್ಯಗಳೋದಿ ತಿಳಿಯದ । ಮರುತ ಶಾಸ್ತ್ರದ ಮರ್ಮವರಿಯದ ।
ಕರುಣಿ ಕಮಲಾಪತಿಯ ದಾಸನ ಕರುಣದೊಳು ನಿಂತು ॥
ಹರಿಕಥಾಮೃತಸಾರ ಗ್ರಂಥಕೆ । ಹರಿಯು ಬರೆಸಿದ ಭಾವದರ್ಪಣ ।
ವರಗುಣಾಢ್ಯರು ನೋಡಿ । ನಿರುತದಿ ಕರುಣ ಮಾಡುವದು ॥೮॥

ಇದನ್ನು ನೋಡಿದಾಗ ಉಡುಪಿಯ ಕೃಷ್ಣಪುರಮಠದ ಶ್ರೀಗಳವರು ಇವರ ವಿದ್ಯಾಗುರುಗಳಾಗಿರಬೇಕೆಂದು ತೋರುವದು. ಇಂಥ ಅಪೂರ್ವ ಗ್ರಂಥವನ್ನು ಸಂತೆಬಿದನೂರಿನ ಲಕ್ಷ್ಮಣಾಚಾರ್ಯ ಮತ್ತು ರಾಮಚಂದ್ರರಾಯರೆಂಬ ವಿದ್ವಾಂಸರು ಅಚ್ಚು ಹಾಕಿಸಿದ್ದಾರೆ.

ಇವರಿಗೆ ಅನೇಕ ಜನ ಶಿಷ್ಯರಿದ್ದರೆಂದು ತಿಳಿದುಬರುತ್ತದೆ. ಅವರಲ್ಲಿ ಪ್ರಮುಖರಾದವರೆಂದರೆ – 'ಗುರುಕಮಲಾಪತಿವಿಠಲ', 'ವರದ ಕಮಲಾಪತಿವಿಠಲ', 'ರಮಾಪತಿವಿಠಲ', 'ಮಾಧವವಿಠಲ', 'ಜಾನಕೀಪತಿವಿಠಲ', 'ಭೂತನಾಥ ವಿಠಲ', 'ಮಧ್ವೇಶವಿಠಲ', 'ಪೂತಾತ್ಮವಿಠಲ', 'ಯದುಪತಿವಿಠಲ', 'ಗಂಡೀಶ ವಿಠಲ', 'ಇಭ ವರದ ವಿಠಲ', 'ಶ್ರೀರಮಣವಿಠಲ', 'ಹರಿವಿಠಲ', 'ಶ್ರೀಕರವಿಠಲ', – ಮುಂತಾದವರು.

ಇವರು ಅನೇಕ ಕೀರ್ತನೆ, ಸುಳಾದಿ, ಉಗಾಭೋಗಗಳನ್ನು ಬಹು ರಮ್ಯವಾಗಿ ರಚಿಸಿದ್ದಾರೆ.

## ಶ್ರೀವೆಂಕಟವಿಟ್ಠಲರು

ವೆಂಕಟವಿಟ್ಠಲಾಂಕಿತ ದಾಸವರ್ಯರು ಮಾನಾ ಮಧುರೈ (ತಮಿಳುನಾಡು) ನಲ್ಲಿ ವಾಸವಾಗಿದ್ದವರು. ಅವರು ಸುಪ್ರಸಿದ್ಧ ವಾಗ್ಗೇಯಕಾರರು ಸಂಗೀತಶಾಸ್ತ್ರದಲ್ಲಿ ಪ್ರವೀಣರು ಆಗಿದ್ದರು. ಇದೆಲ್ಲ ಭಜನಾ ಕೌಸ್ತುಭದಿಂದ ತಿಳಿದುಬರುತ್ತದೆ.

## ಸಂಪಾದಕರ ನುಡಿ

ಕರ್ನಾಟಕ ಸರಕಾರವು ಕನ್ನಡ ಸಂಸ್ಕೃತಿ ಇಲಾಖೆಯ ಮುಖಾಂತರ ಸಮಗ್ರ ದಾಸವಾಙ್ಮಯ ಪ್ರಕಟನ ಯೋಜನೆಯನ್ನು ಕೈಗೆತ್ತಿಕೊಂಡು ಅಪರೂಪವಾದ ಸಾಹಿತ್ಯ ಸೇವೆಯನ್ನು ಮಾಡಿದೆ. ಇದರಿಂದಾಗಿ ಹರಿದಾಸಸಾಹಿತ್ಯ ಮೌಲ್ಯಗಳು ಇನ್ನು ಮುಂದೆ ಸಾಮಾನ್ಯರಿಗೂ ಮುಟ್ಟುವಲ್ಲಿ ಸಂಶಯವಿಲ್ಲ.

ನಮ್ಮ ಪಾಲಿಗೆ ೧೩ ನೆಯ ಸಂಪುಟದ ಸಂಪಾದನಾ ಕಾರ್ಯವು ಬಂದುದು ನಮ್ಮ ಭಾಗ್ಯ. ಅದನ್ನು ನಾವು ನಮಗಿರುವ ಸೀಮಿತ ವಲಯದಲ್ಲಿ ಸಾಧ್ಯವಾದುದನ್ನೆಲ್ಲ ಸಂಗ್ರಹಿಸಿ ಕೊಟ್ಟಿದ್ದೇವೆ. ಹೀಗಾಗಿ ನಮ್ಮ ಕೊರತೆಗಳು ನಮಗೆ ಗೊತ್ತಿವೆ.

ವಿಜಯದಾಸರಿಂದ ಪ್ರೇರಣೆಯನ್ನು ಪಡೆದ ಅನಂತರ ಕರ್ನಾಟಕದಲ್ಲಿ ಮತ್ತೆ ಹರಿದಾಸ ಸಾಹಿತ್ಯವು ಪ್ರಬುದ್ಧವಾಗಿ ಬೆಳೆಯಿತು. ಅವರ ಪರಿಸರದ ಸೋಂಕಿಗೆ ಬಂದವರೆಲ್ಲ ದಾಸ ಪರಂಪರೆಗೆ ತಮ್ಮ ತಮ್ಮ ಸ್ವಸಾಮರ್ಥ್ಯಕ್ಕೆ ತಕ್ಕಂತೆ ಕಾರ್ಯವೆಸಗಿದ್ದಾರೆ. ಹರಿದಾಸ ಸಾಹಿತ್ಯ ಸೃಷ್ಟಿ ಮಾಡಿದ್ದಾರೆ.

ಈ ಹಿನ್ನೆಲೆಯಲ್ಲಿ ಈ ಕೆಳಗಿನ ಹರಿದಾಸರ ಸಾಹಿತ್ಯವನ್ನು ಸಂಪಾದಿಸಿ ಸಾಹಿತ್ಯಲೋಕಕ್ಕೆ ಒದಗಿಸಿಕೊಟ್ಟಿದ್ದೇವೆ.

೧. ಶ್ರೀ ಮೋಹನದಾಸರು : ಕೀರ್ತನೆಗಳು ೫೨ : ಸಂಪ್ರದಾಯದ ಹಾಡುಗಳು ೪ ; ಸುಳಾದಿಗಳು ೩ ; ಉಗಾಭೋಗಗಳು ೨ ;

೨. ಶ್ರೀ ವೇಣುಗೋಪಾಲವಿಠ್ಠಲರು : ಕೀರ್ತನೆಗಳು ೧೦ ; ಸುಳಾದಿಗಳು ೧೨ ; ಉಗಾಭೋಗಗಳು ೫ ;

೩. ಶ್ರೀ ವ್ಯಾಸವಿಠ್ಠಲರು : ಕೀರ್ತನೆಗಳು ೧೯ ; ಸಂಪ್ರದಾಯದ ಹಾಡು ೧ ; ಸುಳಾದಿಗಳು ೪ ; ಉಗಾಭೋಗಗಳು ೧ ;

೪. ಶ್ರೀ ಗುರುವಿಜಯವಿಠ್ಠಲರು : ಕೀರ್ತನೆಗಳು ೫ ; ಸುಳಾದಿಗಳು ೪೪ ; ಉಗಾಭೋಗಗಳು ೧ ; ಗದ್ಯ ೧ ;

೫. ಶ್ರೀ ಕೇಶವಿಠ್ಠಲರು : ಕೀರ್ತನೆಗಳು ೩ ; ಉಗಾಭೋಗ ೧ ;

೬. ಶ್ರೀ ಕಮಲಾಪತಿ ವಿಠ್ಠಲರು : ಕೀರ್ತನೆಗಳು ೩ ; ಸುಳಾದಿಗಳು ೧ ;

೭. ಶ್ರೀ ವೆಂಕಟವಿಠ್ಠಲರು : ಕೀರ್ತನೆಗಳು ೧೦.

ಈ ಸಂಗ್ರಹದಲ್ಲಿ ಬಂದದ್ದಷ್ಟನ್ನೇ ಮೇಲಿನ ಹರಿದಾಸರು ರಚನೆ ಮಾಡಿದ್ದಲ್ಲ. ಇನ್ನೂ ಬಹಳಷ್ಟಿರಬೇಕು. ಈ ದಿಸೆಯಲ್ಲಿ ಸಂಶೋಧನ ಕ್ಷೇತ್ರವು ಇನ್ನೂ ಬಾಗಿಲು ತೆರೆದುಕೊಂಡೇ ನಿಂತಿದೆ. ಇರುವ ಅವಕಾಶಗಳಲ್ಲಿ ನಾವು ಸಂಗ್ರಹಿಸಿದ್ದು ಒಂದು ಪ್ರಯತ್ನ ವಷ್ಟೆ. ಅವರ ಕೃತಿ ರಾಶಿಯು ಗುಪ್ತವಾಗಿ ಇನ್ನೂ ಅಲ್ಲಲ್ಲಿ ಇರಲು ಸಾಧ್ಯವೆಂಬುದರ ಸಂಪೂರ್ಣ ತಿಳಿವಳಿಕೆಯೂ ನಮಗಿದೆ.

ನಮಗೆ ಮಾರ್ಗದರ್ಶನ ನೀಡಿದ ಸಮಗ್ರ ದಾಸ ವಾಙ್ಮಯ ಪ್ರಕಟನ ಯೋಜನೆಯ ಸಂಪಾದಕ ಮಂಡಳಿಗೂ ವಿಶೇಷವಾಗಿ ನಮ್ಮ ಕಾರ್ಯವಾಹಕ ಸಂಪಾದಕರಾಗಿರುವ ಪ್ರೊ. ವಸಂತ ಕುಷ್ಟಗಿ ಅವರಿಗೂ ನಾವು ಕೃತಜ್ಞತೆಗಳನ್ನು ಸಲ್ಲಿಸುತ್ತಿದ್ದೇವೆ.

ಅದೇ ರೀತಿ ಕರ್ನಾಟಕ ಸರಕಾರಕ್ಕೂ ಹಾಗೂ ಕನ್ನಡ ಸಂಸ್ಕೃತಿ ಇಲಾಖೆಗೂ ನಮ್ಮ ವಂದನೆಗಳು ಮೀಸಲು.

ಶ್ರೀಮತಿ ರಮಾ ಕಲ್ಲೂರಕರ್
ಶ್ರೀಮತಿ ಸೀತಾ ಗುಡೂರ

(ಸಂಪುಟ ಸಂಪಾದಕರು)

## ಕೀರ್ತನೆಗಳ ಕ್ರಮಸೂಚಿ

## ಸುಳಾದಿಗಳು



## ಉಗಾಭೋಗಗಳು

## ಶ್ರೀವ್ಯಾಸವಿಠ್ಠಲರು (ಕಲ್ಲೂರ ಸುಬ್ಬಣ್ಣದಾಸರು)

### ಕೀರ್ತನೆಗಳು

| ಕೀರ್ತನೆ ಸಂಖ್ಯೆ | ಕೀರ್ತನೆಯ / ಉಗಾಭೋಗ / ಸುಳಾದಿಗಳ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| | **ಸುಳಾದಿಗಳು** | |
| ೧೧೯. | ಆಲಿಸಿ ಕೇಳುವುದು ಆದರದಿಂದಲಿ | ೨೫೧ |
| ೧೨೦. | ಅರುಹು ಮರುಹುಗಳಿಗೆ ಕಾರಣ ನೀನೆ ದೇವಾ | ೨೫೫ |
| ೧೨೧. | ಬಲವದ್ರೂಪವಾದ ಪ್ರಾರಬ್ಧ ಕರ್ಮವನ್ನು | ೨೫೮ |
| ೧೨೨. | ಪರಮ ಬಲವಂತನೆಂಬೊ ಗರ್ವ ತಾಳಿದದಕೆ | ೨೬೧ |
| ೧೨೩. | ನಿನ್ನ ಕಾಂಬುವದೆನಗೆ ನಿಖಿಳ ಸೌಭಾಗ್ಯ ಪ್ರಾಪ್ತಿ | ೨೬೪ |
| ೧೨೪. | ಭಕ್ತರ ಭಿಡಿಯ ನಿನಗೆ ಅತ್ಯಂತವಾಗಿ ಉಂಟು | ೨೬೭ |
| ೧೨೫. | ಮಿತ್ರನು ಎಂದು ನಿನ್ನ ಮನದಿ ನಂಬಿದಕ್ಕೆ | ೨೭೦ |
| ೧೨೬. | ಅಪರಾಧಿಯಾದುದಕ್ಕೆ ಕಾರಣವಿನಿತೆ ಕೇಳು | ೨೭೪ |
| ೧೨೭. | ಇಂದಿರಾಪತಿ ನಿನ್ನ ನಿಗ್ರಹಕೆ ಪಾತ್ರರೆನಿಪ | ೨೭೮ |
| ೧೨೮. | ಏಸು ದಿವಸವುಂಟು ಈ ಪ್ರಾರಬ್ಧಕರ್ಮ | ೨೮೨ |
| ೧೨೯. | ಇಂದಿನ ದಿನದಲ್ಲಿ ಸಕಲ ಸಜ್ಜನರಿಂದ ಆ | ೨೮೭ |
| ೧೩೦. | ಅಪರಾಧಿ ನಾನಲ್ಲ ಅಪರಾಧ ಎನಗಿಲ್ಲ | ೨೯೦ |
| ೧೩೧. | ಅನಂತ ಜನ್ಮದಲ್ಲಿ ನಿನ್ನಗಲದೆಯಿದ್ದ | ೨೯೪ |
| ೧೩೨. | ತತ್ರ ಶ್ರೀರ್ವಿಜಯೋಭೂತಿ ಎಂದ ಕಾರಣದಿಂದ | ೨೯೮ |
| ೧೩೩. | ಇಂದು ಮುಖಿಯೆ ನಿನ್ನ ಸಂದರುಶನದಿಂದಾ | ೩೦೧ |
| ೧೩೪. | ಘನ ದಯಾನಿಧಿಯಾದ ಪವನರಾಯನೆ ನಮೊ | ೩೦೪ |
| ೧೩೫. | ಪಿತೃ ಸಮಾನ ಜೇಷ್ಠನೆಂತೆಂಬ ವಿಧದಿಂದ | ೩೦೯ |
| ೧೩೬. | ಹಿತಮಾಳ್ಪ ಜನಕನಾಗಿ ರಕ್ಷಿಸು ಎಂದೆಂಬೆನೆ | ೩೧೨ |
| ೧೩೭. | ಎನ್ನಣ್ಣನ ಕೃಪೆ ಇನ್ನು ಎನಗಿಲ್ಲದುದರಿಂದ | ೩೧೫ |
| ೧೩೮. | ಘನ ದಯಾನಿಧಿಯಾದ ಗುರುರಾಘವೇಂದ್ರ ನಿಮ್ಮ | ೩೧೮ |
| ೧೩೯. | ಎಲೆ ಎಲೆ ಪರಮ ದುಷ್ಟನಾದ ಕಲಿಯೆ ನಿನ್ನ | ೩೨೨ |
| ೧೪೦. | ಒಡಿಯರಿಲ್ಲದ ವೃಕ್ಷಕಂಡ ಕಂಡವರಿಲ್ಲ | ೩೨೫ |
| ೧೪೧. | ಇಷ್ಟು ನಿರ್ದಯವ್ಯಾಕೊ ಎಲೆ ಎಲೆ ಆಪ್ತಾನಾದ | ೩೨೮ |
| ೧೪೨. | ಮಾಯಗಾರನೆ ನಿನ್ನ ಮಾಯ ತಿಳಿಯುವದಕ್ಕೆ | ೩೩೨ |
| ೧೪೩. | ಹರಿ ನಿನ್ನ ನಿರ್ಘನತನಕೆ ಎಣೆಯುವುಂಟೆ | ೩೩೬ |

**ಉಗಾಭೋಗಗಳು**



**ಗದ್ಯ**

# ಅನುಬಂಧ – ೧

## ಕಠಿಣ ಶಬ್ದಗಳ ಅರ್ಥ

### ಮೋಹನದಾಸರ ಕೃತಿಗಳು

**ಅ**

ಅಹಿ – ಹಾವು
ಅಹಿಶಾಯಿ – ಸರ್ಪಶಯನ, ವಿಷ್ಣು

**ಈ**

ಈಷಣತ್ರಯ – ಹೆಂಡತಿ, ಮಕ್ಕಳು, ಹಣ ಎಂಬ ಮೂರು ವಸ್ತುಗಳ ಮೇಲಿನ ಮೋಹ

**ಉ**

ಉಪಟಳ – ಕಾಟ, ತೊಂದರೆ
ಉರಗಾಗಿರಿ – ಶೇಷಗಿರಿ

**ಏ**

ಏಳಲ – ತಿರಸ್ಕಾರ, ಅವಮಾನ

**ಓ**

ಓದನ – ಅನ್ನ, ಓಗರ

**ಗ**

ಗುಪಿತ – ಗುಪ್ತ
ಗಜಪುರ – ಹಸ್ತಿನಾಪುರ

**ಜ**

ಜರ – ಮುಪ್ಪು

**ತ**

ತಸ್ಕರ – ಕಳ್ಳ (ಇಳೆಯ ತಸ್ಕರ, ಹಿರಣ್ಯಾಕ್ಷ)
ತರಣಿ – ಸೂರ್ಯ
ತುರುಕರು – ಮಹಮ್ಮದೀಯರು, ಆಕಳು ಮತ್ತು ಕರು (ಶ್ಲೇಷಾಲಂಕಾರದ ಬಳಕೆ)

**ದ**

ದುರ್ಧರ್ಷ – ಕೊಬ್ಬಿದ, ಸೊಕ್ಕಿನಿಂದ ಕೂಡಿದ
ದಂತಿ – ಆನೆ

**ಪ**

ಪದ್ದೊಪದಿಗೆ – ಪದ + ಉಪಧಿಗೆ ಪದ ಪದಕ್ಕೂ,

# ಅನುಬಂಧ ೨

## ಟಿಪ್ಪಣಿಗಳು

### ಮೋಹನದಾಸರು

'ಶ್ರೀನಿವಾಸಾರ್ಯರ ಶೃಂಗಾರ ಗುಣಂಗಳ ಆನೆಂತು ವರ್ಣಿಸುವೆನು' (ಮೋಹನವಿಠ್ಠಲರ ಕೀರ್ತನೆಗಳು : ಪದ ಸಂ. ೩೬, ಪುಟ ಸಂ. ೩೯) ಈ ಕೀರ್ತನೆ ಶ್ರೀ ಹರಿಭಕ್ತ ವಿಜಯ ಭಾಗ – ೩ (ಪಂಚದಶ ಪುಷ್ಪ ಗುರುಕೃಪಾ ಗ್ರಂಥಮಾಲೆ, ಗ್ರಂಥಕರ್ತರು : ಗುರುಗೋವಿಂದವಿಠಲದಾಸರು ಮೈಸೂರು ಕ್ರಿ.ಶ. ೧೯೭೦) ಇದರಲ್ಲಿ ಮೋಹನವಿಠಲ ಅಂಕಿತದಲ್ಲಿದೆ.

ಇದೇ ಕೀರ್ತನೆಯು ಅಲ್ಪ ಸ್ವಲ್ಪ ವ್ಯತ್ಯಾಸದೊಂದಿಗೆ ವರದಗೋಪಾಲ ವಿಠಲ ಅಂಕಿತದಲ್ಲಿ ಶ್ರೀ ವಿಜಯದಾಸರ ಶಿಷ್ಯ ಪ್ರಶಿಷ್ಯ ಶ್ರೀ ಗೋಪಾಲದಾಸ ವರ್ಯಾದಿ ಹರಿದಾಸರ ಸ್ತೋತ್ರ ಪದಗಳು : ಗುರು ಮಹಿಮೆ (ಸಂ : ಪ್ರ : ಹನುಮಂತರಾವ್ ಗೊರಬಾಳ ಶ್ರೀ ವರದೇಂದ್ರ ಹರಿದಾಸ ಸಾಹಿತ್ಯ ಮಂಡಲ, ಲಿಂಗಸೂಗೂರು ಜಿ : ರಾಯಚೂರು ೧೯೫೮) ಈ ಪುಸ್ತಕದಲ್ಲಿ ಪ್ರಕಟವಾಗಿದೆ. ಅದರ ಪಾಠವನ್ನೂ ಇಲ್ಲಿ ಕೊಡಲಾಗಿದೆ.

### ತಿರುಪತಿ ದಿಗ್ಗಾವಿ ಶ್ರೀನಿವಾಸಾಚಾರ್ಯರ ಸ್ತೋತ್ರ

ಶ್ರೀನಿವಾಸಾರ್ಯರಾ ಶ್ರಿಂಗಾರ ಗುಣಗ–
ಳಾನೆಂತು ವರ್ಣಿಸುವೆನಾ
ದಾನವಾಂತಕ ಹರಿಯ ಮಾನಸಾರ್ಚನೆ ಮಾಳ್ಪ
ಮಾನಿಸಾ ವೇಷ ಧರರಾ ಇವರಾ ॥ಪ॥

ನಿತ್ಯಾನ್ನ ದಾನದಲಿ ನಿರತರಾಗಿದ್ದು ದಾ–
ಸೋತ್ತುಮಾರೆನಿಸುತಿಪ್ಪರಾ
ಶತ್ರು ಮಿತ್ರರನ ಸಮದೃಷ್ಟಿಯಲಿ ನೋಡಿ ತನ್ನ
ಪುತ್ರರಂದದಿ ಪೊರೆವರಾ

# ಅನುಬಂಧ - ೩

## ಆಕರ ಗ್ರಂಥಗಳು

೧. ಶ್ರೀ ಕರ್ಣಾಟಕ ಭಕ್ತವಿಜಯ - ಶ್ರೀ ಬೇಲೂರು ಕೇಶವದಾಸರು ಸುಬೋಧ ಪ್ರಕಟನಾಲಯ, ಬೆಂಗಳೂರು - ೧೮, ೧೯೬೩

೨. ಶ್ರೀಗೋಪಾಲ ವಿಠ್ಠಲ, ಶ್ರೀ ಮೋಹನ ವಿಠ್ಠಲ, ಶ್ರೀವೇಣು ಗೋಪಾಲ ವಿಟ್ಠಲ, ಶ್ರೀ ಹಯವದನ ವಿಠ್ಠಲರ ಸುಳಾದಿಗಳು - ೯೦

ಪ್ರ : ಶ್ರೀ ವರದೇಂದ್ರ ಸಾಹಿತ್ಯ ಮಂಡಲ ಲಿಂಗಸೂಗೂರು, ಸಂ : ಹನುಮಂತರಾವ್ ಗೊರಾಬಾಳ ಪ್ರಕಟಣೆ. ೩೦ ಶಾ.ಶಕೆ. ೧೮೮೭ ಮಾಘವದಿ ೩೦

೩) ಶ್ರೀ ಜಗನ್ನಾಥದಾಸರು ತತ್ ಶಿಷ್ಯ ಪ್ರಶಿಷ್ಯರ ಸುಳಾದಿಗಳು, ಉಗಾಭೋಗಗಳು ಮತ್ತು ಫಲವಿದು ಬಾಳ್ವುದಕೆ ಪದದ ಅರ್ಥ - ಪ್ರ : ಶ್ರೀ ವರದೇಂದ್ರ ಹರಿ ದಾಸ ಸಾಹಿತ್ಯ ಮಂಡಲ, ಲಿಂಗಸೂಗೂರು, ಸಂ : ಹನುಮಂತರಾವ್ ಗೊರಬಾಳ. ಶಕೆ ೧೮೮೦ ಜೇಷ್ಠ - ಆಷಾಢ. ಪ್ರಕಟಣೆ : ೬೪ ಸಂಪುಟ ೨ : ಸಂಚಿಕೆ - ೨.

೪. ದಾಸರಾಯರ ಚರಿತ್ರೆ :

೫. ಶ್ರೀ ದಾಸಾರ್ಯರ ಹಬ್ಬದ ಸಂದೇಶ ಮತ್ತು ಶ್ರೀ ಗೋಪಾಲದಾಸರ ಶಿಷ್ಯ ಪ್ರಶಿಷ್ಯರ ಸುಳಾದಿ - ಉಗಾಭೋಗಗಳು. ಪ್ರ. ಶ್ರೀ ವರದೇಂದ್ರ ಹರಿದಾಸ ಸಾಹಿತ್ಯ ಮಂಡಲ ಲಿಂಗಸೂಗೂರು, ಸಂ : ಸಂ : ಹನುಮಂತ ರಾವ್ ವಕೀಲ, ಗೊರಾಬಾಳ. ಶಕೆ. ೧೮೮೦ ಚೈತ್ರ - ವೈಶಾಖ, ಪ್ರಕಟಣೆ : ೬೩. ಸಂಪುಟ - ೨, ಸಂಚಿಕೆ ೨.

೬. ಶ್ರೀ ವಿಜಯದಾಸರ ಶಿಷ್ಯ ಪ್ರಶಿಷ್ಯ ಶ್ರೀ ಗೋಪಾಲದಾಸ ವರ್ಯಾದಿ ಹರಿದಾಸರ ಸ್ತೋತ್ರ ಪದಗಳು : ಗುರು ಮಹಿಮೆ ಪ್ರ : ಶ್ರೀ ವರದೇಂದ್ರ ಹರಿದಾಸ ಸಾಹಿತ್ಯ ಮಂಡಲ, ಲಿಂಗಸೂಗೂರು, ಸಂ : ಪ್ರ : ಹನುಮಂತರಾವ್ ಗೊರಾಬಾಳ, ಶಕೆ. ೧೮೮೦ ಆಶ್ವೀಜ - ಕಾರ್ತೀಕ, ಪ್ರಕಟಣೆ : ೬೬. ಸಂಪುಟ ೨, ಸಂಚಿಕೆ : ೫.

೭. ಶ್ರೀ ವಿಜಯದಾಸರ ಶಿಷ್ಯರಾದ ಶ್ರೀ ವೇಣುಗೋಪಾಲ ವಿಠಲರ ಶಿಷ್ಯ ಪ್ರಶಿಷ್ಯರ ಸುಳಾದಿಗಳು, ಉಗಾಭೋಗಗಳು ಮತ್ತು ಶ್ರೀ ರಘುಪತಿ ವಿಠಲರ ಪರಾಪರ ವಿದ್ಯಾ ವಿಚಾರ ಪ್ರ : ಶ್ರೀ ವರದೇಂದ್ರ ಹರಿದಾಸ ಸಾಹಿತ್ಯ ಮಂಡಲ, ಲಿಂಗಸೂಗೂರು, ಸಂ : ಸಂ :

# ಅನುಬಂಧ – ೪

## ಕೀರ್ತನೆಗಳ ಅಕಾರಾದಿ

| ಕ್ರಮ ಸಂಖ್ಯೆ | ಕೀರ್ತನೆ / ಉಗಾಭೋಗ / ಸುಳಾದಿಗಳ ಮೊದಲ ಸಾಲು | ಕೀರ್ತನೆ ಸಂಖ್ಯೆ |
|---|---|---|

### ಮೋಹನದಾಸರ ಕೃತಿಗಳು

೧

ಬಾರೋ ಹೋಗುವ ನಡಿ ಮನೆಗೆ ಇಂದಿರೇಶ ಪ

ಬಾರೋ ಎನ್ನ ಮನಸೆಂಬ ಮನೆಗೇ ಅ.ಪ.

ಕಣ್ಣಾ ಬಿಡಲು ಬ್ಯಾಡ ಜಲ-
ವನ್ನು ಹೊಗಲಿ ಬೇಡ ।
ಮಣ್ಣಿಗಾಗಿ ದೈತ್ಯನ ನೀಗಿ
ಚಿನ್ನಗೊಲಿದು ಹೋಗುವರೇನೋ ೧

ತಿರಿಕಿ ಬೇಡಿದವನೇ ತಾಯಿ-
ಶಿರವಾ ತರಿದವನೇ ।
ಕರಡಿ ಕಪಿ ಅಳಲು
ತರುಣರೊಡನೆ ಹೋಗದಲಿರೋ ೨

ಬತ್ತಲೇ ನಿಂತಿದ್ದವನೆ ಹಯ-
ಹತ್ತಿ ಓಡಿಸಿದವನೇ ।
ಚಿತ್ತದೊಡೆಯ ಮೋಹನ್ನ ವಿಠಲ
ಎತ್ತಿ ಕರವ ಮುಗಿವೆ ಲೇಸೆಂದೂ ೩

೨

ಮಾಯಾವ್ಯಾತಕೋ ಮಾಧವನೆ ಮಾಯಾವ್ಯಾತಕೋ ಪ

ಮಾಯವ್ಯಾತಕೆ ಎನ್ನ । ಪ್ರೀಯ ಸಖನೆ ಲೋಕ
ನಾಯಕ ನೀನಿರೆ ಕಾಯೆ ಕಂಡವರಾ ಅ.ಪ.

ಆರು ವರ್ಗಗಳೆಂಬ ಕ್ರೂರರಿಗೊಪ್ಪಿಸಿ
ದೂರಾ ನೋಡುವದು ಉದಾರ ಉಚಿತವೆ ೧

ಇಂದಿರೆಯರಸ ಗೋವಿಂದ ನಿನ್ನಯ ಪಾದ
ದ್ವಂದ್ವ ನಂಬಿದವನ ಕುಂದೆಣಿಸುವರೇ ೨

ಪನ್ನಂಗ ಶಯನ ಸುಪರ್ಣ ಗಿರೀಶಾ ಸು–
ಪರ್ಣ ವಾಹನ ಮೋಹನ್ನ ವಿಠ್ಠಲನೇ ೩

## ೩

ಕರುಣಿಸಯ್ಯಾ ಕಂಜಜನಯ್ಯಾ ।
ಕರ್ಣರಹಿತ ಶಯ್ಯಾ ಕನಕಾದ್ರಿರಾಯಾ ಪ

ಕರಿವರದನೆ ನಿನ್ನ ಚರಣ ನಂಬಿದೆ ಎನ್ನ
ಪರಿಪಾಲಿಸುವದು ಪರಮ ಕೃಪಾಳೊ ಅ.ಪ.

ಕೋಟಲೆ ಸಂಸಾರವೆಂಬೊ । ನೀಟು ಶರಧಿಯನ್ನು
ದಾಟಲಾರೆನೊ ನಾನೂ । ಇದೇನೊ ॥
ನಾಟಕಾಧಾರ ನಿನ್ನ । ನಂಬಿದಾ ಮೇಲೆ ಎನ್ನ
ಬೂಟಕನೆನಸುವರೇ । ಮುರಾರೇ ॥
ಹಾಟಕಾಂಬರ ಧರ ಹರಿಯೇ ಕೇಳ್ವುದಿನ್ನು ।
ಕೋಟಿ ವ್ಯಾಳೆಗೆ ಭಕ್ತ ಕೋಟಿಯೊಳಗಿಟ್ಟು ಎನ್ನ ।
ನೀಟು ಮಾರ್ಗವ ತೋರಿ ಪಾಟುಪಡಿಪ ಯಮ
ಕಾಟ ಕಳೆದು ದಿವ್ಯ ನೋಟದಿ ನೋಡು ೧

ಆರರ್ಧ ಗುಣದಿಂದ । ಆರು ಅರಿಗಳಿಂದ
ಆರೆರಡು ಮದದಿಂದಾ । ಆನಂದಾ ॥
ಆರು ಮೂರು ಕಾಣದೆ । ಆರು ನಾಲ್ಕು ತಿಳಿಯದೆ
ಆರೈದು ನಿಲ್ಲಿಸದೆ । ಹೀಗಾದೇ ॥
ಆರರ ಸೇವಿಸಲಾರದೆ ನಿನ್ನ ಪದಾರವಿಂದವ ಸರ್ವದ ಸೇರದೇ
ಆರೆಂದು ಎನ್ನ ನೀ ದೂರ ನೋಡದೆ ಬಲು
ಸಾರೆಗರಿಯೋ ಕಂಸಾರಿ ಮುರಾರಿ ೨

ತಂದೆ ಯೆನಗೆ ನೀನೇ । ಇಂದಿರೆ ಜನನಿ ಗೋ–
ವಿಂದ ಇನ್ನೊಬ್ಬರಿಲ್ಲ । ನೀ ಬಲ್ಲೆಲ್ಲಾ ॥
ಸುಂದರ ವಿಗ್ರಹನೆ । ಸುಗುಣ ಸಾಕಾರ ಶುಭ
ಸಾಂದ್ರಾ ಭಕುತ ವತ್ಸಲ । ಗೋಪಾಲಾ ॥
ಎಂದೆಂದಿಗೆ ಎನ್ನಿಂದ ಅಗಲದೆ ಮುಕುಂದ ಮುನಿ ವೃಂದ
ವಂದಿತ ಚರಣನೇ । ಸಿಂಧುಶಯನ ಶಿರಿ ಮೋಹನ ವಿಠಲ ಬಾ
ಲೇಂದು ವದನ ಸುಗುಣ ಸಾಂದ್ರಾ ಉಪೇಂದ್ರಾ ೩

## ೪

ತಾರಮ್ಮಯ್ಯಾ ರಘುಕುಲ ರಾಮಚಂದಿರನ ಪ

ಈರೇಳು ವರುಷವು ಮೀರಿ ಪೋಗುತಲಿದೆ
ಸೇರದನ್ನೋದಕ ಮಾರಪಿತನ ಕರೆ ಅ.ಪ.

ಪರ್ಣ ಶಾಲೆಯಂತೆ ಅಲ್ಲಿ ಸು–
ವರ್ಣದ ಮೃಗವಂತೆ ॥
ಕನ್ಯೆ ಸೀತಾಂಗನೆ ಬಯಸಿದಳಂತೆ
ಸ್ವರ್ಣಾಂಬರ ಬೆನ್ಹತ್ತಿ ಪೋದನಂತೇ ೧

ಲಕ್ಷ್ಮಣ ಅಲ್ಲಿಂದ ಪೋಗಲು
ತಕ್ಷಣ ಖಳ ಬಂದ ॥
ಲಕ್ಷ್ಮಿಯಾಕೃತಿಯ ಕೊಂಡು ಪೋಗೆ ಕಮ–
ಲೇಕ್ಷಣ ಪೊರಟನು ತೀಕ್ಷಣವಲ್ಲಿಗೆ ೨

ಅಂಜನೆ ಸುತ ಬಂದ ಹರಿಪದ
ಕಂಜಕೆರಗಿ ನಿಂದಾ ॥
ಕುಂಜರಗಮನೆಯ ಕುರುಹು ಪೇಳೆನೆ ನಿ–
ರಂಜನ ಮೂರ್ತಿಗೆ ಅಂಜದೆ ಬೆಸಸಿದ ೩

ಶರಧಿಯನೇ ಹಾರಿ ಉಂಗುರ
ಧರಣಿಸುತೆಗೆ ತೋರೀ ॥
ತರು ಪುರ ಗೋಪುರ ಉರುಹಿ ಚೂಡಾಮಣಿ
ಹರಿಗೆ ಸಮರ್ಪಿಸಿ ಹರುಷದಲಿಹನಂತೆ ೪

ಸೇತುವಿಯನೆ ಕಟ್ಟಿ ಖಳಕುಲ
ನಾಥನ ತರಿದೊಟ್ಟೀ ॥
ಸೀತೆ ಸಹಿತ ಮೋಹನ್ನ ವಿಠ್ಠಲ ಜಗ–
ನ್ನಾಥ ಹೊರಟನಂತೇ ಕಾಂತೇ ೫

## ೫

ಶ್ರೀಮಧ್ವ ಚಿತ್ತಮಂದಿರನೆ ನಿನ್ನಯ ಚರಣ
ತಾಮರಸ ನೆರೆ ನಂಬಿದೆ ಪ

ಕಾಮ ಕ್ರೋಧಗಳನ್ನು ಕಡಿದು ನಿನ್ನಯ ದಿವ್ಯ
ನಾಮಾಮೃತವನುಣಿಸೋ ಸ್ವಾಮಿ ಅ.ಪ.

ಮಾರನ್ನ ಉಪಟಳಕ್ಕಾರದಲೆ ನಾ ಬಲು
ಪೋರ ಬುದ್ಧಿಯನು ಮಾಡಿ ।
ಬಾರಿ ಬಾರಿಗೆ ಮನದಿ ಬಯಸಿ ಪರ ನಾರಿಯರ
ಮೋರೆ ಬಣ್ಣವನೆ ನೋಡಿ
ಆರು ಇಲ್ಲದ ವೇಳೆ ಕಣ್ಣು ಸನ್ನೆಯಲವಳ
ಕೋರಿದ್ದು ಇತ್ತು ಕೂಡಿ
ವಾರಿಜನಾಭ ನಿನ್ನಾರಾಧನೆಯ ಮರೆದು
ಧಾರುಣಿಗೆ ಭಾರಾಗಿ ಅಶನ ಶತ್ರುವಾದೆ ೧

ಉಪರಾಗ ಮೊದಲಾದ ದಶಮಿ ದ್ವಾದಶಿ ದಿನದಿ
ಉಪೇಕ್ಷೆಯನು ಮಾಡಿ ಜರಿದೆ ।
ಉಪಕಾರವೆಂದು ನಿಜವೃತ್ತಿ ಪೇಳಿದರೆನಗೆ
ಅಪಕಾರವೆಂದು ತಿಳಿದು ।
ನಿಪುಣನೆನಿಸುವೆನೆಂದು ಅಜ್ಞಾನಿಗಳ ಮುಂದೆ
ತಪವೃದ್ಧರನ್ನು ಜರಿದೆ ।
ಸ್ವಪನದೊಳಗಾದರೂ ವೈರಾಗ್ಯ ಬಯಸದಲೆ
ಕಪಟ ಮನುಜರೊಳಗಾಡಿ ನಿನ್ನ ಮರೆದೆನೊ ಸ್ವಾಮಿ ೨

ಭೂಸುರರು ಚಂಡಾಲ ಜಾತಿಯನ್ನದೆ ಬಲು
ಪೇಸಿಕಿಲ್ಲದಲೆ ತಿರಿದೆ ।
ಆಶಾಪಾಶಕೆ ಸಿಲುಕಿ ಕಂಡಕಂಡಲಿ ತಿಂದು
ದೋಷರಾಶಿಯನು ತರುವೆ ।
ಆ ಸತೀ ಸುತರ ಸಲಹುವೆನೆಂದು ಪರಿಪರಿ
ವೇಷವನು ಧರಿಸಿ ಮೆರೆವೆ ।
ವಾಸುಕೀ ಶಯನ ವಸುದೇವ ತನಯನೆ ನಿನ್ನ
ದಾಸನೆನಿಸದಲೆ ಅಪಹಾಸ ಮಾನವನಾದೆ ೩

ಹರಿದಾಸರಲ್ಲಿ ಒಂದರಘಳಿಗೆ ಕುಳಿತರೆ
ಶಿರವ್ಯಾಧಿಯೆಂದ್ಹೇಳುವೆ ।

ದುರುಳ ದುರ್ವಾರ್ತೆಗಳ ಪೇಳಲು ಹಸಿತೃಷೆಯ
ಮರೆದು ಆಲಿಸಿ ಕೇಳುವೆ ।
ತರುಣಿ ತರಳರು ಎನ್ನ ಪರಿಪರಿ ಬೈದರೆ
ಪರಮ ಹರುಷವ ತಾಳುವೆ ।
ಗುರು ಹಿರಿಯರೊಂದುತ್ತರವನಾಡಲು ಕೇಳಿ
ಧರಿಸಲಾರದಲೆ ಮತ್ಸರಿಸುವೆನೊ ಅವರೊಳಗೆ ೪

ನಾ ಮಾಡಿದಪರಾಧಗಳನೆಣಿಸಿ ಬರೆವುದಕೆ
ಭೂ ಮಂಡಲವೆ ನೆರೆ ಸಾಲದೊ ।
ಸೀಮೆಯೊಳಗುಳ್ಳ ದುರ್ಮತಿಯೆಲ್ಲ ಕೂಡಲು
ಈ ಮತಿಗೆ ಆದು ಪೋಲದೋ
ಹೋಮ ಜಪತಪವು ಇನ್ನೆಷ್ಟು ಮಾಡಲು ಪಾಪ
ಸ್ತೋಮ ಎಂದಿಗು ವಾಲದೊ ।
ಸಾಮಜ ವರದ ಮೋಹನ್ನ ವಿಠ್ಠಲ ನಿನ್ನ ।
ನಾಮವೊಂದಲ್ಲದೆ ಪ್ರಾಯಶ್ಚಿತ್ತವ ಕಾಣೆ ೫

೬

ಲಕ್ಷ್ಮೀವಲ್ಲಭ ಜಯ ಪಕ್ಷಿವಾಹನ ಜಯ
ಮೋಕ್ಷದಾಯಕನೆ ಜಯ ಜಯ ಪ

ಮೋಕ್ಷದಾಯಕನೆ ಮಧುಸೂದನ ಪ–
ದ್ಮಾಕ್ಷಗಾರುತಿಯ ಬೆಳಗಿರೇ ಅ.ಪ.

ಜಲದೊಳು ಸಂಚರಿಸಿ ಬಲು ಗಿರಿಯ ಧರಿಸಿದ
ಇಳೆಯ ದಾಡೆಯಿಂದ ನೆಗಹಿದಾ ॥
ಇಳೆಯ ದಾಡೆಯಿಂದ ನೆಗಹಿದ ನರಹರಿ
ಚೆಲುವಗಾರುತಿಯ ಬೆಳಗಿರೆ ಶೋಭಾನೆ ೧

ಚಿಕ್ಕ ಬ್ರಾಹ್ಮಣನಾಗಿ ಬಲಿಯ ದಾನವ ಬೇಡಿ
ಆಕ್ರಮಿಸಿದನೆ ತ್ರಿಲೋಕ ॥
ಆಕ್ರಮಿಸಿ ತ್ರಿಲೋಕನಾಳ್ದ ಶ್ರೀರಾಮ
ಶ್ರೀ ಕೃಷ್ಣಗಾರುತಿಯ ಬೆಳಗಿರೇ ೨

ನಗ್ನನಾಗಿ ವ್ರತವಾ ವಿಘ್ನವ ಚರಿಸಿದ
ಅಜ್ಞಾನಿ ಕಲಿಯ ಸದೆದ ॥
ಅಜ್ಞಾನಿ ಕಲಿಯ ಸದೆದ ಮೋಹನ್ನ ವಿಠ್ಠಲ ಸ-
ರ್ವಜ್ಞಗಾರುತಿಯ ಬೆಳಗಿರೇ ೩

## ೭

ತೆರಳಿ ಬಾರಯ್ಯ ಭವ ಶರಧಿ ತಾರಕನೇ – ನಾ
ಕರವಾ ಮುಗಿವೆ – ಎನ್ನ ಕರುಣದಲ್ಲಿ ನೋಡೋ ಪ

ಎರಡು ಭಾಗದಿ ಶ್ರೀ ಧರಣೇರಿಂದೊಪ್ಪುತ
ತ್ವರಿತದಿ ದಯಮಾಡು ಉರಗಾಗಿರಿ ವೆಂಕಟ ಅ.ಪ.

ತೇರಿನೊಳಿಪ್ಪ ಶೃಂಗಾರ ಪುರುಷನೆ ಬಂ-
ಗಾರ ಮಾಣಿಕದಲಂಕಾರವ ಧರಿಸಿದ
ಮಾರಮಣನೆ ವನಜಾರಿವದನ ಬಲು-
ಶೂರ ಸಮರಧೀರ ನಾರಾಯಣ ಕಂಸಾರೇ ॥
ನರ ಕಂಠೀರವ ಕಮಲನಾಭ
ನಾರದ ಮುನಿ ಪ್ರಿಯ ಚಾರು-
ಚರಿತ ಪನ್ನಗಾರಿಗಮನ ಮದ-
ನಾರಿಯ ಸಲಹಿದ ಧೀರ ಮುರಾರಿ ೧

ನಿಂದರೆ ಬಪ್ಪುದು ಸಿಂಧುಶಯನ ದಯ-
ದಿಂದ ಎನ್ನನು ನೋಡು-ಕಣ್ದೆರೆದೀಕ್ಷಿಸಿ ।

ಕಂದಗೊಲಿದು ಕಂಬದಿಂದ ಬಂದಸುರನ
ಕೊಂದು ಕರುಳಹಾರ ಕಂಧರದಿ ತಾಳಿದೇ ॥
ಮಂದಮತಿವನೆಂದಲೇ ಗೋ–
ವಿಂದ ಗೋವಳ ವೃಂದದೊಡನೆ ಕಾ–
ಳಿಂದಿಯ ಧುಮುಕಿ–ಫಣೀಂದ್ರನ ಶಿರದಲಿ
ಧಿಂ ಧಿಮಿ ಧಿಮಿಕೆಂದು ಕುಣಿದ ಹರಿ ೨

ಜಲದೊಳ ಪೊಕ್ಕು ಆ ಇಳೆಯ ತಸ್ಕರನು ದುಂ–
ಬಲಗೊಂಡು ಮಡುಹಿ ನಂಬಿದ ಪ್ರಹ್ಲಾದ ಹಂ–
ಬಲಿಸೆ ಧರ್ಮದಿ ಕಾಯ್ದೆ ಸಲೆ ಕ್ಷತ್ರಿಯ
ಕುಲವನಳಿದೆ–ನಿನ್ನೊಳು ನೀನೇ ಕಾಯ್ದೆ ॥
ಮಲೆತ ಮಾವನ ಕೊಂದೆ ಸಲೆ
ಖಳ ತ್ರಿಪುರನ ಗೆದ್ದು ಕಲಿಯ ಸಂಹರಿಸಿದೆ
ಸುಲಭ ಮೂರುತಿ ಮೋಹನವಿಠ್ಠಲ
ಚೆಲುವ ತಿರುವೇಂಗಳ ೩

## ೮

## ವೇದವ್ಯಾಸ ದೇವರ ಸ್ತೋತ್ರ

ಏನೋ ಈ ವೇಷ ವೇದವ್ಯಾಸ
ಏನೋ ಈ ವೇಷ ಪ

ಭಾನುಕೋಟಿ ಪ್ರಕಾಶ ಬದರೀ ನಿವಾಸ ಅ.ಪ.

ದ್ರೌಪದಿ ಕರೆಯಲಪಾರ ವಸ್ತ್ರವನಿತ್ತೆ
ಕೌಪೀನ ಧರಿಸಿದ ಕೌತುಕವೇನಯ್ಯ ೧

ಮುತ್ತು ಮಾಣಿಕ್ಯ ನವರತ್ನ ಮಕುಟವಿರೆ
ನೆತ್ತಿಲಿ ಕೆಂಜೆಡೆ ಪೊತ್ತುಕೊಂಡಿಪ್ಪುದು ೨

ವರ ವೈಕುಂಠವ ಬಿಟ್ಟು ಮೋಹನ ವಿಠ್ಠಲ
ಧರೆಯಾಳು ಬೋರೆಯ ಮರದಡಿಯಲಿರುವುದು ೩

೬

## ಮಹಾಲಕ್ಷ್ಮಿ ಸ್ತೋತ್ರ

ವೆಂಕಟಾದ್ರಿ ನಿಲಯನ ಪಂಕಜನಾಭನ ತೋರವ್ವ ಲಕುಮಿ ಪ

ವಸುದೇವ ದೇವಕಿ ಕಂದಾ – ನಮ್ಮ
ಶಶಿಮುಖಿಯರೊಡನೆ ಆನಂದಾ
ಪಶುಗಳ ಕಾಯ್ದ ಗೋವಿಂದ – ನಮ್ಮ
ಬಿಸಜನಾಭ ಮುಕುಂದಾ ೧

ಸಾಮಜರಾಜ ವರದಾ – ಬಲು
ಪ್ರೇಮದಿ ಭಕುತರ ಪೊರೆದಾ
ಆ ಮಹಾ ದಿತಿಜರ ತರಿದಾ – ನಿ
ಸ್ಸೀಮ ಮಹಾಮಹಿಮನಾಗಿ ಮೆರೆದ – ನಮ್ಮ ೨

ಉರಗಗಿರಿಯಲಿಪ್ಪ – ಅಂದು
ಮರುತನ ಹೆಗಲೇರಿ ಬಪ್ಪ
ಶರಣರಿಗೊರವಿತ್ತ ತಪ್ಪ
ಸಿರಿ ಮೋಹನ ವಿಠ್ಠಲ ತಿಮ್ಮಪ್ಪ – ನಮ್ಮಪ್ಪನ ೩

## ೧೦

ಕಾಯೆ ಶ್ರೀ ಹರಿ ಜಾಯೆ ಸಜ್ಜನ
ಪ್ರೀಯೆ ಸುರಮುನಿ ಗೇಯೆ ಪ

ತಾಯೇ ಎನ್ನಯ ಕಾಯ ನಿನ್ನದು
ಕಾಯೇ ಕರುಣಾಬ್ಧಿಯೇ ಅ.ಪ.

ಪದ್ಮ ಮಂದಿರೆ ಪದ್ಮ ಗಂಧಿನಿ
ಪದ್ಮಕುಚ ರಾಣಿ ಪದ್ಮಶರ ಮಾತೇ
ಪದ್ಮ ಬಾಂಧವೆ ಪದ್ಮರಿಪು ತಾಯೆ ॥
ಪದ್ಮಿ ಪದ್ಮಾಕ್ಷಿ ಪದ್ಮಾಭಿನ್ನ ಪದ್ಮಪಾದ ಹೃ–
ತ್ಪದ್ಮದೊಳಗಿಟ್ಟ ಮುದ್ದು ಮಹಾ ಲಕುಮೀ ೧

ಮೂಕ ದಾನವನ ಕೊಂದು ಅವನ
ಕೊಂಕು ಮನ್ನಿಸಿದ ಮೂಕಾಂಬಿಕೆಯೇ
ಶ್ರೀಕಲಾ ಪಾಲಸಾಗರವಾಗಿ ಸಾಕಿದೆ ಋಷಿಯಾ ॥
ವಾಕೇಶ ಶಿವ ಪಾಕಶಾಸನ–
ನೇಕ ಜನ ಪುಷ್ಪ ವೃಷ್ಟಿ ಗರೆಯಾಲು
ಈ ಕೊಲ್ಲೂರೊಳು ನೀ ಕರುಣದಿ ನಿಂದೀ ೨

ನಿನ್ನ ಪಾದಾಬ್ಜವನ್ನು ಅನುದಿನ
ಸನ್ನುತಿಸುವೆ ಚೆನ್ನ ವಿಜಯ ರಾ–
ಯನ್ನ ಮನೆ ಮುಂದೆ ಕುನ್ನಿಯನ್ನೇ
ಮಾಡಿ ಎನ್ನ ಪುಟ್ಟಿಪುದು ॥
ಪನ್ನಗವೇಣಿ ಘನ್ನ ದುರಿತಾಬ್ಧಿಯನ್ನೆ ದಾಟಿಸಿ
ನಿನ್ನ ಆಳ್ವ ಮೋಹನ ವಿಠ್ಠಲ ರಾಯನ್ನ ಎನಗೆ ತೋರೆ ೩

## ೧೧

## ವಾಯುದೇವರ ಸ್ತೋತ್ರ

ಲಾಲಿ ಲಾಲಿ ತ್ರಿಭುವನ ಪಾವನ ಲಾಲಿ ಪ

ಅಂಜನದೇವಿಯ ಕಂದಗೆ ಲಾಲಿ
ಕಂಜಾಕ್ಷಿಗೆ ಮುದ್ರಿಕೆಯಿತ್ತಗೆ ಲಾಲಿ ॥
ಅಂಜದೆ ಅಸುರರ ಕೊಂದಗೆ ಲಾಲಿ
ಸಂಜೀವನ ಗಿರಿ ತಂದಗೆ ಲಾಲಿ ೧

ಕುಂತಿಯುದರದಿ ಬಂದಗೆ ಲಾಲಿ
ದಂತಿಯ ಗಗನಕ್ಕೆ ಒಗದಗೆ ಲಾಲಿ ॥
ಭ್ರಾಂತನ ಉದರವ ಬಗೆದಗೆ ಲಾಲಿ
ಚಿಂತಾಮಣಿ ಭೀಮರಾಯಗೆ ಲಾಲಿ ೨

ಸೋಽಹಂ ಎಂಬರ ತರಿದಾಗೆ ಲಾಲಿ ದಾ-
ಸೋಽಹಂ ಎಂಬರ ಪೊರೆದಗೆ ಲಾಲಿ ॥
ಮೋಹನ್ನ ವಿಠ್ಠಲನ್ನ ಭಜಿಪಗೆ ಲಾಲಿ
ಸ್ನೇಹದಿ ಭಕತರ ಪೊರೆವಗೆ ಲಾಲಿ ೩

## ೧೨

ಜಯ ಮಂಗಳಂ ನಿತ್ಯ ಶುಭಮಂಗಳಂ । ಮಹಾ
ಭಯ ನಿವಾರಣ ಭಾರತಿ ರಮಣಗೆ ಪ

ಹಾರುವಗೆ ಮರದ ಮೇಲೇರುವಗೆ ಮುದ್ರಿಕೆಯ
ತೋರುವಗೆ ವನಕಿತ್ತು ತೂರುವನಿಗೆ ॥

ಓಡುವಗೆ ಅಕ್ಷನಸು ಚೀರುವಗೆ ಆರ್ಭಟಿಸಿ
ಸಾರುವಗೆ ರಾವಣನ ಮೀರುವವಗೆ ೧

ಭೀಮನಿಗೆ ರಿಪುಕುಲ ವಿರಾಮನಿಗೆ ಸುಜನಾಬ್ಧಿ
ಸೋಮನಿಗೆ ಭಕ್ತಜನ ಪ್ರೇಮನಿಗೆ ॥
ಕಾಮನಯ್ಯನ ಚರಣ ತಾಮರಸವನ್ನು ನಿ–
ಷ್ಕಾಮದಲಿ ಭಜಿಪ ನಿಸ್ಸೀಮಗೆ ೨

ಯತಿಯಾಗಿ ಬಂದವಗೆ ಕ್ಷಿತಿಯೊಳಗೆ ನಿಂದವಗೆ
ಪತಿತರನು ಸದೆದ ಸುಮತಿವಂತಗೆ ॥
ರತಿಪತಿ ಪಿತ ನಮ್ಮ ಮೋಹನ್ನ ವಿಠ್ಠಲನ್ನ
ಸತತ ಸೇವಿಸುವ ಅಪ್ರತಿ ಮಹಿಮಗೆ ೩

## ೧೩

ಮಂಗಳಂ ಜಯ ಮಂಗಳಂ ಪ

ವನಧಿ ಲಂಘಿಸಿ ಆಚೆಗೆ ಪೋಗಿ
ಜನಕನಂದಿನಿಗೆ ಮುದ್ರಿಕೆನಿತ್ತು ॥
ವನ ಮತ್ತೀಡಾಡಿ ಲಂಕೆಯ ಸಖಿಗಿತ್ತ
ಘನ ಪರಾಕ್ರಮಿಯಾದ ಹನುಮಂತಗೆ ೧

ಸೋಮ ಕುಲದಲಿ ಜನಿತನಾಗಿ
ಕಾಮನಯ್ಯನ ಚರಣವ ಭಜಿಸಿ ॥
ಆ ಮಹಾ ಬಕ ಕೀಚಕ ದುರ್ಯೋಧನರ
ಸ್ತೋಮವನಳಿದ ಶ್ರೀ ಭೀಮರಾಯಗೆ ೨

ಮಧ್ಯಗೇಹರ ಉದರದಿ ಜನಿಸಿ
ಅದ್ವೈತ ಮತವ ಕಿತ್ತೀಡಾಡಿ ॥

ಸಿದ್ಧಾಂತ ಸ್ಥಾಪಿಸಿ ಮೋಹನ ವಿಠ್ಠಲನ
ಪದ ಪದ್ಮ ಭಜಿಪ ಮಧ್ವರಾಯಗೆ ೩

## ೧೪

ಸಂಜೀವನ ಗಿರಿಧರ ಪಾಹಿಮಾಂ ಪ

ಚಕ್ರತೀರ್ಥ ನಿವಾಸಾ ಶಕ್ರಾದ್ಯಮರಾಧೀಶ
ವಕ್ತ್ರಾನನ ಮೂರುತಿ ಪಾಹಿಮಾಂ ೧

ಮಂತ್ರ ಮೂಲ ಸ್ಥಿತ ಕಂಕುಪಿತನ ದೂತ
ಯಂತ್ರೋದ್ಧಾರಕ ಪಾಹಿಮಾಂ ೨

ಮೋಹನ ವಿಠ್ಠಲ ದಾಸ ಪೋಷಕ ಮಾಯಾ
ಮೋಹಕ ಭಂಜಕ ಪಾಹಿಮಾಂ ೩

## ೧೫

ಮಾರುತ ಒಲಿದವಗೆ ಮಾರಮಣನು ಒಲಿವಾ ಪ

ಭಾರತೀರಮಣ ಮುನಿಯೆ ಭವಹರ ಹರಿ ಮುನಿವ ಅ.ಪ.

ಸುಗ್ರೀವನು ಬಂದು ಹನುಮನ್ನ ಅನುಸರಿಸೆ
ಶೀಘ್ರದಿಂದ ಹರಿ ವಾಲಿಯ ಕೊಂದನು ॥
ವಿಗ್ರಹದೊಳಗೆ ಕರ್ಣನ ಗೆದ್ದ ಅರ್ಜುನನು
ಅಗ್ರಜನ ಕೃಪೆ ಇದ್ದ ಕಾರಣಾ ೧

ಹನುಮಗ್ಹರಿ ಒಲಿಯಲು ರಾವಣನ ಒಂದು
ಕ್ಷಣದೊಳಗೆ ಹರಿ ಖಂಡಿಸಿದನು ॥
ಅನುಮಾನವಿಲ್ಲದೆ ಅವನನುಜ ವಿಭೀಷಣಗೆ
ಘನ ಪದವಿಯನಿತ್ತ ಹನುಮ ಬೋಧಿತ ಹರಿ ೨

ತುಂಗಾ ತೀರ ನಿವಾಸ ಶೃಂಗಾರ ಗುಣಾಂಬುಧೇ
ಹಿಂಗದೇ ಭಕುತರ ಪೊರೆವ ದಾತ ॥
ಮಂಗಳ ಮಹಿಮ ಮೋಹನ್ನ ವಿಠ್ಠಲನ್ನ ಪಾ–
ದಂಗಳ ಭಜಿಸುವ ಮುನಿವರ್ಯ ದಾತ ೩

## ೧೬

ಸತತ ಚಿಂತಾಮಣಿಯೆ ।
ಸುರರೊಳಗೆ ನಿನಗೆಣಿಯೆ
ಸಂತರನ ಪೊರೆವಂಥ ಮುನಿಯೆ ।
ಸುಖ ಜ್ಞಾನ ಖಣಿಯೇ ಪ

ಭುವದಸುರ ಮರ್ದನನೆ ।
ತ್ರಿಭುವನಕಾಧಾರಕನೆ
ಭುವನ ಸುತ ವಂದಿತನೆ ।
ಭವ ಭುವನ ನಿಧಿ ತಾರಕನೆ ೧

ಭಾರತಿ ಮನೆ ।
ಕುಂಬಾರನ ವುಳಹಿದನೆ
ಭಾರತದೊಳು ನೀನೆ ।
ಭೂಭಾರ ನಿಳುಹಿದವನೆ ೨

ಶಂಖ ಚಕ್ರಾಧರನೆ ನಿ– ।
ಶ್ಶಂಕ ಮಹಾಮಹಿಮನೆ

ಶಂಕರ ಸುರಪಾಲಕನೆ ।
ಶಂಕ ಚಕ್ರವಿತ್ತವನೆ ೩

ಘಟಿಕಾಚಲ ವಾಸ ।
ಉತ್ಕೃಷ್ಟ ನರಹರಿಯ ದಾಸ
ಭಟ ಜನರಿಗೆ ಬಲು ಲೇಸಾ ಅ– ।
ಜಟವಾಗಿ ಕೊಡುವ ಸಂನ್ಯಾಸಾ ೪

ಪರಮ ಪಾವನ ಪಾವನ ಸರೋ– ।
ವರ ತೀರ
ಸಿರಿ ಮೋಹನ್ನ ವಿಠ್ಠಲನ ನಿತ್ಯ
ಸ್ಮರಿಸುವ ಗುರು ಶಿರೋರತ್ನಾ ೫

## ೧೭

## ಭಾರತೀದೇವಿಯ ಸ್ತೋತ್ರ

ಮಾರುತನ್ನ ಜಾಯೆ –
ಮೊರೆಯ ಹೊಕ್ಕೆನು ಕಾಯೆ ಪ

ಮಾರಾಂತಕ ಶಂಬರಾರಿ ಭಿದುರಧರ
ತಾರೇಶ ಶರವಿನುತೇ ಅಮ್ಮಯ್ಯ ಅ.ಪ.

ಭ್ರಮರ ಕುಂತಳೆ ಜಾಣೆ ಅಮರ ವಂದಿತ ಚರಣೆ
ಸುಮನಸೇಶನ ಪದಕಮಲ ಪೂಜಿಪುದಕೆ
ವಿಮಲಮತಿಯನೀಯೇ ಅಮ್ಮಯ್ಯ ೧

ಶೃತಿದೇವಿಯಲ್ಲಿ ಸುತೆಯಾಗಿ ಜನಿಸಿದೆ
ಸತತ ಎನ್ನಯ ದುರ್ಮತಿ ಖಂಡಿಸಿ ಸು–
ಮತಿವಂತನ ಮಾಡೇ ಅಮ್ಮಯ್ಯ ೨

ಎರಡೇಳು ಭುವನ ಜಠರದೊಳಗಿಂಬಿಟ್ಟ
ಪರಿಪೂರ್ಣ ಕಾಮ ಶ್ರೀ ಮೋಹನ ವಿಠ್ಠಲನ
ಚರಣ ಭಕುತಿಯನೀಯೇ ಅಮ್ಮಯ್ಯ ೩

## ೧೮

## ರುದ್ರದೇವರ ಸ್ತೋತ್ರ

ಇಂದುಧರನೆ ಬಾರೊ । ಸುರ ।
ವೃಂದವಂದ್ಯನೆ ಬಾರೊ
ಕುಂದಾದೆನ್ನ ಮನಸಿಗೇ
ಮುಕುಂದ ಪ್ರಿಯನೆ ಬಾರೋ ಪ

ರಜತಾದ್ರಿ ನಿವಾಸನೆ ಬಾರೋ
ಗಜದೈತ್ಯ ವಿನಾಶನೆ ಬಾರೋ ॥
ಅಜಸುತನಧ್ವರ ಭಜನೆಯ–
ಗೆಡೆಸಿದ ಗಜಮುಖನಯ್ಯನೆ ಬಾರೋ ೧

ಕಪ್ಪುಗೊರಳಾನೆ ಬಾರೋ ಕಂ–
ದರ್ಪ ಹರನೆ ಬಾರೋ ॥
ಅಪಾರ ಮಹಿಮಾ ಅಗಣಿತ ಶೌರ್ಯನೆ ಬಾರೋ
ಸರ್ಪ ಭೂಷಣನೆ ಬಾರೋ ೨

ಕಂದನ ತಲೆ ಕೆಡಹಿದವನೆ ಬಾರೋ
ಇಂದ್ರ ಅಜಗೊರಳಗೊಲಿದನೆ ಬಾರೋ ॥

ಅಂಧಕಾಂತಕ ಇಂದ್ರವಂದಿತ
ನಂದಿವಾಹನನೆ ಬಾರೋ ೩

ಅಂಬರ ಪುರಹರನೆ ಬಾರೋ ತ್ರಿ–
ಯಂಬಕ ಮಹದೇವನೆ ಬಾರೋ ॥
ಅಂಬಿಕೆ ವಲ್ಲಭ ಸಿಂಧೂರ ಮುಖ ಪಿತ
ಶಂಭು ಮೂರುತಿಯೆ ಬಾರೋ ೪

ಸುರ ನದಿಯ ಪೊತ್ತವನೆ ಬಾರೋ
ವರ ಪಂಪಾಪುರ ನಿಲಯನೆ ಬಾರೋ ॥
ಶಿರಿ ಮೋಹನ್ನ ವಿಠಲನ್ನ
ಪರಮ ದಾಸನೆ ಬಾರೋ ೫

## ೧೯

ಜಯ ಮಂಗಳಂ ನಿತ್ಯ ಶುಭ ಮಂಗಳಂ ಪ

ಪ್ರಿಯ ಜನರ ಪಾಲ ಪಾರ್ವತೀ ರಮಣಗೇ ಅ.ಪ.

ನಾಗ ಚರ್ಮಾಂಬರಗೆ ನಾಗ ಉಪವೀತಗೆ
ನಾಗಭೂಷಣ ಶೌಪ್ಯ ನಗವಾಸಗೆ ॥
ನಾಗಾರಿ ಜನಪ್ರೀಯ ನತಜನರ ಪೋಷಗೇ
ನಾಗನಾಥನ ಪುತ್ರಗೊಲಿದವನಿಗೆ ೧

ಚಂದ್ರಶೇಖರ ಚಾಮೀಕರ ನಗ ಸುಸದ್ಮನಿಗೆ
ಚಂದ್ರ ಸೂರ್ಯಗ್ನಿ ಲೋಚನನಿಗೆ ಕೋಟಿ ॥
ಚಂದ್ರ ನಿಭಕಾಯಗೆ ಸುಜನ ವಾರ್ಧಿಗೆ ಪೂರ್ಣ
ಚಂದ್ರನೆನಿಸುವ ರಾಮಚಂದ್ರನ ಪ್ರೀಯಗೆ ೨

ಧರೆಗಧಿಕವಾದ ಕಾಶೀಪುರ ಪಂಪಾ
ವರ ಹೇಮಕೂಟ ಮಂದಿರ ವಾಸಗೇ ॥
ಕರುಣಾಳು ಮೋಹನ್ನ ವಿಠಲ ರಾಯನ
ಸ್ಮರಿಸುವರ ಪಾಲಿಸುವ ಸ್ಮರವೈರಿಗೆ ೩

## ೨೦

ಭಿಕ್ಷವ್ಯಾತಕ್ಕೊ ಫಾಲಾಕ್ಷ ನಿನಗೆ ಪ

ಲಕ್ಷುಮೀಪತಿಯಂಥ ಸಖನಿದ್ದ ಬಳಿಕ ಅ.ಪ.

ರಜತಾದ್ರಿ ಅರಮನೆಯು ಹೇಮನಿಗಿಯೇ ಧನುವು
ಗಜಗಮನ ಸುರನಿಕರ ಪರಿವಾರವು ।
ಭುಜಗೇಂದ್ರ ಭೂಷಣ ನಿಜರಾಣಿ ಅನ್ನಪೂರ್ಣೇ
ಗಜಮುಖನು ಕುಮಾರ ಗಂಡುಮಕ್ಕಳು ಇರಲು ೧

ಬೇಡುವುದ ಬಿಟ್ಟು ನಿನ್ನೆತ್ತು ಯಮನಿಗೆ ಕೊಟ್ಟು
ಮಾಡಬಾರದೆ ಮುಯ್ಯ ಅವನ ಕೋಣ ।
ಜೋಡು ಮಾಡಿಕೊಂಡು ಬಾತಿ ಮುಟ್ಟು ತ್ರಿಶೂಲ
ಬೇಡಿದ್ದು ಬೆಳೆಯದೆ ಬರಿದೆ ಧಾವತಿಗೊಂಬಿ ೨

ರೊಕ್ಕ ರೂಪಾಯಿಗಳು ಬೇಕೆಂಬಿಯ ಸಾಲ
ತಕ್ಕೊಬಾರದೆ ಗೆಳೆಯ ಧನಪನಲ್ಲಿ ।
ಶುಕ್ರ ಒಕ್ಕಣ್ಣ ಮೋಹನ ವಿಠಲ ಇಕ್ಕಣ್ಣ
ಮುಕ್ಕಣ್ಣ ನೀನಾಗಿ ಮುಂಜಿ ಮಂತ್ರವ ಪಿಡಿದಿ ೩

## ೨೧

## ಭುವನೇಂದ್ರತೀರ್ಥರ ಸ್ತೋತ್ರ

ಭುವನೇಂದ್ರ ಯತಿ ರನ್ನ ಭುವನ ಪಾವನ್ನ
ತವಕದಿಂ ವ್ಯಾಸರಾಯರ ಭಜಿಪ ಘನ್ನ ಪ

ಅದ್ವೈತ ಮತ ಕೋಲಾಹಲ ಸುಜ–
ನಾಬ್ಧಿ ಸಮೃದ್ಧಿ ಎಂದೆನಿಪ ಮುನಿಪ ॥
ಸದ್ಧರ್ಮ ಸತ್ತಾಪಸ ಸಕಲ ವಿದ್ಯಾಲಾಪ
ಅದ್ವೈತ ತ್ರಯ ವರ ಪ್ರವರ್ತಕನೇ ೧

ತಂತ್ರ ಸಾರಾಂತ ಆದ್ಯಂತಗಳ ಅರ್ಥವ ನಿ–
ರಂತರದಲಿ ಪೇಳಿ ಹರುಷದಿಂ ॥
ಮಂತ್ರೋಪದೇಶವಂ ಮಾಡಿ ಮುದ್ರೆಯನಿತ್ತು
ಯಂತ್ರವಾಹಕನ ತೀರ್ಥವನೆರೆದ ಧೀರ ೨

ಮುನಿ ಕುಲೋತ್ತಮ ಶ್ರೀ ವರದೇಂದ್ರ ತೀರ್ಥ
ಕರಕಮಲ ಸಂಜಾತ ಭುವನ ವಿಖ್ಯಾತ ॥
ಅನಿಮಿತ್ತ ಬಂಧು ಗುರು ಮೋಹನ್ನ ವಿಠಲನ್ನ
ಕ್ಷಣ ಬಿಡದೆ ಧೇನಿಸುವ ಗುರುವೇ ಸುರತರುವೇ ೩

## ೨೨

## ರಾಘವೇಂದ್ರಸ್ವಾಮಿಗಳ ಸ್ತೋತ್ರ

ಕಂಡು ಧನ್ಯನಾದೆ ಗುರುಗಳ – ಕಣ್ಣಾರೆ ನಾ
ಕಂಡು ಧನ್ಯನಾದೆ ಈ ಗುರುಗಳ ಪ

ತುಂಗಾತಟದಿ ಬಂದು ನಿಂತ
ಪಂಗು ಬಧಿರಾದ್ಯಂಗ ಹೀನರ
ಅಂಗಗೈಸಿ ಸಲಹುವಾ – ನರ
ಸಿಂಗನಂಘ್ರಿ ಭಜಕರಿವರ ೧

ಗುರುವರ ಸುಗುಣೇಂದ್ರರಿಂದ
ಪರಿಪರಿಯಲಿ ಸೇವೆಗೊಳುತ
ವರಮಂತ್ರಾಲಯ ಪುರದಿ ಮೆರೆವ
ಪರಿಮಳಾಖ್ಯ ಗ್ರಂಥಕರ್ತರ ೨

ಸೋ ಅಹಂ ಎನ್ನದೆ ಹರಿಯ ದಾ
ಸೋ ಅಹಂ ಎನ್ನಲು ಒಲಿದು ವಿಜಯ
ಮೋಹನ ವಿಠ್ಠಲನ್ನ ಪರಮ
ಸ್ನೇಹದಿಂದ ತೋರುವವರ ೩

## ೨೩

## ಸತ್ಯಬೋಧ ಯತಿಗಳ ಸ್ತೋತ್ರ

ಯಾವನೆದುರು ಮೂರ್ಜಗದೊಳು ಲೋಕ
ಪಾವನ್ನ ಗುರು ಸತ್ಯಬೋಧ ಯತೀಂದ್ರಗಿನ್ನು ಪ

ಬಲು ಸುಂದರ ಸೀತಾ ರಘುಪತಿ – ಪಾದ
ನಳಿನಯುಗ್ಮವ ಪೂಜಿಪ ಯತಿ – ಎಮ
ಗೊಲಿದು ಪಾಲಿಸುವನು ಸನ್ಮತಿ – ಈ
ಜಲಜ ಭವಾಂಡದೊಳ್ ತುಂಬಿರೆ ಕೀರುತಿ ೧

ಪೀಳಿಗೆ ರಾಮ ದಿಗ್ವಿಜಯ ರಾಮ – ಸಿರಿ
ಲೋಲ ವಿಠ್ಠಲ ವ್ಯಾಸ ಕೂರ್ಮ – ಕಮ

ಲಾಲಯ ದೇವಿಯ ಸಿರಿನಾಮ – ದಿಂದ
ವಾಲಗವೀಯುವ ಗುರು ಸಾರ್ವಭೌಮಗೆ ೨

ಯತಿವರ ಶ್ರೀ ಸತ್ಯಪ್ರಿಯರ – ಕರ
ಶತಪತ್ರ ಭವ ಭಕ್ತರಾಧಾರ – ಮ
ನ್ಮಥನ ಮಾರ್ಗಣ ಗೆದ್ದ ಗಂಭೀರ – ರತಿ
ಪತಿ ಪಿತ ಮೋಹನ ವಿಠ್ಠಲ ಕಿಂಕರಗೆ ೩

## ೨೪

## ಸತ್ಯವರ ಯತಿಗಳ ಸ್ತೋತ್ರ

ಏನ ಪೇಳಲಿ ಇವರ ಕೀರ್ತಿ
ಶ್ರೀನಾಥ ರಾಮ ಬಂದನು ಭವ್ಯ ಮೂರ್ತಿ ಪ

ಅಂದು ನರಹರಿ ಯತಿಯು ತಂದದ್ದು ನಾ ಕರ್ಣ–
ದಿಂದ ಕೇಳಿ ಬಲ್ಲೆ ನಾ ಕಂಡದ್ದು ಇಲ್ಲ ॥
ಇಂದೆಮ್ಮ ಗುರು ಸತ್ಯಸಂಧ ಸುತರಿಗೊಲಿದು
ಬಂದ ರಾಮನ ಕಣ್ಣಿಂದ ಕಂಡೇ ೧

ಅವರೊಯ್ದರಿವರೊಯ್ದರೆಂಬ ಮಾತುಗಳ್ ಪುಸಿ
ಅವನ ಸತಿಯು ತನ್ನ ತವರು ಮನೆಗೆ ॥
ತವಕದಿಂದಲಿ ಕರದೊಯ್ಯೆ ಗುರುಗಳ ತಪಕೇ
ಭುವನ ತಲ್ಲಣಿಸಲು ಭುವನೇಶ ಬಂದ ೨

ಆಗ ಶ್ರೀ ರಘುನಾಥ ಯೋಗಿಗೊಲಿದು
ಸಾಗಿ ಬಂದುದು ನಾ ಕೇಳಿ ಬಲ್ಲೆ ಈ ನ– ॥
ಮ್ಮ ಗುರು ಸತ್ಯವರ ಯೋಗಿಗೊಲಿದು ರಾಮ
ಬೇಗ ಬಂದುದು ಚೆನ್ನಾಗಿ ಕಣ್ಣಿಲಿ ಕಂಡೆ ೩

ನಾಮಗೊಂಡಲು ಈ ಭೂಮಿದೇವಿ ಇಲ್ಲಿ
ತಾ ಮಗಳ ಅಳಿಯನ್ನ ಕರೆದು ಒಯ್ದು ॥
ಪಾಮರರಿಗೆ ಪೋದರೆಂದೆಂಬ ಭ್ರಮೆಯ ತೋರಿ
ಈ ಮುನಿಯ ಮಾನಸ ಹಂಸನಾಗಿದ್ದ ೪

ಒಂದು ಮಾಸವುಪವಾಸ ಮಾಡಿದವರ್ಗೆ
ಬಂದೊದಗುವ ಜಗದೊಳಗೆ ಖ್ಯಾತ ॥
ಸಂದೇಹವಿಲ್ಲದೆ ಅನಶನ ವ್ರತವನ್ನು
ಒಂದು ತಿಂಗಳು ಮಾಡಿ ಇಂದಿರೇಶನ ತಂದ ೫

ನಳನಾಮ ಸಂವತ್ಸರ ಫಾಲ್ಗುಣ ಬಹುಳ ದ್ವಾದಶಿ
ನಳಿನಾಕ್ಷ ರಾಮಸ್ವಾಮಿಯು ಹೊರಟು ॥
ಖಳರ ಖಂಡಿಸಿ ತಾನು ಇವರ ಭಾವಕೆ ಮೆಚ್ಚಿ
ಲಲನೆ ಸಹಿತವಾಗಿ ಭುವನೇಶ ಬಂದ ೬

ಗಂಗಾದಿ ಸಕಲ ತೀರ್ಥಗಳಲ್ಲಿ ಮಿಂದು ಶ್ರೀ
ರಂಗಾದಿಯಲ್ಲಿ ಮೋಹನ ವಿಠಲನ್ನ ॥
ಸಂಗೀತೆಗೆ ಸರ್ವದಾಧಿಕ ಫಲ
ಸಂಘಟಿಸುವದು ಸಜ್ಜನರು ಕೇಳಿ ೭

## ೨೫

## ವಿಜಯದಾಸರ ಸ್ತೋತ್ರ ಪದಗಳು

ಪರಮ ಹರುಷವಾಯಿತು ವಿಜಯರಾಯ
ಗುರುಗಳಂಘ್ರಿಯನೆ ಕಂಡು ಪ

ಪರಿಪರಿ ಜನುಮದ ಥರಥರದಘಗಳು
ತಿರುಗಿ ನೋಡದಲೇವೆ ತೆರಳಿ ಪೋದವು ಯಿಂದು ಅ.ಪ.

ಕಾನನದೊಳು ತಿರುಗಿ ತನ್ನ ಮಾತಿ–
ಯಾನು ಕಾಣದೆ ಚಿಂತಿಸಿ ॥
ಧೇನಿಸಿ ಅರಸಲಾಕ್ಷಣದೊಳಗವಳ ವತ್ಸ
ತಾನು ಕೂಗಲು ಕಾಮಧೇನು ಒದಗಿದಂತೆ ೧

ತರಣಿಯ ಕಿರಣದಿಂದ ತಪಿಸಿ
ನೆರ ಬಾಯ ಬಿಡವುತ ಬಪ್ಪರನ ॥
ಕರವ ಪಿಡಿದು ಸುರತರುವಿನಡಿಯಲ್ಲಿ ಕು–
ಳ್ಳಿರಿಸಿ ಕುಡಿಯೆ ದಿವ್ಯ ಸರಸಿಯನಿತ್ತಂತೆ ೨

ಧನವ ಪೋಗಾಡಿ ಕೊಂಡು ನರನು ಬಲು
ಮನ ಕ್ಲೇಶದಿಂದಿರಲು ॥
ಘನ ಮಹಿಮನೆ ನಮ್ಮ ಮೋಹನ ವಿಠಲ–
ವನ ಕೈಯ್ಯೊಳಗ ಚಿಂತಾಮಣಿಯನುಯಿತ್ತಂತೆ ೩

## ೨೬

ಸರಿಯುಗಾಣೆನೆಲ್ಲಿ ಜಗಲೊಳು ಕರವ
ಮುಗಿಪರಘವ ತೆಗೆವ ಗುರು ವಿಜಯದಾಸರಿಗಿನ್ನು ಪ

ಭೇದವಿಲ್ಲಯೆಂಬ ಮಾಯವಾದಿ ರಾಮಶಾಸ್ತ್ರಿ ಬಂದು
ಪಾದಕೆರಗೆ ಅವನ ತಮವ ಛೇದಿಸಿ ಸುಜ್ಞಾನವಿತ್ತೆ ೧

ವಾದಿಗಿರಿಗೆ ಇಂದ್ರಸ್ಥಾನೀಯರಾದ ಗುರುಗಳಿಂದ ಮು–
ದ್ರಾಧಾರಣೆಯ ಕೊಡಿಸಿ ಪರಮ ಆದರದಿಂದ ಅವನ ಕಾಯ್ದೆ ೨

ಭಸುಮವನ್ನೆ ತೆಗಸಿ ಅವನ ನೊಸಲಲೂರ್ಧ್ವ ತಿಲಕ ಪಚ್ಚಿಸಿ
ಎಸವ ಪಂಚಮುದ್ರೆ ದ್ವಾದಶ ನಾಮ ಧರಿಪಂತೆ ಮಾಡಿದೆ ೩

ಶ್ರೀ ಮನೋಹರ ಒಡೆಯ ವಿರಂಚಿಯ್ಯೋಮಕೇಶ ಸುರರು ಆತನ
ತಾಮರಸ ಪದ ಧೂಳಿಗಯೆಂದು ಈ ಮರಿಯಾದಿಗಳ ಪೇಳಿದೆ ೪

ಧರೆಯೊಳಿದ್ದ ಭಕ್ತ ಜನರ ಪೊರೆವನೆಂಬ ಬಿರಿದು ವೊಹಿಸಿ
ಸಿರಿ ಮೋಹನ್ನ ವಿಠಲನಂಘ್ರಿ ಸರಸಿರುಹವ ಎನಗೆ ತೋರ್ದೆ ೫

## ೨೭

ವಿಜಯದಾಸರ ಭಜನೆ ಮಾಡಿರೊ ।
ವಿಜಯದಾಸರ ಭಜನೆ ಮಾಡಲು
ಅಜನ ಜನಕ ನಿಜನಿಗೊಲಿದು
ಕುಜನ ಸಂಗತಿ ತ್ಯಜನ ಮಾಡಿಸಿ
ಸುಜನರ ಪಾದಾಂಬುಜದಲ್ಲಿಡುವ ಪ

ಶುದ್ಧ ಮಂದರನ್ನ ಉದ್ಧಾರಾರ್ಥವಾಗಿ
ಮಧ್ವರಾಯರ ಮತಾಬ್ಧಿಯೊಳು ಪುಟ್ಟಿ
ಸಿದ್ಧಾಂತ ಸ್ಥಾಪಿಸಿ ಗೆದ್ದು ವಾದಿಗಳ
ಹೆದ್ದೈವವೇ ಅನಿರುದ್ಧನು ಯೆಂದು ॥
ಪದ್ಧತಿಂದ ಪೇಳಿಸಿದಿ ವೈಷ್ಣವರನ್ನ
ಶುದ್ಧಾತ್ಮರ ಮಾಳ್ಪ ಉದ್ಯೋಗದಿಂದಲಿ
ಹದ್ದನ್ನೇರಿ ಬಪ್ಪ ಪದ್ಮುಮನಾಭನ್ನ
ಹೃದ್ದಯದೊಳಗಿಟ್ಟ ಸದ್ಗುರುರಾಯ ೧

ಭೂಸುರಾಬ್ಧಿಗೆ ತಾರೇಶನಂತೊಪ್ಪುವ
ಸಾಸಿರ ನಾಮದ ಶೇಷಗಿರಿ ಶ್ರೀ ನಿ–
ವಾಸನ ಯಾತ್ರೆಯ ಲೇಸಾಗಿ ಮಾಡ್ಯೆತಿ ಸ– ।
ಹಾಸ ಸಂತೋಷದಿಂದಲೆ ॥
ವಾಸುದೇವನ ಮಾನಸದೊಳಿಟ್ಟು ದು–
ರಾಶೆಯ ತೊರೆದು ಕ್ಲೇಶವ ಪಡದಲೆ

ಮೀಸಲ ಪುಣ್ಯದ ರಾಶಿ ಫಳಿಸಿ
ಕೇಶವನ ನಿಜ ದಾಸನೆಂದೆನಿಪ ೨

ಪುರಂದರ ದಾಸರ ವರ ಕುಮಾ-
ರರವಿಂದ ಪಾದ ಶಿರದಿ ಧರಿಸಿ
ಹರಿ ನಾಮೋಚ್ಚರಣೆ ಮಾಡುತ್ತ
ಹರುಷದಿಂದ ಪದ ರೂಪದಿ ॥
ಧರೆಯೊಳಗೆಲ್ಲ ದುರ್ಜನರರಿಯಂದೆನಸಿ
ಮೆರೆವುತ್ತ ನಿತ್ಯ ಸಿರಿ ಮೋಹನ್ನ ವಿಠಲನೆ
ಪರನೆಂದರುಹು ಮಾಡಿದ ಸುರ ತರುವಾದ ೩

## ೨೮

ತಂದೆ ವಿಜಯರಾಯ ವ್ಯಾಳಿಗೆ
ಬಂದ್ಯೊ ವಿಜಯರಾಯ ॥
ಹಿಂದೇಸು ಜನ್ಮವು ಮುಂದೇಸು ಜನ್ಮವು
ಒಂದು ತಿಳಿಯದೆಂದಿಗು ಯೆನ್ನಯ ಪ

ಸೂರ್ಯನ ಸುತನಂತೆ ಅಲ್ಲಿ ಮಹ
ಶೌರ್ಯ ದೂತನಂತೆ ॥
ಕಾರ್ಯಾಕಾರ್ಯವು ತಿಳಿಯದೆ ನಿನ ಪರಿ
ಚಾರ್ಯನ ಯೆಳೆತಿರೆ ಭಾರ್ಯಳು ಮೊರೆಯಿಡೆ ೧

ಅದೇ ಧೈರ್ಯ ನೋಡಿ
ಸುದತಿ ತಾ ಹೃದಯ ಬದ್ಧ ಮಾಡಿ ॥
ಮಧುಸೂದನನೆ ಮೋದ ತೀರ್ಥರೆಂ-
ದೊದರಿದಳೊದರಿದಳ್ ವಿಜಯರಾಯರೆಂದು ೨

ಕರಗಳನೇ ಕಟ್ಟಿ ಯೆಳೆಯುತಿರೆ
ದೊರೆಗಳನೇ ಮುಟ್ಟಿ ॥
ಸಿರಿ ಮೋಹನ ವಿಠಲನ ಪದವ ತೋರಿ
ಧರಿಗೆ ತಂದುಬಿಟ್ಟೆ ಕರುಣಾಳುವೆ ಯೆನ್ನ ೩

## ೨೯

ದಾಸರ ನೆರೆನಂಬಿರೊ ಚಲುವ
ವಿಜಯದಾಸರ ನೆರೆನಂಬಿರೊ ಪ

ದಾಸರ ನೆರೆನಂಬಿ ಯೇಸು ಜನ್ಮದ ಭವ
ಪಾಶವ ಹರಿಸಿ ರಮೇಶನ್ನ ಮಹಿಮೆಯ
ಲೇಸಾಗಿ ವಿರಚಿಸಿ ಪರಮೋಲ್ಲಾಸದಲಿ ಜೀ–
ವೇಶ ಭೇದವ ಯೇಸು ಬಗೆಯಲಿ ತಿಳಿಯುತಲೆ ನೆರೆ–
ದೋಷ ಬುದ್ಧಿಯ ನಾಶಗೈವರ ಅ.ಪ.

ಸಂದರುಶನ ಮಾತ್ರದಿಂದ ಬಾಹೊದು ನದಿ
ಸಿಂಧು ಸ್ನಾನದ ಫಲವೊ ಭಾವಶುದ್ಧ
ದಿಂದ ವಂದನೆ ನಿರುತ ಮಾಡಲು ಭವ
ಬಂಧನವ ಪರಿಹರವು ॥
(ದುಡುಕು) ಇಂದು ನಿಜವು ಕಂದುಗೊರಳಮ–
ರೇಂದ್ರವಂದ್ಯ ಮುಕುಂದನನು ಬಿಡ–
ದಂದು ಭಜಿಪ ಪುರಂದರನ ಪದ
ದ್ವಂದ್ವಯುಗಳರವಿಂದ ಮಧುಪರ ನಂದದಲಿ ೧

ನರಮಾತ್ರರಿವರೆಂದು ನೆರೆ ತಿಳಿಯದೆ ಸುಂ–
ದರವಾದ ಗುಣಗಣಗಳಿಂದಲಿ
ಸಿರಿವರನ ಚರಿತೆಯು ನಮಗೆ ಬಂದ ಕಂಟಕ ಬಂಧ
ಹರವೆಂದು ಮನದಲ್ಲಿ ನೆರೆ ತಿಳಿದರಿಂದ ॥

(ದುಡುಕು) ಪರಮ ಧನ್ಯರು ಧರಿಗೆ ಯಾದವ-
ರರಸೆ ಪೊರೆವನು ಕರುಣದಲಿ ಭೂಸುರರ
ಗುರುದೊರೆ ಮರುತ ಪೊರೆವನು
ಸುರರವರ ಕಾದಿಹರು ಯೆನಿಪರ ೨

ಅವನಿಯೊಳಿವರನ ವೊಲಿಸಿದರೆ
ಪಾವನವಾಗಿ ಪೋಗುವರು
ಭುವನದೊಳು ಕವಿಗಳೆನಿಸುತಿಪ್ಪರು
ಅವತರಿಸಿ ಮೂರು ॥
(ದುಡುಕು) ಭುವನ ಭವಕೆ
ಪಾವಕರಾಗಿ ಭೂಸುರರ
ಪಾವನವ ಮಾಡುವ ಭುವನ ನಿಧಿಸುತೆ ರಮಣಿ ಸಿರಿ ಮಾ-
ಧವ ಮೋಹನ ವಿಠಲರೇಯನ
ಅವಸರದ ಕಿಂಕರರ ಭಜಕರು ೩

## ೩೦

ನಿನ್ನ ಪಾದವ ನಂಬಿ ಅನ್ಯರಾಶ್ರಯವ್ಯಾಕೆ
ಚನ್ನ ಗುರು ವಿಜಯರಾಯ ಪ

ಇನ್ನೇನು ಯಿನ್ನೇನು ಯೆನ್ನ ಕುಲಕೋಟಿ ಪಾ-
ವನ್ನವಾದುದು ನಿಶ್ಚಯಾ ಜೀಯ ಅ.ಪ.

ಪಂಚ ಮಹ ಪಾತಕರೊಳಗೆ ಮೂರನೆ ಕಕ್ಷಿ
ಕಾಂಚನ ದ್ರೋಹಿ ನಾನು ಯೆನ-
ಮುಂಚೆ ಬಂದಾಗ ಕೈ ಬಿಡದೆ ಪ್ರಾ-
ಪಂಚವನೆ ಬಿಡುಯೆಂದು ನುಡಿದೆ ಯೆನ್ನ
ಸಂಚಿತಾಗಮವೆಲ್ಲ ತೊಡದೆ ಯೆನ್ನ ॥

ಕಂಚು ಕಟ್ಬುಳಿ ಕಲ್ಲೊತ್ತಿನ ಮೇಣ್ ಕಾಶಿಗೆ ॥
ಪಂಥೇರು ಮಾಡಿ ನಡದೆ ಬಿಡದೆ ೧

ವ್ಯಾಸರಾಯರ ಗುಹೆಯೊಳಗೆ ನವ ಸಂ–
ನ್ಯಾಸಿಗಳ ಸಮಕ್ಷಮದಲಿ ಯೆನ್ನ
ದಾಸನಾಗೆನುತ ನೀ ಪೇಳ್ದೆ ಯೆನ್ನ
ವಾಸಿ ಪಂಥಗಳೆಲ್ಲ ತಾಳ್ದವೊಲಿದು
ದೋಷಾಂಕುರಗಳೆಲ್ಲ ಸೀಳ್ದೆ ಸ್ವಾಮಿ ॥
ಶ್ರೀಶ ಸರ್ವೋತ್ತಮನೆಂದು ನೀ ಪೇಳಿ ಸಂ–
ತೋಷದಿಂದೆನ್ನ ಪೊರದೆ ಬಿಡದೆ ೨

ರಾಜಾಧಿರಾಜರು ಬಂದು ಪ್ರಾರ್ಥಿಸಲು ಗುರು
ರಾಜ ನೀನವರ ಮನೆಗೆ ಪೋಗಿ ದಿವ್ಯ
ಭೋಜನವ ಮಾಡಿ ಫಲಗರೆವೆ ನಿತ್ಯ
ರಾಜಧಾನಿಗೆ ಪೋಗಿ ಬರುವೆ ಉಡು
ರಾಜನಂದದಿ ನಿತ್ಯ ಮೆರೆವೆ ಯೆನ್ನ ॥
ಪೂಜಾ ಫಲವೆಂದು ಆವಾಗೆ ನಿನ್ನ ಪದ
ರಾಜೀವ ಧ್ಯಾನಿಸುವೆ ಸ್ವಾಮಿ ೩

ಪುಶಿಯು ಜಗವೆಲ್ಲ ದೈವವು ತಾನೆನುತ
ಅಸಮ ವೇದ ಪೌರುಷ ಯೆಂಬಂಥ
ಭಸುಮಧಾರಿಯನೆ ಕರದೆ ಅವನ
ಅಸುರ ಭಾವವನೆಲ್ಲ ಮುರಿದೆ ನಮ್ಮ
ಬಿಸಜಾಕ್ಷ ಪರನೆಂದು ಪೊರೆದೆ ಸ್ವಾಮಿ ॥
ಎಸೆವ ದ್ವಾದಶನಾಮ ಪಂಚಮುದ್ರಿಯನಿಡಿಸಿ
ನಸುನಗುತಲವನ ಪೊರದೆ ಬಿಡದೆ ೪

ಎನ್ನೊಬ್ಬನ ಪಾಲಿಸಿದ್ದು ಬಲು ಗುರುತಲ್ಲ
ಚಿನ್ನ ವರದನ ಸಂತತಿಯೆಲ್ಲ

ನಿನ್ನ ಪಾಲಿಗೆ ಬಿಟ್ಟದ್ದಲ್ಲ । ವಾಕು ।
ಅನ್ಯಥಾ ಮಾಡುವುದು ಸಲ್ಲ ಮೋ-
ಹನ್ನ ವಿಠ್ಠಲ ಯಿದನು ಬಲ್ಲ ಮುನ್ನಾ
ಪನ್ನಗಶಯನ ಪ್ರಸನ್ನನಾದದಕೆ ಯಿದು
ಎನ್ನ ಮನೋರಥ ಸಿದ್ಧಿಯೊ ಸ್ವಾಮಿ ೫

## ೩೧

ವಿಜಯರಾಯರ ಪಾದ ಭಜಿಸಿದವಗನವರತ
ವಿಜಯವಾಗುವದಕ್ಕೆ ಸಂದೇಹವ್ಯಾಕೆ ಪ

ಗಜರಾಜ ವರದನಿಗೆ ನಿಜದಾಸರೆಂದೆನಿಸಿ
ದ್ವಿಜಕುಲದಲ್ಲಿ ಮೆರೆವರಾ ಯಿವರ ಅ.ಪ.

ಮೊದಲು ಋಷಿಗಳು ಕೂಡಿ ಸತ್ರಯಾಗವ ನಾಕ
ನದಿಯ ತೀರದಲಿ ರಚಿಸಿ ಯಿರಲು ॥
ಪದುಮ ಸಂಭವನಂಶ ಭವ ಬಂಧು ಮುನಿವೃಂದ
ಹೃದಯ ಸಂಶಯ ಹೊಂದಲು (ಹೊಂಧಿಸಲು)
ವಿಧಿ ವಿಷ್ಣು ಶಿವರೊಳಗೆ ಉತ್ತಮರ ತೋರದಲೆ
ಮದಡ ಭಾವವ ವೊಹಿಸಲು ॥
ಒದಗಿ ಭೃಗುಮುನಿಗಳೇ ಸರ್ವೇಶ ವೈಕುಂಠ
ಸದನನೆಂದರುಹಿದವರೊ ಯಿವರೊ ೧

ಆ ದೇವಮುನಿ ಪುರಂದರ ದಾಸರಾಗಿ । ಈ ।
ಮೇದನೀ ತಳಕೆ ಬರಲೂ
ಸಾಧು ಸಮ್ಮತವಾದ ಪದಪಂಚಲಕ್ಷಕೆ (ತ್ರಿ)
ಪಾದವೇ ನ್ಯೂನವಿರಲು । ಆ ।
ಪಾದವನು ಪೂರ್ತಿಪರು ಮತ್ಪುತ್ರರಿವರೆಂದು
ಆದಿಯಲಿ ಸೂಚಿಸಿರಲೂ ॥

ಭೂದೇವ ಜನ್ಮದಿಂದಾ ದಾಸರಭಿಲಾಷೆ
ಸಾಧಿಸಿದ ಸದಯರಿವರೊ ಯಿವರೊ ೨

ವೀ ಯೆನಲು ವಿಮಲತೆಯು ಜ ಯೆಂದವಗ ಜಯವು
ಯ ಯೆನಲು ಯಾಗಫಲವು
ರಾ ಯೆನಲು ರಾಜ್ಯವು ಯ ಯೆನಲು ಯಮಭಟರು
ನೋಯಿಸರು ಯಿವನ ಕುಲವೂ ॥
ಈ ಯಾವದಕ್ಷರವ ಓಂಕಾರ ಸಹ ಪಠಿಸೆ
ಕಾಯಭವ ಪಿತನ ಬಲವೊ ॥
ಜಾಯಾ ಸಮೇತ ಮೋಹನ್ನ ವಿಠಲನ ಪಾದ
ತೋಯಜ ಭ್ರಮರರಿವರೊ ಯಿವರೊ ೩

## ೩೨

ನಿನ್ನ ನಂಬಿರುವೆ ಪ್ರಸನ್ನನಾಗು ಬ್ಯಾಗ
ಚನ್ನಿಗವರದ ವಿಜಯರಾಯ ಪ

ಮನ್ನಿಸಿ ಎನ್ನ ಪಾವನ್ನ ನೀ ಮಾಡದಿರೆ
ಬೆನ್ನ ಬಿಡೆನೊ ನಿನ್ನ ಜೀಯಾ ಅ.ಪ.

ಕರುಣಸಾಗರನೆಂಬೊ ಬಿರಿದು ನಿನಗಿಹುದೆಂದು
ಹಿರಿಯರಿಂದರಿತಿರುವೆ ಜೀಯಾ ॥
ಮರೆಯದೇ ಪೊರೆ ನಿನ್ನ ಚರಣಭಜಕನೆಂದು
ಸರುವ ಅಘವನು ಕ್ಷಮಿಸಿ ರಾಯಾ ॥
ದುರುಳ ವಿಷಯಕ್ಕೆಳಿವ ಮರುಳ ಮನವನ್ನು ನಿನ್ನ
ಚರಣದಲಿ ನಿಲಿಸಿನ್ನು ಜೀಯಾ ರಾಯಾ ೧

ಅರಿಯೆ ವಿಧಿ ಜಪ ತಪವ ಅರಿಯೆ ಹೋಮ ನೇಮ
ಅರಿಯೆ ಮಂತ್ರ ಸ್ತೋತ್ರವ ॥

ಬರಿದೆ ಧರಿಯೊಳು ತಿರುಗಿ ಹರಿಯ ಸ್ಮರಿಸದೆ ದಿನವ
ಇರುಳು ಹಗಲು ಕಳದೆನು ॥
ಕರುಣವಿಲ್ಲವ್ಯಾಕೆ ಶರಣಾಗತನ ಇನ್ನು
ಪೊರೆಯದೇ ಬಿಡುವದು ಥರವಲ್ಲವೆಂದಿಗೂ ೨

ಅಜ ಭವರಿಂದೊಂದ್ಯನಾದ್ವಿಜಯ ಮೋಹನ ವಿಠಲ
ಭಜಕರಿಗೊಲಿದಂತೆ ಉಪಾಯ ॥
ನಿಜವಾಗಿ ಮಾಡದಿರೆ ಬಿರುದಿಗೆ ಕುಂದು
ಗಜರಾಜವರದನ ಪ್ರಿಯಾ ॥
ಕುಜನರ ಮತ ಬಡಿದು ವಿಜಯ ವಿಠಲನೇ ಪರನೆಂದು
ತ್ರಿಜಗದೊಳು ಮೆರಸಿದ ಭಜಕಾಗ್ರೇಸರ ಗುರುವೆ ೩

೩೩

ವಿಜಯದಾಸ ಧೀರರೆಂಬೊ ಅಂಬುಜ ಮಿತ್ರನುದಯಿಸಲು
ಭಜಕರಜ್ಞಾನ ತಿಮಿರ ಭರದಿ ಬಿಟ್ಟೋಡಿತು ಪ

ಶ್ರುತಿ ಶಾಸ್ತ್ರವೆಂಬ ಕಂಜಗಳತಿ ರಮ್ಯದಿಂದರಳಿದವು
ಕ್ಷಿತಿಯೋಳು ಕುಮುದದಂತೆ ದುರ್ಮತಗಳೆಲ್ಲ ಕುಗ್ಗಿದವು ॥
ಇತರ ದೇವಂಗಳಿಂತು ಭಜಿಸಿದೆ ರಘು
ಪತಿಯೆ ದೈವ ಮಧ್ವ ಮತವೆ ಸಿದ್ಧಾಂತವು
ಸತತವನು ಹರಿ ಸರ್ವೋತ್ತಮನೆಂದು
ತುತಿಸುವ ಕಾಂತಿಯು ತುಂಬಿತು ಜಗದೊಳು ೧

ಚೋರ ಮಾಯಾವಾದಿಗಳೆಂಬ ತಾರೆಗಳಡಗಿ ಪೋದವು
ಸಾರುವ ವಿಬುಧ ಜನರೆಂಬೊ ಚಕ್ರವಾಕ ಧ್ವನಿಗೈದವು ॥
ಸಾರಿ ಸಾರಿಗೆ ಹೊತ್ತು ಯೇರುವ ತೆರದಲಿ
ಶ್ರೀರಮಣನ ಚರಣಾರವಿಂದವು ನಿತ್ಯ

ಆರಾಧಿಸುವ ವಿಚಾರವಿದೆನುತಲಿ
ತಾರತಮ್ಯ ಜ್ಞಾನ ತೋರಿದರಿಳಿಯೊಳು ೨

ಅಂದವಾದಲಾದಿನ್ನೆ ಹನುಮಂತನೊಡೆಯ
(ಮುಂದಿನ ಪಾದಗಳು ಸಿಕ್ಕಿಲ್ಲ)

## ೩೪

ವಿಜಯರಾಯರ ಚರಣ ನಿಜವಾಗಿ ನಂಬಲು
ಅಜನ ಪಿತನು ತಾನೆ ಒಲಿವಾ ಪ

ದ್ವಿಜಕೇತನ ಗುಣವ್ರಜವ ಕೊಂಡಾಡುವಾ
ಸುಜನ ಮಂದಾರನೀತ – ಪ್ರಖ್ಯಾತ ಅ.ಪ.

ವಿ ಎಂದು ನುಡಿಯಲು ವಿಷಯ ಲಂಪಟ ದೂರ
ಜ ಎಂದು ನುಡಿಯಲು ಜನನ ಹಾನಿ
ಯ ಎಂದು ಕೊಂಡಾಡೆ ಯಮಭಟರು ಓಡುವರು
ರಾಯ ಎಂದೆನಲು ಹರಿಕಾವಾ – ವರವೀವಾ ೧

ಇವರ ಸ್ಮರಣೆಯೆ ಸ್ನಾನ ಇವರ ಸ್ಮರಣೆಯೆ ಧ್ಯಾನ
ಇವರ ಸ್ಮರಣೆಯೆ ಅಮೃತಪಾನ
ಇವರ ಸ್ಮರಣೆಯ ಮಾಡೆ ಯುವತಿಗಕ್ಷಯವಿತ್ತ
ತ್ರಿವಿಕ್ರಮನು ಮುಂದೆ ನಲಿವಾ – ಒಲಿವಾ ೨

ವಾರಣಾಸಿಯ ಯಾತ್ರೆ ಮೂರು ಬಾರಿ ಮಾಡಿ
ಮಾರಪಿತನೊಲುಮೆಯನು ಪಡೆದು
ಮೂರವತಾರದಾ ಮಧ್ವಮುನಿರಾಯರಾ
ಚಾರು ಚರಣವನು ಭಜಿಪಾ – ಮುನಿಪಾ ೩

ಪುರಂದರದಾಸರಾ ಪರಮಾನುಗ್ರಹ ಪಾತ್ರ
ಗುರು ವಿಜಯರಾಯನೀತಾ
ಸಿರಿ ವಿಜಯ ವಿಠಲನ್ನ ಶ್ರೀನಿವಾಸಾರ್ಯರು
ಹರಿಯಾಜ್ಞೆಯಿಂದ ಕೊಟ್ಟರೂ – ದಿಟ್ಟರೂ ೪

ದಾನಧರ್ಮದಿ ಮಹಾ ಔದಾರ್ಯಗುಣದ ಶೌರ್ಯ
ಶ್ರೀನಿವಾಸನ ಪ್ರೇಮಕುಮಾರಾ
ಮಾನವೀ ಸೀಮೆ ಚೀಕನಪರಿ ನಿವಾಸ ಮೋ–
ಹನ ವಿಠಲನ್ನ ನಿಜದಾಸಾ – ಉಲ್ಲಾಸಾ ೫

## ೩೫

## ತಿರುಪತಿ ದಿಗ್ಗಾವಿ ಶ್ರೀನಿವಾಚಾರ್ಯರ ಸ್ತೋತ್ರ

ಶ್ರೀನಿವಾಸ ಗುರು ಗುಣಾಧೀಶ ।
ಪಾಲಿಸೊ ಭಕ್ತರ ತೋಷ
ನಾ ನಿನ್ನ ದಾಸ ಪ

ಏನಾದರು ಎನ್ನ ಹೀನತೆ ಎಣಿಸದೇ
ಸಾನುರಾಗದಿ ನಿನ್ನ ಅಧೀನದೊಳಗಿರುವುದು ಅ.ಪ.

ನಾನು ನನ್ನದು ಎಂಬುದು ಬಿಡಿಸಿ ।
ಸುಜ್ಞಾನವ ಕೊಡಿಸಿ ಸು–
ಜ್ಞಾನವಂತರ ಸಂಗದೊಳಿರಿಸಿ । ಸನ್ಮಾನದಿ ನೀ ಇಡಿಸಿ
ಮಾನಸದೊಳು ಅನುಮಾನವಿಲ್ಲದೇ ನಿನ್ನ
ಧ್ಯಾನವ ಕೊಡುವುದು ಉದಾಸೀನ ಮಾಡದೆ ನಿತ್ಯ ೧

ಅಗ್ನಿಹೋತ್ರವ ನಡೆಸುವ ತೆರದಿ । ಅಗ್ನ್ಯನ್ನನು ಮುದದಿ
ಸುಜ್ಞಾನಿ ನೀನೇ ಕರಗಳ ಪಿಡಿದೀ । ಅಜ್ಞಾನವ ಬಿಡಿಸೀ

ವಿಘ್ನವಗೊಳಿಸದೆ ಸರ್ವಜ್ಞ ಪಾದದೀ
ಮಗ್ನನ ಮಾಡು ಪ್ರಾಜ್ಞ ಶಿರೋಮಣಿ ೨

ನಿನ್ನ ನಂಬಿದ ಪಾಮರ ನಾನು । ಪಾವನ್ನ ನೀನು
ಎನ್ನ ಗುಣ ದೋಷಗಳನ್ನು । ಮನ್ನಿಸುವಾದೇನು
ಅನ್ನಂತ ಪಾಪಿ ನಾನು ನೀನಾದರೊ ದಯವನ್ನು ಮಾಡು
ನಿನ್ನ ಪೊಂದಿದೆ ಮಹಾನುಭಾವ ೩

ಹರಿದಾಸನು ಎನಿಸಿದ ಬಳಿಕ ಎನ್ನ ।
ಗುರು ಶಿರೋರನ್ನ ॥
ಪರಮ ಪಾತಕಿ ನಾನಾದರೂ ನಿನ್ನ
ಚರಣಕ್ಕೆ ಸುತ್ತಿದ ಬಿರಿದು ಬಿಡುವುದುಂಟೇ ೪

ಅನ್ಯರಿಗಾನು ಎರಗುವನಲ್ಲ । ನೀ ಬಲ್ಲಿ ಎಲ್ಲ
ಮನ್ನಿಸಿ ದಯದಿ ಎನ್ನಯ ಸೊಲ್ಲ ಶಿರಿ ಲ–
ಕ್ಷ್ಮೀ ನಲ್ಲ ಎನ್ನ ಪಿಡಿಯೊ ಮೋ–
ಹನ್ನ ವಿಠಲನ್ನ ತೋರಿ ಪಾವನನೆನಿಸುವುದು ೫

## ೩೬

ಶ್ರೀನಿವಾಸಾರ್ಯರ ಶೃಂಗಾರ ಗುಣಂಗಳ
ಆನೆಂತು ವರ್ಣಿಸುವೆನು ಪ

ದಾನವಾಂತಕ ಹರಿಯ ಮಾನಸಾರ್ಚನೆ ಮಾಳ್ಪ
ಮಾನಿಸಾ ವೇಷಧರರ ಇವರ ಅ.ಪ.

ನಿತ್ಯನ್ನ ದಾನದಲಿ ನಿರುತರಾಗಿದ್ದ ದಾಸೋತ್ತಮರೆನಿಸುತಿಹರ
ಶತೃ ಮಿತ್ರರ ಸಮದೃಷ್ಟಿಯಿಂದಲಿ ನೋಡಿ ಪುರುಷೋತ್ತಮನ ತೋರಿಸುವರ ॥

ನಿತ್ಯ ನೈಮಿಕವ ಮಾಡಿ ನಿರ್ಜರ ಪತಿಯ ಚಿತ್ತ ಸಂಪಾದಿಸುವರ
ಮತ್ತು ಗಜವೆಂಬ ದುರ್ವಾದಿಗಳನೇ ಮುರಿದು ಹತ್ತು ದಿಕ್ಕಿಲಿ ಮೆರೆವರ ಇವರ ೧

ಗುರುಗಳ ಪಾದುಕವ ಶಿರದಲ್ಲಿ ಧರಿಸಿನ್ನು ನರರ ವ್ಯಥೆಯನ್ನು ಕಳೆವರಾ
ಸಿರಿವರನ ಪಾದ ತೀರ್ಥವನೆರೆದು ಅಂಗಾರ ಕರಮುಟ್ಟಿ ಪಾಲಿಸುತ್ತಿಹರ ॥
ವರ ಮಂತ್ರಾಕ್ಷತೆಯನ್ನಿತ್ತು ಮುದದಿಂದ ಪಾ-
ಮರರನ್ನೆ ಪೊರೆವರ ಇವರ ೨

ಲಕ್ಷ್ಮೀಪತಿ ಶ್ರೀನಿವಾಸಾರ್ಯರೆಮ್ಮನು ಬಿಡದೆ ರಕ್ಷಿಸಲೆಂತೆಂಬೆನೊ
ಅಕ್ಷರ ಪುರುಷ ಅಪ್ರಾಕೃತಃ ತೋರಿ ಮದ ಮತ್ಸರವ ಬಿಡಿಸೆಂಬೆನೊ ॥
ಸೂಕ್ಷ್ಮಾಂಬರಧರ ಮೋಹನ ವಿಠಲನ
ಈ ಕ್ಷಣದಿ ತೋರಿಸೆಂಬೆನೊ ನಾನು ೩

## ೩೭

ಭಾಸ್ಕರನುದಿಸುತಿರಲು ದೋಷ ನಿಲ್ಲಲ್ಯಾಕೆ ಪ

ಭಂಗಾರ ದೊರಕಿರಲು ಬ್ಯಾಗಡಿಯ ಬಯಕ್ಯಾಕೆ
ಗಂಗಾಂಬು ಇರಲು ಕೂಪೋದ(ಕ ?)ವ್ಯಾಕೆ
ಶೃಂಗಾರ ಗುಣನಿಧಿ ಶ್ರೀನಿವಾಸಾರ್ಯರಾ
ಅಂಗಾರವಿರಲನ್ಯ ಔಷಧಗಳ್ಯಾಕೆ ೧

ತಾರಕ್ಷ ಮಂತ್ರವ ಜಪಿಸಿ ತಕ್ಷಕನ ಭಯವ್ಯಾಕೆ ಕಂ-
ಠೀರವನ ಜೈಸೆ ಕರಿ ಭಯವ್ಯಾಕೆ
ಸಾರ ಹೃದಯರು ನಮ್ಮ ಆಚಾರ್ಯ ರಾಯರ
ತೀರಿಥಾವಿರೆ ದುರಿತ ತಿರುಗಿ ಬರಲ್ಯಾಕೆ ೨

ಲೌಕಿಕಾಚಾರ ವರ್ಜಿತರೆಂಬ ಬಿರದಿನಲಿ ವೈ-
ದಿಕಾಚಾರದಲಿ ದಕ್ಷ ದೀಕ್ಷಾ

ಭವರೋಗ ವೈದ್ಯ ಮೋಹನ್ನ ವಿಠಲನ್ನ ಪ್ರೀಯ
ಕವಿಕುಲ ತಿಲಕನಿರೆ ಕಳವಳಿಸಲ್ಯಾಕೆ ೩

## ೩೮

ಪುಟ್ಟಿದನು ಮಗನೂ ಮಾದಮ್ಮಗೇ ಪ

ಪುಟ್ಟಿದ ವೈಶ್ಯ ಮಾದಮ್ಮಗೆ ಮಗ ರಂಡೆ
ವಿಠ್ಠಲ ಎಂತೆಂದು ಪೆಸರಿಟ್ಟು ಕರೆದರೂ ಅ.ಪ.

ನಗು ನಗುತಲೇ ನಾನು ಶ್ರೀಹರಿಗೆ ಕೈ
ಮುಗಿದು ಬೇಡಿಕೊಂಡೇನು ॥
ನಗಧರ ಮಾಡಿದ ಮಾಡಿದ ಪ್ರಪಂಚವು
ಜಗದಿಂದಲೇನಹುದೆಂದು ನುಡಿದಳು ೧

ನದಿಯ ಮಳಲು ಸರೀ ಪ್ರಜೆಗಳು
ಬದಿಯೊಳಗೆ ಕೈಕಾಲು ಮುರುಕೊಂ-
ಬದರಿಯದೆ ಒದಗಿರಲು ಮುದದಿಂದ
ಮಾದಮ್ಮ ಸುತ್ತ ಮುತ್ತಿತು ಲೋಕ ೨

ಆ ರಂಡೆ ವಿಠಲಾನ ಗುಡಿಯೊಳಗಿಟ್ಟು
ಶ್ರೀ ರಮಣಗೇ ಒಪ್ಪಿಸೇ ॥
ನೀರೆಣ್ಣೆ ನಾರು ಬತ್ತಿಯ ದೀಪ ಉರಿಯಲು
ಮೂರು ಲೋಕಕೆ ಆಶ್ಚರ್ಯವಾಯಿತು ೩

(ನಾಲ್ಕನೆಯ ನುಡಿ ಸಿಕ್ಕಿಲ್ಲ)

ಭ್ರಷ್ಟಳ ಆರುತಿಯ ಮೋಹನ್ನ
ವಿಠಲ ಕೈಗೊಂಡ ॥

ದೃಷ್ಟಾಂತವಾದುದು ಶಿಷ್ಟ ಜನರಿಗೆಲ್ಲ
ಶ್ರೇಷ್ಠಳಾದರು ಇಹಪರದಲ್ಲಿ ಎಂದರು ೫

## ಆತ್ಮನಿವೇದನೆಯ ಹಾಡುಗಳು

### ೩೯

ಡಂಭಕದ ಭಕುತಿಯನು ಬಿಡು ಕಂಡ್ಯ ಮನವೆ ಪ

ಅಂಬುಜಾಕ್ಷನು ಒಲಿಯ ಅನಂತ ಕಾಲಕ್ಕು ಅ.ಪ.

ಬಹಿರ ಅಂಗಡಿ ಹೂಡಿ ಜನರ ವಂಚಿಸಿದರೆ
ಅಹಿಕ ಫಲವಲ್ಲದೆ ಮೋಕ್ಷವುಂಟೆ ?
ವಿಹಿತಾ ವಿಹಿತವ ತಿಳಿದು ಸತ್ಕರ್ಮ ಕಿಂಚಿತು ಮಾಡೆ
ದಹಿಸುವುದು ಅಘರಾಶಿ ಅಹಿಶಾಯಿ ಒಲಿವ ೧

ವರ ವೈಷ್ಣವರು ಬಂದು ನಿಲಲು ವಂದಿಸದಲೆ
ಹರಿ ಪೂಜೆ ಮಾಳ್ಪೆನೆಂದು ಕುಳಿತುಕೊಂಬೆ
ಅರಿಯದ ಊರೊಳಗೆ ಅಗಸರ ಮಾಳಿಯೇ
ಹಿರಿಯ ಮುತ್ತೈದೆಯು ಎಂದು ಕರೆಸುವಂತೆ ೨

ಜಪವ ಮಾಡುವೆನೆಂದು ಮುಸುಕನಿಟ್ಟು ಕುಳಿತು
ತಪಿಸುವೆ ಒಳಗೆ ನೀ ಧನದಾಸೆಯಿಂದೆ
ಕುಪಿತ ಬುದ್ಧಿಯ ಬಿಟ್ಟು ಮೋಹನ್ನ ವಿಠ್ಠಲನ
ಗುಪಿತ ಮಾರ್ಗದಿ ಭಜಿಸಿ ಸುಪಥವನುಸರಿಸೆ ೩

### ೪೦

ಮನವೇ ಇದೆ ಮರೆಯಾದೆನಮ್ಮ
ಮನಸಿಜನಯ್ಯನ ನೆನೆಸಾದೆ ಹೋದೆ ಪ

ವೈಷ್ಣವ ಜನ್ಮವೆ ಬಯಸು ಏಕೋ
ವಿಷ್ಣು ಸದಯದಿ ಷಡ್ವರ್ಗವ ಜಯಿಸು ॥
ಜಿಷ್ಣು ಸಖನ ದಾಸ್ಯ ವಹಿಸು ನೀನೆ
ಶ್ರೇಷ್ಠನೆನ್ನದಲೇ ಶೀತೋಷ್ಣವ ಸಹಿಸು ೧

ನವ ವಿಧ ಭಕುತಿಯ ಮಾಡು ಪದ್ಮ
ಭವಾದ್ಯರು ಶ್ರೀಹರಿಗೆ ಎಲ್ಲಿ ಈಡು ॥
ಪವನಾ ಮತಕೆ ಉಂಟೇ ಜೋಡು ಮಾ–
ಧವನ ಮೂರ್ತಿಯ ಮನದಣಿಯ ನೀ ನೋಡು ೨

ಈಷಣ ತ್ರಯ ನಿರಾಕರಿಸು ಬಲು
ಭೂಷಣ ಬರುವದು ಕುಲವನುದ್ಧರಿಸು ॥
ದೋಷರಾಶಿಗಳ ಸಂಹರಿಸು ಶ್ರೀನಿ–
ವಾಸ ಮೋಹನ ವಿಠಲನ ಅಂಘ್ರಿ ಭಜಿಸು ೩

## ೪೧

ಪಾಪೋಸು ಹೋದುವಲ್ಲಾ ಪ

ಅಪಾರ ಜನ್ಮದಿಂದ ಆರ್ಜನ ಮಾಡಿದ ಅ.ಪ.

ಉರುಗಾದ್ರಿಯಲ್ಲಿ ಸ್ವಾಮಿ ಪುಷ್ಕರಣಿ ಮೊದಲಾದ
ಪರಿಪರಿ ತೀರ್ಥ ಸ್ನಾನಗಳ ಮಾಡಿ
ಹರಿದಾಸರ ಕೂಡ ಶ್ರೀನಿವಾಸ ಮೂರ್ತಿ
ದರುಶನದಲಿ ಮೈಮರೆತು ಇದ್ದೆನು ಎನ್ನ ೧

ಪರಮ ಭಾಗವತರು ಹರಿಕಥೆ ಹೇಳಲು
ಪರಮ ಹರ್ಷದಿಂದ ಕೇಳುತಿದ್ದೆ

ಪರಮ ಪಾಪಿಷ್ಟರ ಪಾಲಾಗಿ ಹೋದಾವು
ಪರಮಾತ್ಮನ ಚಿತ್ತಕೆ ಬಂದಿತೀಗೆನ್ನ ೨

ಮಾಯಿ ಒಲಿದು ಎನಗೆ ಕೊಂಡು ಕೊಟ್ಟಿದ್ದಳು
ದಾಯಿಗಾರರು ನೋಡಿ ಸಹಿಸಲಿಲ್ಲಾ
ಮಾಯಾರಮಣ ನಮ್ಮ ಮೋಹನ್ನ ವಿಠಲನ್ನ
ಮಾಯದಿಂದಲಿ ಮಟ್ಟವಾಯಿತು ಎನ್ನ ३

## ಲೋಕನೀತಿಯ ಹಾಡುಗಳು

### ೪೨

ಶ್ರೀನಾಥನ ನಾಮಾಮೃತ ರುಚಿಯೆಲ್ಲ
ಪರಮ ಭಕುತಗಲ್ಲದೆ ಪ

ಹೀನ ಮನುಜರು ಕೇಳಿ ಹಿರ್ರನೆ ಹಿಗ್ಗಿ
ಆನಂದಪಡಬಲ್ಲರೆ ಅ.ಪ.

ಕ್ಷೀರ ವಾರಿಯ ಕೂಟ ಮರಾಳ ತಿಳಿವಂತೆ
ನೀರು ಕೋಳಿಯು ಬಲ್ಲುದೆ
ಸಾರಮೇಯನ ಬಾಲ ನಳಿಗೆಯೊಳಿಟ್ಟರೆ
ನೇರವಾಗಬಲ್ಲದೆ
ದಾರು ಪ್ರತಿಮೆಗೆ ಸೀರೆಯನುಡಿಸಲು
ನಾರಿಯಾಗಬಲ್ಲುದೆ
ಭಾರತಿಪತಿ ಪಾದವರಿಯದ ಮನುಜನು
ನಾರಾಯಣನ ಬಲ್ಲನೆ ೧

ಉದರಕ್ಕೆ ಗ್ರಾಸವ ನಡೆಸದ ಮನುಜನು
ಮದುವೆ ಮಾಡಲು ಬಲ್ಲನೆ

ಸದನಕ್ಕೆ ಜನ ಬರೆ ಕದನವ ತೆಗೆವವ
ಬುಧರು ಎಂಬುದ ಬಲ್ಲನೆ
ವಿಧಿಯಂತೆ ಮಸೆದು ಮತ್ಸರಿಸುವವ ನಮಗೆ
ಹದುಳ ಹಾರೈಸುವನೆ
ಮದವೆಗ್ಗಳಿಸಿ ಮೆರೆವ ಮನುಜ ಹರಿ
ಪದಗಳರ್ಚಿಸಬಲ್ಲನೆ ೨

ಕನ್ನಡಿಯೊಳು ರೂಪು ಹೊಳೆದಂತೆ ಹಂಚಿನೊಳ್
ಇನ್ನು ಕಾಣಿಸಬಲ್ಲುದೆ
ಕಣ್ಣಿಲ್ಲದವನಿಗೆ ಚಿನ್ನವ ತೋರಲು
ಬಣ್ಣ ಹೇಳಲು ಬಲ್ಲನೆ
ಹೆಣ್ಣಿನ ಮೇಲಿನ ವ್ಯಾಮೋಹ ಬಿಡದವ
ಸಂನ್ಯಾಸಿಯಾಗುವನೆ
ಅನ್ಯ ದೈವಂಗಳ ಭಜಿಸುವ ನರಗೆ ಮೋ–
ಹನ್ನ ವಿಠ್ಠಲ ಒಲಿವನೇ ೩

## ೪೩

ಏನು ಮಾಡಿದರೇನು ಜ್ಞಾನವಿಲ್ಲದೆ ಮೋಕ್ಷವಿಲ್ಲ ಪ

ಆನೆಗೆ ಮಜ್ಜನವ ಮಾಡಿಸಿದಂತೆ ಅ.ಪ.

ವೇದ ಓದಿದರೇನು ಶಾಸ್ತ್ರ ಓದಿದರೇನು
ವಾದಿಸಿದರೇನು ತರ್ಕವನೆ ಮಾಡಿ ॥
ಪಾದದಲಿ ಗಂಗೆಯನು ಪಡೆದ ನಾರಾಯಣ ಅ–
ನಾದಿಯಂದು ಪಂಚಭೇದ ತಿಳಿಯದಲೇ ೧

ಯಾತ್ರೆ ಮಾಡಿದರೇನು ತೀರ್ಥ ಮಿಂದರೆ ಏನು
ಪಾತ್ರನೆನಿಸಿದರೇನು ಡಂಭದಿಂದಾ ॥

ಗಾತ್ರವನು ಬಳಲಿಸೀ ತಪವ ಮಾಡೀ ಅಗ್ನಿ-
ಹೋತ್ರ ಇಟ್ಟರೇನು ಹರಿಮಹಿಮೆ ತಿಳಿಯದಲೇ ೨

ದಾನ ಮಾಡಿದರೇನು ಧರ್ಮ ಮಾಡಿದರೇನು
ನಾನಾ ದೇಶಕೆ ಖ್ಯಾತಿ ಆದೀತೆಂದು ॥
ನಾನು ಎಂಬುದ ಬಿಟ್ಟು ಶ್ರೀನಿವಾಸನ ಗುಣವ
ಜ್ಞಾನದಲಿ ತಿಳಿದು ಆನಂದ ಪಡೆಯದಲೇ ೩

ದೇಶವಾಳಿದರೇನು ಕೋಶ ಗಳಿಸಿದರೇನು
ದಾಸಿದಾಸರನ ಸಲೆ ಆಳಲೇನು ॥
ಶ್ರೀಶ ಸರ್ವೋತ್ತಮ ಅಜ ಭವತ ಸುರರು-
ದ್ದಾಸರೆಂತೆಂದು ಉಲ್ಹಾಸವನು ಬಡದೇ ೪

ಹದ್ದಿನಂದದಲಿ ಬಹುಕಾಲ ಬಾಳಿದರೇನು
ಸದ್ಧರ್ಮ ವೃತ್ತಿಯನು ಅರಿದು ನಿತ್ಯಾ ॥
ಮಧ್ವ ವಲ್ಲಭ ಸಿರಿ ಮೋಹನ್ನ ವಿಠಲನ ಪಾದ-
ಪದ್ಮವ ನಿರಂತರದಿ ಪೊದ್ದಿಕೊಂಡಿರದೇ ೫

## ೪೪

ಕಂಡು ಕಂಡು ನಾನು ಹೇಗೆ ಸುಮ್ಮನಿರಲಿ ಪ

ಯಲ್ಲಮ್ಮ ಎಕನಾತಿ ಮೊದಲಾದ
ಚಿಲ್ಲರೆ ದೇವರುಗಳಲ್ಲಿ ನಿಷ್ಠೆ ಇಟ್ಟು ॥
ನಿಲ್ಲದೇ ಭಜಿಸಿ ಸಂತತಾ
ಪುಲ್ಲನಾಭನ ಬಿಟ್ಟು ಕ್ಷುಲ್ಲಕರನ ೧

ದೇವರೆಲ್ಲಾ ಸಮ್ಮತವೆಂದು
ಬೇವಿನ ಉಡಿಗೆ ಊಟಾನಿಟ್ಟು ॥

ಜೀವ ಹರಿಗೆ ಐಕ್ಯವ ಪೇಳುವ
ಕೇವಲ ತಾಮಸ ಜೀವಿಗಳನ ೨

ಅಹಂಕಾರದಿಂದಲಿ ಕೆಟ್ಟು
ದೇಹಿ ಎಂಬೋ ವಾಕ್ಯವ ಬಿಟ್ಟು ॥
ರಹಸ್ಯದಿಂದಲಿ ಶ್ರೀ ಹರಿಯ ಬಿಟ್ಟು
ಮೋಹನ್ನ ವಿಠಲನ ಸೋಹಂ ಎಂಬರ ೩

೪೫

ಜ್ಞಾನವಂತರ ಸಂಗವಿರಲು ಸ್ನಾನವ್ಯಾತಕೆ ಪ

ನಾನು ಎಂಬುದ ಬಿಟ್ಟ ಮೇಲೆ ನರಕವ್ಯಾತಕೆ ಅ.ಪ.

ಮೃತ್ತಿಕೆ ಶೌಚ ಮಾಡದವನ ಆಚಾರವ್ಯಾತಕೆ
ಸತ್ಯವಾದಿ ಆಗದವನ ನಂಬಿಗೆ ಯಾತಕೆ ॥
ಚಿತ್ತಶುದ್ಧಿ ಇಲ್ಲದವನ ವೈರಾಗ್ಯವ್ಯಾತಕೆ
ಉತ್ತಮ ಹಿರಿಯರಿಲ್ಲದಂಥ ಸಭೆಯು ಯಾತಕೆ ೧

ಪತಿಯ ಆಜ್ಞೆ ಮೀರಿದವಳ ವ್ರತಗಳ್ಯಾತಕೆ
ಸತಿಗೆ ಅಳುಕಿ ನಡಿಯುವವನ ಸಾಹಸವ್ಯಾತಕೆ ॥
ಯತಿಯ ನಿಂದೆ ಮಾಡುವವನ ಮತಿಯು ಯಾತಕೆ
ಅತಿ ವಿರೋಧ ಬಡಿಸುವಂಥ ಅಣ್ಣನ್ಯಾತಕೆ ೨

ಹರಿಕಥೆಯ ಕೇಳದವನ ಕಿವಿಯು ಯಾತಕೆ
ಮುರಹರನ ಮೂರ್ತಿಯ ನೋಡದಂಥ ಕಂಗಳ್ಯಾತಕೆ ॥
ಮರುತ ಮತವ ಪೊಂದದವನ ಬಾಳ್ವೆ ಯಾತಕೆ
ಎರಡಾರು ನಾಮವಿಡದ ಶರೀರವೇತಕೆ ೩

ತಂದೆ ತಾಯಿ ಮಾತು ಕೇಳದ ಮಕ್ಕಳ್ಯಾತಕೆ
ಬಂಧು ಬಳಗ ಉಳ್ಳದವನ ಭಾಗ್ಯವ್ಯಾತಕೆ ॥
ಬಂದ ಅತಿಥಿಗನ್ನವನಿಕ್ಕದ ಸದನವೇತಕೆ ಗೋ–
ವಿಂದನಂಘ್ರಿ ಸ್ಮರಿಸದಂಥ ನಾಲಿಗ್ಯಾತಕೆ ೪

ಮಕ್ಕಳನ್ನ ಮಾರಿಕೊಂಬ ತಂದೆಯಾತಕೆ
ರೊಕ್ಕಕಾಗಿ ಬಡಿದಾಡುವ ತಮ್ಮನ್ಯಾತಕೆ ॥
ಕಕ್ಕುಲಾತಿ ಬಡುವ ಸಂನ್ಯಾಸವ್ಯಾತಕೆ
ಠಕ್ಕು ಭಕುತಿ ಮಾಡುವಂಥ ದಾಸನ್ಯಾತಕೆ ೫

ಆಗಿ ಬರದವರ ಅನ್ನ ಉಣ್ಣಲ್ಯಾತಕೆ
ರೋಗವಾದ ನರಗೆ ಹೆಣ್ಣಿನ ಭೋಗವ್ಯಾತಕೆ ॥
ಯೋಗಿಯಾದ ಮೇಲೆ ದ್ರವ್ಯದ ಆಶೆಯಾತಕೆ
ಭಾಗೀರಥಿಯ ಮಿಂದ ಮೇಲೆ ಪಾಪವ್ಯಾತಕೆ ೬

ವೇದವನ್ನು ಓದದಂಥ ವಿಪ್ರನ್ಯಾತಕೆ
ಕಾದೊ ರಣಕೆ ಅಂಜುವಂಥ ಕ್ಷತ್ರಿಯನ್ಯಾತಕೆ ॥
ವಾದವನ್ನು ಮಾಡುವಂಥ ಬಂಟನ್ಯಾತಕೆ
ಸಾಧುಗಳಿಗೆ ಎರಗದವನ ಶಿರವಿದ್ಯಾತಕೆ ೭

ಯಾತ್ರೆ ತೀರ್ಥ ಮಾಡದಂಥ ಪಾದವ್ಯಾತಕೆ
ಪಾತ್ರರ ಸಂಗವಾಗದವನ ಜನ್ಮವ್ಯಾತಕೆ ॥
ಸ್ತೋತ್ರಕೆ ಮರುಳಾಗುವವಗೆ ಸಾಧನ್ಯಾತಕೆ
ಪಾರ್ಥ ಸಖನ ತಿಳಿಯದವನ ಜ್ಞಾನವ್ಯಾತಕೆ ೮

ಗುರೂಪದೇಶವಿಲ್ಲದಂಥ ಮಂತ್ರವ್ಯಾತಕೆ
ಅರಿತು ವಿದ್ಯ ಪೇಳದ ಉಪಾಧ್ಯನ್ಯಾತಕೆ ॥
ಹರುಷವನ್ನು ತಾಳದಂಥ ಜ್ಞಾನಿ ಯಾತಕೆ
ಕರಣ ಶುದ್ಧಿ ಇಲ್ಲದವನ ಸ್ನೇಹವ್ಯಾತಕೆ ೯

ಕಣ್ಣು ಕಾಣದ ಕುರುಡನಿಗೆ ಕನ್ನಡಿ ಯಾತಕೆ
ಘನ್ನ ಗಾಣ ಕಟ್ಟಿದೆತ್ತಿಗೆ ಗೆಜ್ಜೆಯಾತಕೆ ॥
ರಾಣಿ ಇಲ್ಲದವನು ಮಾಡುವ ಬದುಕು ಯಾತಕೆ
ತಾನು ಉಣ್ಣದೆ ಪರರಿಗಿಕ್ಕದ ಧನವಿದ್ಯಾತಕೆ ೧೦

ಧರ್ಮವಿಲ್ಲದೆ ರಾಜ್ಯ ಆಳುವ ಪ್ರಭುವಿದ್ಯಾತಕೆ
ಮರ್ಮವರಿತು ನಡೆಯದಂಥ ಹೆಣ್ಣು ಯಾತಕೆ ॥
ನಿರ್ಮಲಾಂಗನಾದ ಮೋಹನ ವಿಠಲನ ಗುಣ
ಕರ್ಮ ಕ್ರಿಯಾ ತಿಳಿದ ಮ್ಯಾಲೆ ನಿರ್ಣಯವ್ಯಾತಕೆ ೧೧

## ೪೬

ಜರ ಇನ್ಯಾತಕೆ ಬಂತಮ್ಮಾ ಸಜ್ಜನರಿಗೆ
ಜರ ಇನ್ಯಾತಕೆ ಬಂತಮ್ಮಾ ಸಜ್ಜನರಿಗೆ ಪ

ಜರ ಇನ್ಯಾತಕೆ ಬಂತು ಪರಮೇಷ್ಠಿ ಜನಕಾನೆ
ಪರನೆಂದು ತಿಳಿಸಾದೆ ಪರಗತಿಯ ತೋರದ ಅ.ಪ.

ಸ್ನಾನವ ಮಾಡಿಕೊಂಡು ಕುಳಿತು ಬಲು
ಮೌನದಿಂದಿರಲೀಸಾದೆ ॥
ಶ್ರೀನಿವಾಸನ ಧ್ಯಾನ ಮಾಡಾದೆ ಮನಸು
ಶ್ವಾನನೋಪಾದಿಯಲ್ಲಿ ತಾ ಓಡುವಂಥ ೧

ಜಪ ಮಾಡುವ ಕಾಲದಲ್ಲಿ ಕರೆಯ ಬರೆ
ವಿಪರೀತವಾಗುವದು ಮನಸು ॥
ಸ್ವಪನದಂತೆ ಮನಸಿಗೆ ಪೊಳದು ಬಲು
ಸುಪಥವ ತಪ್ಪಿಸಿ ಅಪಗತಿ ಕೊಡುವಂಥ ೨

ಯಜಮಾನನು ಮಾಡಿದ ಪಾಪಂಗಳ
ವ್ರಜವು ಬಿಡದೆ ಅನ್ನದೊಳಗಿಪ್ಪುದ ॥

ದ್ವಿಜನು ಭುಂಜಿಸಲಾಗಿ ಅವನ ಉದರದೊಳು
ನಿಜವಾಗಿ ಇಪ್ಪಾವು ಸುಜನಾರು ಲಾಲಿಸಿ ೩

ಉದರದೊಳಗೆ ಬಿಚ್ಚದ ಸಾವಿರಾರು
ವಿಧವಾಗುವದು ಕೇಳು ॥
ಅದೇ ದೇಹ ಪುಷ್ಟಿ ಮಲ ರೇತಸ್ಸು
ಅದೇ ಪಾಪಿಗೆ ತಿಳಿಯದೆ ಭುಜಿಸುವಂಥ ೪

ಕೆಳಗೆ ಕುಳ್ಳಿರಿಸಿದಾರೆ ಜ್ಞಾನಿ–
ಗಳ ಬೊಗಳುವೆ ಕುನ್ನಿಯಂಪದಿ ॥
ಒಳಗೆ ಕರದು ಒಯ್ದು ಬೆಳಗಿಲಿ
ಕುಳ್ಳಿರಿಸೆ ಸಾಯಂ ಪ್ರತಿ ಸ್ತುತಿ ಮಾಡುವಾ ೫

ಪ್ರಸ್ತದಾ ಮನೆಯೊಳಗೆ ಕರೆಯಾದಲ್ಲಿಗೆ
ಸ್ವಸ್ಥಾದಿ ನೀ ಕುಳಿತುಕೊಂಡು ॥
ವಿಸ್ತಾರದಿ ಹಾರೈಸಿ ಪ್ರ–
ಶಸ್ತವಾಯಿತೆಂದೂ ಮಸ್ತಕ ತಿರುಹುವೆ ೬

ಮಾಡಿದ ಮಹಾ ಪುಣ್ಯದ ಓದನಕಾಗಿ
ಕಾಡಿಗೊಪ್ಪಿಸಿ ಪೋದಂತಾಯಿತು ॥
ಗಾಡಿಕಾರ ಮೋಹನ್ನ ವಿಠಲನ
ಪಾಡಿ ಪೊಗಳಿ ಕೊಂಡಾಡಿಕೊಂಡಿರದಂತೆ ೭

## ೪೭

ಬೇಡವೋ ಬ್ರಾಹ್ಮಣ ದ್ರೋಹ ಬೇಡವೋ ಪ

ಮಾಡಬೇಡವೋ ನಿನಗೆ । ಕೇಡು ತಪ್ಪದು ಕೊನೆಗೆ
ನಾಡೊಳಗಪಕೀರ್ತಿ । ಗೀಡಾಗಿ ನೀ ಕೆಡ ಅ.ಪ.

ಹೊತ್ತಿದ್ದ ಬಹು ಭಾರ ನೀನು - ಅಂಥ
ಅತ್ಯಂತವಲ್ಲವಿದೇನು - ನಿನ್ನ ॥
ಚಿತ್ತ ದೃಢ ಮಾಡು ಉತ್ತಮ ವಿಪ್ರರ
ವೃತ್ತಿಯ ಸೆಳದು ಉನ್ಮತ್ತನಾಗಿ ಕೆಡ ೧

ಸೂಸುವ ನದಿಯೊಳು ಬಿದ್ದು - ಇನ್ನು
ಈಸಲಾರದೆ ಮುಳುಗೆದ್ದು - ಅಂಜಿ ॥
ಈಸು ಬುರುಡೆ ಬಿಟ್ಟು ಬೀಸೋ ಕಲ್ಲನೆ ಕಟ್ಟಿ
ಈಸುವ ತೆರನಂತೆ ಭೂಸುರ ದ್ರವ್ಯವು ೨

ನೃಗರಾಯನೆಂಬ ಭೂಪತಿಯು - ವಿಪ್ರ-
ರಿಗೆ ಗೋದಾನವನಿತ್ತ ಬಗೆಯ ಕೇಳಿ ॥
ಅಗಲಿ ತಮ್ಮೊಳು ತಾವೆ ಜಗಳ ಪುಟ್ಟಿ ಆ ನೃ-
ಪಗೆ ತೊಣ್ಣೆಯಾಗೆಂದ್ಧಗರಣವನೆ ಕೇಳು ೩

ರಾವಣನೆಂಬುವ ದುಷ್ಟ - ಅವ-
ದೇವತೆಗಳ ಸೆರೆಯಿಟ್ಟ ॥
ದೇವನರಸಿ ಸೀತಾದೇವಿಯ ನೆಪದಿಂದ
ರಾವಣನ ಕೊಂದು ದೇವತೆಗಳ ಕಾಯ್ದನೊ ೪

ಇನ್ನೆಷ್ಟು ಹೇಳಲೊ ಸಾಕ್ಷಿ - ಬ್ರಾಹ್ಮ -
ರನ್ನವ ತೆಗೆದರೆ ಶಿಕ್ಷಿ ಮೋ-
ಹನ್ನ ವಿಠ್ಠಲರಾಯ ತನ್ನಯ ಭಜಕರ
ಬೆನ್ನ ಬಿಡದಲೆ ಕಾಯ್ವ ಇನ್ನಾದರು ಕೆಡ ೫

## ೪೮

ಆವ ಕುಲವಾದರೇನು ಶ್ರೀ ವಾಸು-
ದೇವನೆಂದವನೆ ಧನ್ಯಾ ಪ

ಭಗವಂತನಲ್ಲಿ ಭಕುತಿ ಉಳ್ಳ ಮಾ-
ದಿಗನೆ ಉತ್ತಮ ಜಾತಿಯೋ
ನಗಧರನ ನೆನೆಯದಿಪ್ಪ ವಿಪ್ರ ಮಾ-
ದಿಗಗಿಂತ ನಿಕೃಷ್ಟನೋ ೧

ಊರ್ಧ್ವ ಪುಂಡ್ರಗಳ ಧರಿಸೀ ಶಿರದಲ್ಲಿ
ಪದ್ಮಾಕ್ಷಿ ತುಲಸಿ ಮಾಲೆ ಹಾಕಿ
ಮಧ್ವ ವಲ್ಲಭನೆನ್ನದಾ ಆ ವಿಪ್ರ
ಶುದ್ಧ ಚಾಂಡಾಲನೆನ್ನೋ ೨

ಪಂಚ ಮುದ್ರೆಗಳ ಧರಿಸೀ ಲೋಕ ಪ್ರ-
ಪಂಚಕ್ಕೆ ದಾಸನೆನಿಸೀ
ಪಂಚ ಭೇದವು ತಿಳಿಯದಾ ಆ ವಿಪ್ರ
ಪಂಚ ಮಹಾ ಪಾತಕಿಯೋ ೩

ನಾರದಾನೆಂಬವನನೂ ಕುಲದಲ್ಲಿ
ಆರೆಂದು ತಿಳಿಯೊ ನೀನು ನಮ್ಮ
ನಾರಾಯಣನ ಸ್ಮರಿಸಲು ನೀಚ್ಯೋನಿ
ಮೀರಿ ಸುರಮುನಿಯಾದನೋ ೪

ವಿದುರ ವಾಲ್ಮೀಕರ ನೋಡು ಅವರ ತುದಿ
ಮೊದಲು ನೀ ತಿಳಿದು ನೋಡು ನಮ್ಮ
ಮದನನಯ್ಯನ ಭಜಿಸಲು ಅವರೆಲ್ಲ
ಸದಮಲಾರಾದುದರಿಯಾ ೫

ಜಾತಿ ಕಾರಣವಲ್ಲವೋ ಶ್ರೀ ಹರಿಗೆ
ಭೂತಿ ಕಾರಣವಲ್ಲವೋ ॥
ಸ್ವಾತಂತ್ರ್ಯವನ್ನು ಮರೆದು ಶ್ರೀ ಹರಿಯ
ಪ್ರೀತ್ಯಾಗಲೆನ್ನಬೇಕೋ ೬

ಅನ್ಯ ಕರ್ತೃತ್ವ ಮರೆದು ಶ್ರೀ ಹರಿಗೆ
ನಿನ್ನ ನಿನ್ನವನೆಂದಡೇ
ತನ್ನ ದಾಸ್ಯವನೆ ಇತ್ತು ನಮ್ಮ ಮೋ–
ಹನ್ನ ವಿಠ್ಠಲ ಸಲಹುವಾ ೭

೪೯

ಗುರುವಿನ ಧರ್ಮ ಕೋರಾಣ್ಯದ ಭಿಕ್ಷ
ಅರಿತು ನೀಡಲು ಮೋಕ್ಷ ಪ

ಮರೆತು ಬಿಟ್ಟರೆ ಕಪಾಳ ಮೋಕ್ಷ
ಯಮನಲ್ಲಾಹೋದು ಶಿಕ್ಷ ಅ.ಪ.

ಖಂಡುಗ ಜೀವವ ಕೈಲ್ಹಿಡಕೊಂಡು
ಮಂಡೆ ಬಾಗಿ ನಿಮ್ಮಂಗಳದೊಳಗೆ
ಅಂಡಲೆಯಲು ಮೋರೆ ಹಿಂಡಿ–
ಕೊಂಡರೆ ಯಮ ದಂಡನೆ ತಪ್ಪದೋ ೧

ಜಂಗಮರು ಜಗತ್ಪಾವನರು
ಲಿಂಗಾಂಗಿಗಳು ನಿಸ್ಸಂಗಿಗಳು
ಹಿಂಗದೆ ಸೀತಾಂಗನೆ ಭರ್ತನ ಪದ
ಉಂಗುಟ ತೊಳೆದು ಅಗ್ಗಣಿ ಧರಿಸಿರೋ ೨

ಐವತ್ತಾರು ದೇಶದ ಒಳಗೆ ಇಪ್ಪತ್ತೊಂದು
ಸಾವಿರದಾರ್ನೂರು
ಕೈವಲ್ಯ ಸಾಧನ ನಮಗಿರಲು ಭಯ–
ವೆತ್ತಣದೋ ಮೋಹನ್ನ ವಿಠ್ಠಲ ೩

## ೫೦

ತುರುಕರಿಲ್ಲದ ಊರೊಳು ಇರಬಾರದು ಪ

ತುರುಕರು ಜಗದೊಳು ಪರಮ ಶ್ರೇಷ್ಠರು ಕಾಣೋ ಅ.ಪ.

ತುರುಕರು ಕರೆದರೆ ಉಣಬಹುದು ಉಡಬಹುದು
ತುರುಕರಿಂದಲಿ ಜಗಕೆ ಪರಮ ಸೌಖ್ಯಾ ॥
ತುರುಕರ ಸೇವೆ ಮಾಡಿದ ಮಾನವೋತ್ತಮನು
ಎರಡೊಂದು ಋಣದಿಂದ ಮುಕ್ತನಾಹಾ ೧

ತುರುಕರಾ ನಿಂದಕನು ಪರಮ ದುಃಖಿಯು ಸಿದ್ಧ
ತುರುಕರ ಅರ್ಚಿಸಿದವಗೆ ಪರಮ ಪದವೀ ॥
ತುರುಕರಿಗೆ ಗ್ರಾಸವಿತ್ತವನ ಫಲಕೆಲ್ಲು ಸರಿಗಾಣೆ
ಸರಿಗಾಣೆ ಧರೆಯೋಳು ಅವನೆ ಧನ್ಯಾ ೨

ತುರುಕರಾ ಪತಿ ಹರನು ತುರುಕರಿಂದಲಿ ಸಿರಿಯು
ತುರುಕರಿಂದಲಿ ಜಗಕೆ ಬೈಗು ಬೆಳಗೂ ॥
ತುರುಕರಾ ಪಾಲ ಶ್ರೀ ಗೋಪಾಲಕೃಷ್ಣನ್ನ
ಸ್ಮರಣೆ ಮಾಡುತಲಿರೆ ಮೋಹನ್ನ ವಿಠಲ ಒಲಿವಾ ೩

## ೫೧

ಹೊಲೆಯರಿಲ್ಲದ ಊರೊಳು ಇರಬಾರದು ಪ

ಹೊಲೆಯರು ಬೆಳೆದರೆ ಉಣಲುಂಟು ಉಡಲುಂಟು ಅ.ಪ.

ಹೊಲೆಯರ ಸೇವಿಸಲು ಶುಭ ಶೋಭನ ಉಂಟು
ಹೊಲೆಯರ ನಿಂದಕನು ನಿರ್ಭಾಗ್ಯನು

ಹೊಲೆಯರಿಗೆ ಉಣಲಿಕ್ಕಿದವನ ಫಲಕ್ಕೆ
ನೆಲೆಗಾಣೆ ನೆಲೆಗಾಣೆ ಧರೆಯೊಳಗೆ ನಾನು ೧

ಹೊಲೆಯರು ಮುನಿದರೆ ನೆಲೆಯಿಲ್ಲ ನಿಭ ಇಲ್ಲ
ಹೊಲೆಯರು ಒಲಿದರೆ ಕಷ್ಟವಿಲ್ಲ
ಹೊಲೆಯರೇ ನಮ್ಮ ಸಲಹಲಿ ಸಾಕಲಿ ಎಂದು
ಫಲ್ಗುಣನ ಸಾರಥಿಯ ಪ್ರಾರ್ಥಿಸಿಕೊಳ್ವರು ೨

ಹೊಲೆಯರಿಂದಲಿ ಸಕಲ ದೇವತೆಗಳ ಪೂಜೆ
ಹೊಲೆಯರಿಂದಲಿ ಸಕಲ ಬಂಧು ಬಳಗ
ಹೊಲೆಯರಿಗೆ ಸ್ವಾಮಿ ಮೋಹನ್ನ ವಿಠ್ಠಲ
ಧೊರಿಯೆ ಪಾಂಡವರ ಪ್ರಿಯನೆಂದೆನ್ನು ೩

## ೫೨

ಜಂಗಮರು ನಾವು ಲಿಂಗಾಂಗಿಯಾರು
ಮಂಗಳಾವಂತರು ಭವಿಗಳಂತಲ್ಲಾ ಪ

ಶಿವ ಗುರುದೈವ ಕೇಶವ ನಮ್ಮ ಪರದೈವ
ಭುವನ ಜೀವನ ನಮ್ಮ ಗುರು ಶಾಂತನೂ ॥
ಶಿವನ ದ್ರೋಹವ ಮಾಡುವನೆ ಅಪರಾಧಿ
ಅವನೆ ಅದ ತಿಳಿಯುವನು ಶ್ರುತಿ ಸಮ್ಮತಾ ೧

ವಿಭೂತಿ ನಮಗುಂಟು ವಿಶ್ವೇಶ್ವರಾರುಂಟು
ಶೋಭನಾವಾದ ನಾಮ ಎಮಗುಂಟು ॥
ಶ್ರೀ ಭಾಗೀರಥಿಯ ಅಗ್ಗಣದ ಮಜ್ಜನ ಉಂಟು
ಸೌಭಾಗ್ಯವಿಹ ಮಹಾಂತನ ಮಠದವರೂ ೨

ವಿರಕ್ತರಾವು ಸುಶೀಲವಂತರು ನಾವು
ವೀರಭದ್ರನ ಪ್ರೀಯ ಭಕ್ತರಾವೂ ॥
ಕಾರಣಾ ಕರ್ತ ಶ್ರೀ ಮೋಹನ ವಿಠಲನೆ
ಕಾರುಣ್ಯ ಮಾಡು ದಮ್ಮಯ್ಯ ಎಂಬುವರಾವು ೩

## ಸಂಪ್ರದಾಯದ ಹಾಡುಗಳು

### ೫೩

### ಕೋಲು ಹಾಡು

ಆಕಾಶಕಭಿಮಾನಿ ಶ್ರೀಕಂಠ ವರಪುತ್ರ
ಏಕದಂತನೆ ವಿಘ್ನೇಶ ಕೋಲೆ
ಏಕದಂತನೆ ವಿಘ್ನೇಶ ನಿನ್ನ ಪದ
ಏಕ ಚಿತ್ತದಲಿ ಬಲಗೊಂಬೆ ಕೋಲೆ ೧

ನೆನೆಯಕ್ಕಿ ನೆನೆಗಡಲೆ ಗೊನೆಯ ಬಾಳೆಯ ಹಣ್ಣು
ಘನವಾದ ಚಿಗುಳಿ ತಂಬಿಟ್ಟು ಕೋಲೆ
ಘನವಾದ ಚಿಗುಳಿ ತಂಬಿಟ್ಟು ತಂದೀವೆ
ಗಣಪತಿ ಮತಿಯ ಕರುಣಿಸು ಕೋಲೆ ೨

ಜಗದುತ್ಪತ್ತಿ ಸ್ಥಿತಿ ಲಯಕೆ ಕಾರಣನಾದ
ಜಗದೀಶ ಜಾಹ್ನವಿ ಜನಕನೆ ಕೋಲೆ
ಜಗದೀಶ ಜಾಹ್ನವಿ ಜನಕ ನಾರಾಯಣ
ನಗಧರನ ಮುನ್ನ ಬಲಗೊಂಬೆ ಕೋಲೆ ೩

ಮಚ್ಛ ಕೂರುಮ ವರಹ ನರಸಿಂಹ ವಾಮನ
ಸ್ವಚ್ಛ ಭೃಗುರಾಮ ರಘುರಾಮ ಕೋಲೆ

ಸ್ವಚ್ಛ ಭೃಗುರಾಮ ರಘುರಾಮ ಕೃಷ್ಣ ಬೌದ್ಧ
ಅಚ್ಚ ಕಲ್ಕಿಯ ಬಲಗೊಂಬೆ ಕೋಲೆ ೪

ಈಶ ಬ್ರಹ್ಮರಿಗೆ ನಿಯಾಮಕನಾಗಿದ್ದು
ಪೋಷಿಸುತಿಪ್ಪ ಪರಮಾತ್ಮ ಕೋಲೆ
ಪೋಷಿಸುತಿಪ್ಪ ಪರಮಾತ್ಮನಾದ ಶ್ರೀ
ಕೇಶವನ ಮೊದಲೆ ಬಲಗೊಂಬೆ ಕೋಲೆ ೫

ನೀರಿಗಾಶ್ರಯನಾಗಿ ನೀರೊಳು ಮಲಗಿಪ್ಪ
ನೀರಜ ನೇತ್ರ ನಿಗಮಾತ್ಮ ಕೋಲೆ
ನೀರಜ ನೇತ್ರ ನಿಗಮಾತ್ಮನಾದ ಶ್ರೀ
ನಾರಾಯಣನ್ನ ಬಲಗೊಂಬೆ ಕೋಲೆ ೬

ಯಾದವ ಕುಲಜನೆ ಸಾಧುಗಳರಸನೆ
ಮಾದೇವಿಗಾಶ್ರಯನಾಗಿಪ್ಪ ಕೋಲೆ
ಮಾದೇವಿಗಾಶ್ರಯನಾಗಿ ಪಾಲಿಸುವ
ಮಾಧವನ್ನ ಮೊದಲೆ ಬಲಗೊಂಬೆ ಕೋಲೆ ೭

ಚಂದದಿಂದ ವೇದ ವೃಂದ ಪ್ರತಿಪಾದ್ಯನೆ
ಇಂದಿರಾದೇವಿ ರಮಣನೆ ಕೋಲೆ
ಇಂದಿರಾದೇವಿ ರಮಣನಾದ ಗೋ–
ವಿಂದನ್ನ ಮೊದಲೆ ಬಲಗೊಂಬೆ ಕೋಲೆ ೮

ಸೃಷ್ಟಿಯೊಳಗೆಲ್ಲ ವ್ಯಾಪ್ತನಾಗಿರುತಿಪ್ಪ
ವೈಷ್ಣವಕುಲಕೆ ತಿಲಕನೆ ಕೋಲೆ
ವೈಷ್ಣವ ಕುಲಕೆ ತಿಲಕನಾದ ಶ್ರೀ
ವಿಷ್ಣುವಿನ ಮೊದಲೆ ಬಲಗೊಂಬೆ ಕೋಲೆ ೯

ಅಧಮನಾಗಿದ್ದಂಥ ಅಸುರನ ಸಂಹರಿಸಿ
ಮುದವ ಬೀರಿದನೆ ಸುರರಿಗೆ ಕೋಲೆ

ಮುದವ ಬೀರುತ ಸುರರ ಪಾಲಿಸುವಂಥ
ಮಧುಸೂದನನ್ನ ಬಲಗೊಂಬೆ ಕೋಲೆ ೧೦

ಚಿಕ್ಕ ಬ್ರಾಹ್ಮಣನಾಗಿ ಬಲಿಯ ದಾನವ ಬೇಡಿ
ಆಕ್ರಮಿಸಿದನೆ ತ್ರಿಲೋಕವ ಕೋಲೆ
ಆಕ್ರಮಿಸಿ ತ್ರಿಲೋಕವನಳೆದ ತ್ರಿ–
ವಿಕ್ರಮನ್ನ ಮೊದಲೆ ಬಲಗೊಂಬೆ ಕೋಲೆ ೧೧

ಭೂಮಿಯೊಳಗೆ ಅತಿ ಸಂಭ್ರಮನಾಗಿದ್ದ
ಕಾಮಿತಾರ್ಥಂಗಳ ಕರೆವನೆ ಕೋಲೆ
ಕಾಮಿತಾರ್ಥಂಗಳ ಕರೆದು ಭಕ್ತರ ಪೊರೆವ
ವಾಮನನ್ನ ಮೊದಲೆ ಬಲಗೊಂಬೆ ಕೋಲೆ ೧೨

ವೇದಾಭಿಮಾನಿಗೆ ಸಾದರವಾಗಿಪ್ಪ
ಬೌದ್ಧ ಮೂರುತಿಯೇ ಭವದೂರ ಕೋಲೆ
ಬೌದ್ಧ ಮೂರುತಿಯೇ ಭವದೂರನಾದ ಶ್ರೀ
ಶ್ರೀಧರನ್ನ ಮೊದಲೆ ಬಲಗೊಂಬೆ ಕೋಲೆ ೧೩

ಸಾಕಾರ ಮೂರುತಿ ಸರ್ವೇಂದ್ರಿ ನಿಯಾಮಕ
ನಾಕೇಶ ವಂದ್ಯ ನಳಿನಾಕ್ಷ ಕೋಲೆ
ನಾಕೇಶ ವಂದ್ಯ ನಳಿನಾಕ್ಷನಾದ ಹೃಷಿ–
ಕೇಶ ಹರಿಯ ಬಲಗೊಂಬೆ ಕೋಲೆ ೧೪

ಪದುಮ ಸಂಭವ ಪಿತ ಪದುಮಿನಿ ವಲ್ಲಭ
ಪದುಮ ಪೊಕ್ಕುಳಲಿ ಪಡೆದನೆ ಕೋಲೆ
ಪದುಮ ಪೊಕ್ಕುಳಲ್ಲಿ ಪಡೆದು ಪಾಲಿಸುವಂಥ
ಪದುಮನಾಭನ ಮುನ್ನ ಬಲಗೊಂಬೆ ಕೋಲೆ ೧೫

ಕಾಮಿನಿ ಯಶೋದೆ ಒರಳಿಗೆ ಕಟ್ಟಲು
ಶ್ರೀ ಮನೋಹರ ಶೆಳೆದೊಯ್ದ ಕೋಲೆ

ಶ್ರೀ ಮನೋಹರ ಶೆಳೆದು ಪಾಪವ ಕಳೆದ
ದಾಮೋದರನ್ನ ಬಲಗೊಂಬೆ ಕೋಲೆ ೧೬

ಕಿಂಕರರ ಚಿತ್ತ ದುರ್ವಿಷಯಕ್ಕೆರಗಲು
ಪಂಕಜನಾಭ ಶಳೆದನೆ ಕೋಲೆ
ಪಂಕಜನಾಭ ಶಳೆದು ತನ್ನಲ್ಲಿಡುವ
ಸಂಕರುಷಣನ್ನ ಬಲಗೊಂಬೆ ಕೋಲೆ ೧೭

ಏಸು ಬ್ರಹ್ಮಾಂಡದೊಳು ವಾಸವಾಗಿರುತಿಪ್ಪ
ದಾಸವರ್ಗವನೆ ಪೊರೆವನೆ ಕೋಲೆ
ದಾಸ ವರ್ಗವನೆ ಪೊರೆವನೆ ನಮ್ಮ ಶ್ರೀ
ವಾಸುದೇವನ್ನ ಬಲಗೊಂಬೆ ಕೋಲೆ ೧೮

ಮುದ್ದು ಮೊಗದ ದೈವ ಅದ್ವೈತ ಮಹಿಮನೆ
ಸದ್ವೈಷ್ಣವರ ಪೊರೆವನೆ ಕೋಲೆ
ಸದ್ವೈಷ್ಣವರ ಪೊರೆವನೆ ಅಜನಯ್ಯ
ಪ್ರದ್ಯುಮ್ನ ಹರಿಯ ಬಲಗೊಂಬೆ ಕೋಲೆ ೧೯

ಅನಿಮಿಷ ದೈತ್ಯರ ಮನಕೆ ಸಿಲುಕದಿಪ್ಪ
ಸನಕಾದಿ ವಂದ್ಯ ಸಕಲೇಶ ಕೋಲೆ
ಸನಕಾದಿ ವಂದ್ಯ ಸಕಲೇಶನಾಗಿಪ್ಪ
ಅನಿರುದ್ಧ ಹರಿಯ ಬಲಗೊಂಬೆ ಕೋಲೆ ೨೦

ಕ್ಷರಾಕ್ಷರದೊಳು ಪರಮೋತ್ತಮನಾದ
ಕರಿರಾಜ ವರದ ಕವಿಗೇಯ ಕೋಲೆ
ಕರಿರಾಜ ವರದ ಕವಿಗೇಯನಾದ ಶ್ರೀ
ಪುರುಷೋತ್ತಮನ್ನ ಬಲಗೊಂಬೆ ಕೋಲೆ ೨೧

ಅಕ್ಷಯ ಮೂರುತಿ ಮೋಕ್ಷದಾಯಕ ಸ್ವಾಮಿ
ಕುಕ್ಷಿಯೊಳ್ ಜಗವ ರಕ್ಷಿಪ ಕೋಲೆ

ಕುಕ್ಷಿಯೋಳ್ ಜಗವ ಪಾಲಿಪ ನಮ್ಮ ಅ–
ದೋಕ್ಷಜ ಹರಿಯ ಬಲಗೊಂಬೆ ಕೋಲೆ ೨೨

ಕ್ರೂರ ಖಳನುದರ ಸೀಳಿ ಪ್ರಹ್ಲಾದನ
ಕಾರುಣ್ಯದಿಂದ ಕಾಯ್ದನ ಕೋಲೆ
ಕಾರುಣ್ಯದಿಂದ ಕಾಯ್ದನ ನಮ್ಮ ಶ್ರೀ
ನಾರಸಿಂಹನ್ನ ಬಲಗೊಂಬೆ ಕೋಲೆ ೨೩

ಸಚ್ಚಿದಾನಂದನೆ ಸಕಲಗುಣ ಪರಿಪೂರ್ಣ
ಮುಚುಕುಂದ ವರದ ಮುನಿನುತ ಕೋಲೆ
ಮುಚುಕುಂದ ವರದ ಮುನಿನುತನಾದ ಶ್ರೀ
ಅಚ್ಯುತನ ಮೊದಲೆ ಬಲಗೊಂಬೆ ಕೋಲೆ ೨೪

ದುರ್ಧರ್ಷರಾಗಿದ್ದ ಖಳರ ಸಮುದಾಯವ
ಮರ್ದನ ಮಾಡಿದ ಮಹಮಹಿಮ ಕೋಲೆ
ಮರ್ದನ ಮಾಡಿದ ಮಹಮಹಿಮನಾದ ಜ–
ನಾರ್ದನ್ನ ಮೊದಲೆ ಬಲಗೊಂಬೆ ಕೋಲೆ ೨೫

ಇಂದ್ರಾನುಜನಾಗಿ ಸ್ವರ್ಗದೊಳಿರುತಿದ್ದು
ಸಾಂದ್ರ ಸುಖವೀವೆ ಸುರರಿಗೆ ಕೋಲೆ
ಸಾಂದ್ರ ಸುಖವಿತ್ತು ಸುರರ ಪಾಲಿಸುವ ಉ–
ಪೇಂದ್ರನ ಮೊದಲೆ ಬಲಗೊಂಬೆ ಕೋಲೆ ೨೬

ಪರಮ ಭಕ್ತರ ಪಾಪ ಪರಿಹಾರವನೆ ಮಾಡಿ
ಪರಮ ಪದವಿಯ ಪಾಲಿಪ ಕೋಲೆ
ಪರಮ ಪದವಿಯ ಪಾಲಿಪ ನಮ್ಮ ಶ್ರೀ–
ಹರಿಯ ಮೊದಲೆ ಬಲಗೊಂಬೆ ಕೋಲೆ ೨೭

ಶಿಷ್ಟ ಪಾಲಕ ಉತ್ಕೃಷ್ಟ ಜ್ಞಾನಾನಂದ
ಕೃಷ್ಣೆಯ ಕಷ್ಟ ಬಿಡಿಸಿದ ಕೋಲೆ

ಕೃಷ್ಣೆಯ ಕಷ್ಟ ಬಿಡಿಸಿದ ನಮ್ಮ ಶ್ರೀ–
ಕೃಷ್ಣನ್ನ ಮೊದಲೆ ಬಲಗೊಂಬೆ ಕೋಲೆ ೨೮

ಅನಿರುದ್ಧಾದಿ ರೂಪ ವಿಶ್ವಾದಿ ಅಜಿತಾದಿ
ಸನತ್ಕುಮಾರಾದಿ ಅಜಾದಿ ಕೋಲೆ
ಸನತ್ಕುಮಾರಾದಿ ಅಜಾದಿ ರೂಪನಾದ
ಘನ ಮಹಿಮನ್ನ ಬಲಗೊಂಬೆ ಕೋಲೆ ೨೯

ಹಯಗ್ರೀವ ದತ್ತ ಋಷಭ ಸಂಕರ್ಷಣ
ಭಯರಹಿತ ಬಾದರಾಯಣ ಕೋಲೆ
ಭಯರಹಿತ ಬಾದರಾಯಣ ಮಹಿದಾಸ
ವಯಿಕುಂಠ ಹರಿಯ ಬಲಗೊಂಬೆ ಕೋಲೆ ೩೦

ಆತ್ಮಾದಿ ವಾಸುದೇವಾದಿ ಮೂರುತಿ
ಶ್ರೀ ತರುಣೇಶ ವಿಶ್ವೇಶ ಕೋಲೆ
ಶ್ರೀ ತರುಣೇಶ ವಿಶ್ವೇಶ ರೂಪನಾದ
ಜ್ಯೋತಿರ್ಮಯನ ಬಲಗೊಂಬೆ ಕೋಲೆ ೩೧

ಮುನಿ ವೇದವ್ಯಾಸ ಸನತ್ಕುಮಾರ ಮೂರ್ತಿ
ಮಿನಗುವ ದತ್ತಾತ್ರೇಯನೆ ಕೋಲೆ
ಮಿನಗುವ ದತ್ತಾತ್ರೇಯ ಹಯಗ್ರೀವ
ದನುಜಾಂತಕನ್ನ ಬಲಗೊಂಬೆ ಕೋಲೆ ೩೨

ಕಂಗಳಾಪಾಂಗದಿಂ ಕಮಲಾಸನಾದಿಗಳ
ಸಂಗಾತ ಸೃಷ್ಟಿಪ ಮಹಲಕ್ಷ್ಮೀ ಕೋಲೆ
ಸಂಗಾತ ಸೃಷ್ಟಿಪ ಮಹಲಕ್ಷ್ಮೀ ನಿನ್ನ ಪಾ–
ದಂಗಳಿಗೆರಗಿ ಬಲಗೊಂಬೆ ಕೋಲೆ ೩೩

ಶ್ರೀ ಮಾಯಾ ಜಯಾಕೃತಿ ಶಾಂತಿ ಇಂದಿರಾದೇವಿ
ಕಾಮನ ಜನನಿ ಜಯಂತಿ ಕೋಲೆ

ಕಾಮನ ಜನನಿ ಜಯಂತಿ ಜಾನಕಿ ಸತ್ಯ-
ಭಾಮಾ ರುಕ್ಮಿಣಿಯ ಬಲಗೊಂಬೆ ಕೋಲೆ ೩೪

ಹದಿನಾಲ್ಕು ಲೋಕವ ಮುದದಿಂದ ಸೃಜಿಸುವ
ಪದುಮ ಸಂಭವನೆ ಪರಮೇಷ್ಠಿ ಕೋಲೆ
ಪದುಮ ಸಂಭವನೆ ಪರಮೇಷ್ಠಿ ನಿನ್ನ ಪದ
ಪದುಮವ ಮುನ್ನ ಬಲಗೊಂಬೆ ಕೋಲೆ ೩೫

ಹನುಮ ಭೀಮ ಮಧ್ವ ಮುನಿರಾಯ ಮಾರುತಿ
ದನುಜಾರಿ ಭಕ್ತ ವಿರಕ್ತ ಕೋಲೆ
ದನುಜಾರಿ ಭಕ್ತ ವಿರಕ್ತ ನಿನ್ನ ಪಾದ
ವನಜವ ಮುನ್ನ ಬಲಗೊಂಬೆ ಕೋಲೆ ೩೬

ವಾಣಿ ಅಜನ ಮುದ್ದು ರಾಣಿ ಪಲ್ಲವ ಪಾಣಿ
ಜಾಣೆ ಕೊಡೆಮಗೆ ಮತಿಗಳ ಕೋಲೆ
ಜಾಣೆ ಕೊಡೆಮಗೆ ಮತಿಗಳ ನಿನ್ನ ಪಾದ
ರೇಣುವಿನ ಮುನ್ನ ಬಲಗೊಂಬೆ ಕೋಲೆ ೩೭

ಭಾರತಿದೇವಿ ನಿನ್ನ ವಾರಿಜ ಚರಣವ
ಬಾರಿ ಬಾರಿಗೆ ಭಜಿಸುವೆ ಕೋಲೆ
ಬಾರಿ ಬಾರಿಗೆ ಭಜಿಸುವೆ ಎಮಗೆ ಶ್ರೀ
ನಾರಾಯಣನಲ್ಲಿ ರತಿ ಕೊಡು ಕೋಲೆ ೩೮

ಇಂದ್ರನ ಗೆದ್ದು ಸುಧೆ ತಂದು ಮಾತೆಯ
ಬಂಧನ ಕಡಿದ ಬಲುಧೀರ ಕೋಲೆ
ಬಂಧನ ಕಡಿದ ಬಲುಧೀರನಾದ ಖ-
ಗೇಂದ್ರನ್ನ ಮುನ್ನ ಬಲಗೊಂಬೆ ಕೋಲೆ ೩೯

ಸಾಸಿರ ಮುಖದಿಂದ ಶ್ರೀಶನ್ನ ತುತಿಸಿ ಶ್ರೀ
ವಾಸುದೇವಂಗೆ ಹಾಸಿಕೆ ಕೋಲೆ

ವಾಸುದೇವಂಗೆ ಹಾಸಿಕೆಯಾದ ಮಹ–
ಶೇಷನ್ನ ಮುನ್ನ ಬಲಗೊಂಬೆ ಕೋಲೆ ೪೦

ಅಪರಿಮಿತ ಕಾರ್ಯ ತ್ರಿಪುರ ದಹನನೆ
ಚಪಲ ಮೂರುತಿ ಚಂದ್ರಚೂಡ ಕೋಲೆ
ಚಪಲ ಮೂರುತಿ ಚಂದ್ರಚೂಡ ಭಜಕರ
ಅಪಮೃತ್ಯು ಹರನ ಬಲಗೊಂಬೆ ಕೋಲೆ ೪೧

ಜಾಂಬವತ್ಯಾದಿ ಶ್ರೀ ಹರಿಯ ರಾಣೇರ್ಗೆ
ಸಂಭ್ರಮದಿಂದ ಶರಣೆಂಬೆ ಕೋಲೆ
ಸಂಭ್ರಮದಿಂದ ಶರಣೆಂಬೆ ಖಗ ಶೇಷ
ಶಂಭು ರಾಣಿಯರ ಬಲಗೊಂಬೆ ಕೋಲೆ ೪೨

ಶಕ್ರ ಕಾಮಾದಿ ದೇವರ್ಕಳ ಚರಣಕ್ಕೆ
ಅಕ್ಕರದಿಂದ ಅಭಿನಮಿಪೆ ಕೋಲೆ
ಅಕ್ಕರದಿಂದ ಅಭಿನಮಿಸಿ ಪೇಳ್ವೆ ದೇ–
ವಕ್ಕಿ ನಂದನನ ಚರಿತೆಯ ಕೋಲೆ ೪೩

ಶ್ರೀಮಧ್ವಮುನಿ ಪದ್ಮನಾಭ ನರಹರಿತೀರ್ಥ
ಶ್ರೀ ಮಾಧವಾರ್ಯ ಅಕ್ಷೋಭ್ಯ ಕೋಲೆ
ಶ್ರೀ ಮಾಧವಾರ್ಯ ಅಕ್ಷೋಭ್ಯ ಜಯತೀರ್ಥ
ಸ್ವಾಮಿಗಳ ಮೊದಲೆ ಬಲಗೊಂಬೆ ಕೋಲೆ ೪೪

ನ್ಯಾಯಾಮೃತ ತರ್ಕ ತಾಂಡವ ಚಂದ್ರಿಕೆ
ನ್ಯಾಯ ಗ್ರಂಥಗಳ ರಚಿಸಿದ ಕೋಲೆ
ನ್ಯಾಯ ಗ್ರಂಥಗಳ ರಚಿಸಿದ ನಮ್ಮ ವ್ಯಾಸ–
ರಾಯರ ಮುನ್ನ ಬಲಗೊಂಬೆ ಕೋಲೆ ೪೫

ಜನನಿ ಗರ್ಭದಿಂದವನಿ ಸ್ಪರ್ಶಿಸದೆ
ಜನಿಸಿ ಬ್ರಹ್ಮಣ್ಯ ಮುನಿಗಳ ಕೋಲೆ

ಜನಿಸಿ ಬ್ರಹ್ಮಣ್ಯ ಮುನಿಗಳ ಮೃದು ಹಸ್ತ
ವನಜ ಸಂಭವನ ಬಲಗೊಂಬೆ ಕೋಲೆ ೪೬

ಶ್ರೀಪಾದರಾಯರಲಿ ಸಕಲ ವಿದ್ಯವನೋದಿ
ಶ್ರೀಪತಿ ಪ್ರೀತಿ ಪಡಿಸಿದ ಕೋಲೆ
ಶ್ರೀಪತಿ ಪ್ರೀತಿ ಪಡಿಸಿದ ವ್ಯಾಸಮುನಿ
ಭೂಪನ ಮೊದಲೆ ಬಲಗೊಂಬೆ ಕೋಲೆ ೪೭

ದೇಶಾಧಿಪತಿಗೆ ಬಂದ ಕುಯೋಗವನೆ ನೂಕಿ
ತಾ ಸಿಂಹಾಸನವೇರಿ ಮೆರೆದನೆ ಕೋಲೆ
ತಾ ಸಿಂಹಾಸನವೇರಿ ಮೆರೆದನೆ ವ್ಯಾಸ ಮು–
ನೀಶನ್ನ ಮೊದಲೆ ಬಲಗೊಂಬೆ ಕೋಲೆ ೪೮

ದಂಡ ಕಮಂಡಲು ಧರ ಪಂಡಿತಾರಾಧಾರ
ಕುಂಡಲಿಶಯನನ ಭಜಕರ ಕೋಲೆ
ಕುಂಡಲಿ ಶಯನನ ಭಜಕ ರಾಘವೇಂದ್ರರ
ಕೊಂಡಾಡಿ ಪದನ ಗುಣಿಸುವೆ ಕೋಲೆ ೪೯

ತಂತ್ರ ಸಾರಗಳಿಗೆ ಅರ್ಥವನ್ನು ಸ್ವ–
ತಂತ್ರದಿಂದಲಿ ರಚಿಸಿದ ಕೋಲೆ ಸ್ವ–
ತಂತ್ರದಿಂದಲಿ ರಚಿಸಿದ ರಾಘವೇಂದ್ರರ
ಪಂಥವಿದ್ದಲ್ಲಿ ಬಲಗೊಂಬೆ ಕೋಲೆ ೫೦

ವೇದಶಾಸ್ತ್ರಾಮೃತ ಸಾರಬಲ್ಲ ರಾಮ
ವೇದವ್ಯಾಸರ ಭಜಕರ ಕೋಲೆ
ವೇದವ್ಯಾಸ ಭಜಕ ರಾಘವೇಂದ್ರರ
ಪಾದವಿದ್ದಲ್ಲಿ ಬಲಗೊಂಬೆ ಕೋಲೆ ೫೧

ತುಂಗಭದ್ರಾ ತೀರ ಮಂತ್ರಾಲಯದಲ್ಲಿ
ಮಂಗಳ ಮಹಿಮರೆನಿಪರೆ ಕೋಲೆ

ಮಂಗಳ ಮಹಿಮರೆನಿಪ ರಾಘವೇಂದ್ರ–
ರಂಘ್ರಿ ಕಮಲವ ಬಲಗೊಂಬೆ ಕೋಲೆ ೫೨

ಗುರು ರಾಘವೇಂದ್ರರ ಚರಣ ಪಂಕಜವನ್ನು
ಸ್ಥಿರ ಬುದ್ಧಿಯಿಂದ ಸ್ಮರಿಸುವೆ ಕೋಲೆ
ಸ್ಥಿರ ಬುದ್ಧಿಯಿಂದ ಸ್ಮರಿಸಿ ನಾ ಪೇಳ್ವೆನು
ಸರಸಿಜಾಕ್ಷನ್ನ ಚರಿತೆಯ ಕೋಲೆ ೫೩

ರಾಜರಾಜೇಶ್ವರ ಸತ್ಯಾಭಿನವ ತೀರ್ಥ
ರಾಜಕರಾಬ್ಜ ಸಂಭೂತ ಕೋಲೆ
ರಾಜಕರಾಬ್ಜ ಸಂಭೂತ ಸತ್ಯಾಧಿ–
ರಾಜರ ಮೊದಲೆ ಬಲಗೊಂಬೆ ಕೋಲೆ ೫೪

ಕ್ಷೀರನದಿಯ ತೀರ ವೇಲೂರ ಪುರವಾಸ
ಸಾರ ಸಜ್ಜನರ ಪೊರೆವನೆ ಕೋಲೆ
ಸಾರ ಸಜ್ಜನರ ಪೊರೆವ ಸತ್ಯಾಧಿರಾಜ
ಧೀರ ಯತಿಗಳ ಬಲಗೊಂಬೆ ಕೋಲೆ ೫೫

ಸತ್ಯಬೋಧರೆಂಬ ಸದ್ಗುರು ಚರಣವ
ಚಿತ್ತದೊಳಿಟ್ಟು ಚರಿಸುವೆ ಕೋಲೆ
ಚಿತ್ತದೊಳಿಟ್ಟು ಸ್ಮರಿಸಿ ನಾ ಪೇಳ್ವೆನು
ಚಿತ್ತದೊಲ್ಲಭನ ಚರಿತೆಯ ಕೋಲೆ ೫೬

ಪರಮ ಗುರುಗಳಾದ ಪುರಂದರ ರಾಯರ
ಪರಮ ಕೃಪಾಪಾತ್ರ ವಿಜಯರಾಯ ಕೋಲೆ
ಪರಮ ಕೃಪಾಪಾತ್ರ ವಿಜಯರಾಯರ ಪಾದ
ಪರಮ ಭಕ್ತಿಯಲಿ ಸ್ಮರಿಸುವೆ ಕೋಲೆ ೫೭

ದೇವ ನಾರಾಯಣ ಭೂದೇವಿ ಮೊರೆ ಕೇಳಿ
ದೇವಕಿಯಲ್ಲಿ ಜನಿಸಿದ ಕೋಲೆ

ದೇವಕಿಯಲ್ಲಿ ಜನಿಸಿ ಧಾರುಣಿ
ದೇವಿ ಭಾರವನೆಲ್ಲನಿಳುಹಿದ ಕೋಲೆ ೫೮

ಶಕಟ ಪೂತನಿ ವತ್ಸ ಬಕಧೇನುಕ ಕಂಸ
ಮುಖಾದ್ಯರನ್ನು ಮಡುಹಿದ ಕೋಲೆ
ಮುಖಾದ್ಯರನ್ನು ಮಡುಹಿ ವಸುದೇವ ದೇ-
ವಕಿಯರ ಬಂಧನ ಬಿಡಿಸಿದ ಕೋಲೆ ೫೯

ಹೆತ್ತ ತಾಯಿಯ ಮೊಲೆಯರ್ತಿಲಿ ನಲಿದುಂಡು
ಮತ್ತೆ ಬಾಲಲೀಲೆ ತೋರಿದ ಕೋಲೆ
ಮತ್ತೆ ಬಾಲಲೀಲೆ ತೋರಿ ತೋಷವ ಪಡಿಸಿ
ಮುತ್ಯಾಗೆ ಪಟ್ಟವ ಕಟ್ಟಿದ ಕೋಲೆ ೬೦

ಜರೆಯ ಸುತನು ತಾನು ಜಗಳಕ್ಕೆ ಬಹನೆಂದು
ಕರೆಸಿದ ವಿಶ್ವಕರ್ಮನ್ನ ಕೋಲೆ
ಕರೆಸಿದ ವಿಶ್ವಕರ್ಮನ್ನ ದ್ವಾರಕ
ಪುರವ ನಿರ್ಮಿಸೆಂದಾಕ್ಷಣ ಕೋಲೆ ೬೧

ದ್ವಾರಕಪುರದ ಶೃಂಗಾರ ವರ್ಣಿಸಲು
ಮೂರು ಕಣ್ಣವಗೆ ವಶವಲ್ಲ ಕೋಲೆ
ಮೂರು ಕಣ್ಣವಗೆ ವಶವಲ್ಲ ನಾಲ್ಕಾರು
ಮೋರೆಯವರಿಗೆ ವಶವಲ್ಲ ಕೋಲೆ ೬೨

ದ್ವಾರ ದ್ವಾರಗಳಿಗೆ ತಳಿರು ತೋರಣಗಳು
ಮೇರುವಿಗೆ ಪೊನ್ನ ಕಲಶವು ಕೋಲೆ
ಮೇರುವಿಗೆ ಕಲಶ ಕನ್ನಡಿ ಮನೋ-
ಹಾರವಾಗಿರುವುದು ಸಟೆಯಲ್ಲಿ ಕೋಲೆ ೬೩

ಹದಿನಾರು ಸಾವಿರ ಚದುರೇರ ಮಂದಿರವು
ಮದನನಯ್ಯನ ಮನೆ ಮಧ್ಯ ಕೋಲೆ

ಮದನನಯ್ಯನ ಮನೆ ಮಧ್ಯ ಪ್ರದೇಶ
ಅದುಭುತವಾಗಿ ಬೆಳಗೋದು ಕೋಲೆ ೬೪

ನಾರಿ ರುಕ್ಮಿಣಿ ಸತ್ಯಭಾಮೆದೇವಿ ಮತ್ತೆ
ವಾರಿಜಮುಖಿಯರ್ ನಾಲ್ಕೆರಡು ಕೋಲೆ
ವಾರಿಜಮುಖಿಯರ್ ನಾಲ್ಕೆರಡು ಸಹಿತಾಗಿ
ವಾರಿಜನಾಭ ಕುಳಿತಿದ್ದ ಕೋಲೆ ೬೫

ಶ್ರೀ ಭೂರಮಣನಾದ ಶ್ರೀಕೃಷ್ಣನರಮನೆಗೆ
ಸುಭದ್ರೆ ಮುಯ್ಯ ತರುತಾಳೆ ಕೋಲೆ
ಸುಭದ್ರೆ ಮುಯ್ಯ ತರುತಾಳೆ ಗಜಪುರ
ಭೂ ಭುಜರೆಲ್ಲ ಬರುತಾರೆ ಕೋಲೆ ೬೬

ಧರ್ಮ ಭೀಮಾರ್ಜುನ ನಕುಲ ಸಹದೇವರು
ಪೆರ್ಮೆಯಿಂದಲಿ ಪೊರವಂಟು ಕೋಲೆ
ಪೆರ್ಮೆಯಿಂದಲಿ ಪೊರವಂಟು ದಿಕ್ಪಾಲರು
ಕೂರ್ಮೆಯಿಂದಲಿ ಬರತಾರೆ ಕೋಲೆ ೬೭

ಇಂದ್ರನು ತಾ ಗಜೇಂದ್ರನ್ನೇರಿಕೊಂಡು
ಮಂದಗಮನೆ ಶಚಿ ಸಹಿತಲಿ ಕೋಲೆ
ಮಂದಗಮನೆ ಶಚಿ ಸಹಿತ ವಜ್ರ ಧರಿಸಿ ಉ–
ಪೇಂದ್ರನರಮನೆಗೆ ಬರುತಾರೆ ಕೋಲೆ ೬೮

ಹುತಭುಜ ತನ ಸತಿ ಸ್ವಾಹಾದೇವಿಯ ಕೂಡಿ
ಅತಿಶಯದಿಂ ಮೇಷವೇರುತ್ತ ಕೋಲೆ
ಅತಿಶಯದಿಂ ಮೇಷವೇರಿ ಶಕ್ತಿಯ ಪಿಡಿದು
ಕ್ರತುಪತಿ ಮನೆಗೆ ಬರುತಾನೆ ಕೋಲೆ ೬೯

ಯಮನು ಮಹಿಷವೇರಿ ಗಮನದಿಂದಲಿ ಸತಿ
ಶಾಮಲಾದೇವಿ ಸಹಿತಲಿ ಕೋಲೆ

ಶಾಮಲೆ ಸಹಿತ ದಂಡಾಯುಧ ಧರಿಸಿ
ರಾಮನ ಮನೆಗೆ ಬರುತಾನೆ ಕೋಲೆ ೭೦

ನಿರರುತಿ ತಾನೊಂದು ನರನ ಪೆಗಲನೇರಿ
ಪರಮಾಪ್ತ ಸ್ತ್ರೀಯನೊಡಗೂಡಿ ಕೋಲೆ
ಪರಮಾಪ್ತ ಸ್ತ್ರೀಯನೊಡನೆ ಕುಂತವ ಧರಿಸಿ
ಧರಾಧರನ ಮನೆಗೆ ಬರುತಾನೆ ಕೋಲೆ ೭೧

ವರುಣ ತಾನೊಂದು ಮಕರಿಯನೇರಿಕೊಂಡು
ಸಿರಿ ಭಾಗೀರಥಿಯನೊಡಗೊಂಡು ಕೋಲೆ
ಸಿರಿ ಭಾಗೀರಥಿಯನೊಡನೆ ಪಾಶಧರಿಸಿ
ಸಿರಿವತ್ಸನರಮನೆಗೆ ಬರುತಾನೆ ಕೋಲೆ ೭೨

ಮರುತದೇವನೊಂದು ಎರಳೆಯನೇರಿ
ತರುಣಿ ಪ್ರಾವಹಿಯೊಡಗೂಡಿ ಕೋಲೆ
ತರುಣಿ ಪ್ರಾವಹಿಗೂಡಿ ಧ್ವಜ ಧರಿಸಿ ಶ್ರೀ–
ಧರನ ಮನೆಗೇ ಬರುತಾನೆ ಕೋಲೆ ೭೩

ವಿತ್ತಪತಿಯೊಂದು ಉತ್ತಮ ಹಯವೇರಿ
ಚಿತ್ತದೊಲ್ಲಭೆಯ ಒಡಗೂಡಿ ಕೋಲೆ
ಚಿತ್ತದೊಲ್ಲಭೆಯ ಒಡನೆ ಖಡ್ಗ ಧರಿಸಿ
ಕರ್ತನ್ನ ಮನೆಗೆ ಬರುತಾನೆ ಕೋಲೆ ೭೪

ಈಶಾನ ತಾನೊಂದು ವೃಷಭವೇರಿಕೊಂಡು
ಶ್ರೀ ಸತಿದೇವಿಯೊಡಗೂಡಿ ಕೋಲೆ
ಶ್ರೀ ಸತಿದೇವಿಯೊಡಗೂಡಿ ಶೂಲ ಧರಿಸಿ ನಾ–
ರಸಿಂಹನ ಮನೆಗೆ ಬರುತಾನೆ ಕೋಲೆ ೭೫

ಹರಿಯೇ ಸರ್ವೋತ್ತಮ ಹರಿಯೇ ಪರದೇವತೆ
ಹರಿದಾಸರೆಂಬೋ ಬಿರುದಿನ ಕೋಲೆ

ಹರಿದಾಸರೆಂಬೋ ಬಿರುದಿನ ಹೆಗ್ಗಾಳೆ
ಹಿರಿ ಬಾಗಿಲೊಳು ಹಿಡಿಸಿಹರು ಕೋಲೆ ೭೬

ಒಬ್ಬನೆ ವಿಷ್ಣುವಿನ್ನೊಬ್ಬ ದೈವಗಳಿಲ್ಲೆಂ–
ದಬ್ಬರದಿಂದ ನಾಗಸ್ವರ ಕೋಲೆ
ಅಬ್ಬರದಿಂದ ನಾಗಸ್ವರಂಗಳ
ಹೆಬ್ಬಾಗಿಲೊಳಗೆ ನುಡಿಸೋರು ಕೋಲೆ ೭೭

ಖಳನ ಬೆನ್ನ ಚರ್ಮ ಸುಲಿದು ಭೇರಿಗೆ ಹಾಕಿ
ಅಲವ ಬೋಧರೆ ಜಗದ್ಗುರು ಕೋಲೆ
ಅಲವ ಬೋಧರೆ ಜಗದ್ಗುರುಗಳೆಂತೆಂದು
ಛಲದಿಂದ ಭೇರಿಯ ಹೊಡಿಸೋರು ಕೋಲೆ ೭೮

ವಿಷ್ಣು ಸರ್ವೋತ್ತಮ ವಿಷ್ಣು ಪರದೇವತೆ
ವಿಷ್ಣುದಾಸರೆಂಬ ಬಿರುದಿನ ಕೋಲೆ
ವಿಷ್ಣುದಾಸರೆಂಬ ಬಿರುದಿನ ಠೆಕ್ಕೆಯ
ಘಟ್ಯಾಗಿ ಎತ್ತಿ ನಿಲಿಸೋರು ಕೋಲೆ ೭೯

ಮತದೊಳು ಮಧ್ವಮತ ವ್ರತದೊಳು ಹರಿದಿನ
ಕಥೆಯೊಳು ಭಾಗವತವೆನ್ನಿ ಕೋಲೆ
ಕಥೆಯೊಳ್ ಭಾಗವತವೆನ್ನಿ ಇದರಂತೆ
ಪ್ರತಿಮೆಯೊಳ್ ವಿಷ್ಣು ಪ್ರತಿಮೆನ್ನಿ ಕೋಲೆ ೮೦

ಈಚಲ ಬನದೊಳು ಗೋ ಕ್ಷೀರ ಕುಡಿದಂತೆ
ನೀಚರ ಸಂಗ ಸುಜನರು ಕೋಲೆ
ನೀಚರ ಸಂಗ ಸುಜನರು ಮಾಡಲು
ಈಚೆ ನೋಡುವರಿಗೆ ಅನುಮಾನ ಕೋಲೆ ೮೧

ಸೂರಿ ಜನರ ಸಂಗ ಸುಧೆಯ ಪ್ರಾಶನೆಯಂತೆ
ಹೋರಣೆ ಗುಣವುಳ್ಳ ಅಧಮರ ಕೋಲೆ

ಹೋರಣೆ ಗುಣವುಳ್ಳ ಅಧಮರ ಸಹವಾಸ
ನೀರುಳ್ಳಿ ತಿಂದ ತೆರನಂತೆ ಕೋಲೆ ೮೨

ಒಳ್ಳೆ ಮನುಜರ ಸಂಗ ಮಲ್ಲಿಗೆ ಮುಡಿದಂತೆ
ಖುಲ್ಲ ಕುಮತಿಯ ಸಹವಾಸ ಕೋಲೆ
ಖುಲ್ಲ ಕುಮತಿಯ ಸಹವಾಸ ಮಾಡಲು
ಮುಲ್ಲಂಗಿ ತಿಂದು ತೇಗಿದಂತೆ ಕೋಲೆ ೮೩

ಭಾವಜ್ಞರ ಸಂಗ ಶ್ಯಾವಿಗಿ ಉಂಡಂತೆ
ಭಾವವನರಿಯದ ಬಲುಹೀನ ಕೋಲೆ
ಭಾವವನರಿಯದ ಬಲುಹೀನರ ಸಂಗ
ಬೇವಿನಹಾಲ ಕುಡಿದಂತೆ ಕೋಲೆ ೮೪

ಬಾಳುವರ ಸಂಗ ಹಾಲೋಗರುಂಡಂತೆ
ಬಾಳುವೆಗೆಟ್ಟ ಅಧಮರ ಕೋಲೆ
ಬಾಳುವೆಗೆಟ್ಟ ಅಧಮರ ಸಹವಾಸ
ಹೇಳಬಾರದ್ದು ತಿಂದಂತೆ ಕೋಲೆ ೮೫

ಹರಿಗುರು ದ್ರೋಹಿ ಮರಳಿ ಮಾತೃ ದ್ರೋಹಿ
ವರ ವೈಷ್ಣವ ದ್ರೋಹಿ ಪಿತೃ ದ್ರೋಹಿ ಕೋಲೆ
ವರ ವೈಷ್ಣವ ದ್ರೋಹಿ ಸ್ವಾಮಿ ದ್ರೋಹಿ
ನೆರಳು ಬಿದ್ದವರ ನೆರೆಹೊಲ್ಲ ಕೋಲೆ ೮೬

ಕತ್ತೆ ಕುದುರೆ ಒಂದೆ ಅತ್ತೆ ಸೊಸೆಯು ಒಂದೆ
ಹೆತ್ತಮ್ಮ ಒಂದೆ ಹೆಂಡ್ತೊಂದೆ ಕೋಲೆ
ಹೆತ್ತಮ್ಮ ಒಂದೆ ಹೆಂಡ್ತೊಂದಾದ ಮೇಲೆ
ವ್ಯರ್ಥದ ಮದುವೆ ನಿನಗ್ಯಾಕೆ ಕೋಲೆ ೮೭

ಅಕ್ಕ ತಂಗಿಯು ಒಂದೆ ಮಕ್ಕಳು ಸೊಸೆ ಒಂದೆ
ಚಿಕ್ಕಮ್ಮ ಒಂದೆ ಹೆಂಡ್ತೊಂದೆ ಕೋಲೆ

ಚಿಕ್ಕಮ್ಮ ಒಂದೆ ಹೆಂಡ್ತೊಂದಾದ ಮೇಲೆ
ರೊಕ್ಕ ವೆಚ್ಚ ಮಾಡಿ ಮದುವ್ಯಾಕೆ ಕೋಲೆ ೮೮

ಹಿಟ್ಟು ಬೂದಿ ಒಂದೆ ರೊಟ್ಟಿ ಮುಚ್ಚಳ ಒಂದೆ
ಕಟ್ಟಿಗೆ ಒಂದೆ ಕಬ್ಬೊಂದೆ ಕೋಲೆ
ಕಟ್ಟಿಗೆಯೊಂದೆ ಕಬ್ಬೊಂದಾದ ಮೇಲೆ
ಕಟ್ಟಿಗೆ ಯಾಕೆ ಮೆಲುವೊಲ್ಲೆ ಕೋಲೆ ೮೯

ಹಾಲು ಮಜ್ಜಿಗೆಯೊಂದೆ ಕೋಳಿ ಕೋಗಿಲೆಯೊಂದೆ
ಮಾಳಿಗೆ ಒಂದೆ ಬಯಲೊಂದೆ ಕೋಲೆ
ಮಾಳಿಗೆಯೊಂದೆ ಬಯಲು ಒಂದಾದರೆ
ಹೇಳಬಾರದ್ದು ತಿನವಲ್ಯ ಕೋಲೆ ೯೦

ಗಂಗೆಯ ತಡಿಯಲ್ಲಿ ಲಿಂಗವನರ್ಚಿಸಿ
ಅಂಗೈಯಲಿಟ್ಟು ಪೂಜಿಸುವೆ ಕೋಲೆ
ಅಂಗೈಯಲಿಟ್ಟು ಪೂಜಿಸುವೆ ಎಲೆ ಪಾಪಿ
ಲಿಂಗನು ನೀನು ವಂದ್ಯಾಗೆ ಕೋಲೆ ೯೧

ಶಿವನು ನೀನಾದರೆ ಶಿವೆಯು ನಿನಗೇನು
ಅವಿವೇಕಿ ಮನುಜ ಈ ಮಾತು ಕೋಲೆ
ಅವಿವೇಕಿ ಮನುಜ ಈ ಮಾತು ಕೇಳಿದರೆ
ಕವಿಗಳು ನಗರೆ ಕೈ ಹೊಯ್ದು ಕೋಲೆ ೯೨

ವೇದ ಪ್ರಾಮಾಣ್ಯಂದು ಸುಜನರಿಗೆಲ್ಲ
ಬೋಧಿಸುತಿಪ್ಪ ಬೌದ್ಧನ ಕೋಲೆ
ಬೋಧಿಸುತಿಪ್ಪ ಬೌದ್ಧನ ಎಳೆದೊಯ್ದು
ಕಾದೆಣ್ಣೆಯೊಳು ಕೆಡುಹೋರು ಕೋಲೆ ೯೩

ಇಲ್ಲಿ ಮಾತ್ರ ಭೇದ ಅಲ್ಲಿಯೊಂದೆ ಎಂಬ
ಕ್ಷುಲ್ಲಕರ ಹಿಡಿದು ಹಲ್ಮುರಿದು ಕೋಲೆ

ಕ್ಷುಲ್ಲಕರ ಹಿಡಿದು ಹಲ್ಮುರಿದು ಯಮರಾಯ
ಕಲ್ಲುಗಾಣಕ್ಕೆ ಹಾಕಿಸುವ ಕೋಲೆ ೯೪

ಅಪ್ಪ ನಾರಾಯಣನಿಪ್ಪಂಥ ಅರಮನೆ
ಅಪ್ರಾಕೃತದ ವೈಕುಂಠ ಕೋಲೆ
ಅಪ್ರಾಕೃತದ ವೈಕುಂಠವೆಂಬೋದು
ಸ್ವ ಪ್ರಕಾಶದ ಪರಮಾತ್ಮ ಕೋಲೆ ೯೫

ಸುತ್ತ ವಿರಜಾನದಿ ಮತ್ತೆ ಆನಂದ್ವನ
ಚಿತ್ತಜನೈಯ್ಯನರಮನೆಗ ಕೋಲೆ
ಚಿತ್ತಜನೈಯ್ಯನರಮನೆ ಎಂಬುದು
ಉತ್ತಮೋತ್ತಮ ವೈಕುಂಠ ಕೋಲೆ ೯೬

ಪಚ್ಚೆ ನೀಲ ವೈಢೂರ್ಯ ನಿಚ್ಚಳ ವಜ್ರ
ಅಚ್ಚ ಮಾಣಿಕ್ಯದ ಅಳವಟ್ಟು ಕೋಲೆ
ಅಚ್ಚ ಮಾಣಿಕ್ಯದ ಅಳವಟ್ಟು ಹರಿಪುರ
ಅಚ್ಯುತನಿಪ್ಪ ಅರವನೆ ಕೋಲೆ ೯೭

ಸಿರಿಯು ತಾ ಮುರಹರನ ಪಟ್ಟಣದಲ್ಲಿ
ವಿರಜೆಯೆಂತೆಂದು ಕರೆಸೋಳು ಕೋಲೆ
ವಿರಜೆಯೆಂತೆಂದು ಕರೆಸಿ ವೈಕುಂಠಕ್ಕೆ
ಪರಿಖಾ ರೂಪದಲ್ಲಿ ಮೆರೆವಳು ಕೋಲೆ ೯೮

ಉತ್ತರದಿ ನಾಲ್ಕು ತತ್ಥಳಿಸುವ ದ್ವಾರ
ಮುತ್ತು ಮಾಣಿಕ್ಯ ನವರತ್ನ ಕೋಲೆ
ಮುತ್ತು ಮಾಣಿಕ್ಯ ನವರತ್ನ ಝಲ್ಲಿಯ
ಎತ್ತಿ ಮೇಲ್ಕಟ್ಟು ಬಿಗಿದಿದೆ ಕೋಲೆ ೯೯

ಜಯ ವಿಜಯಾದ್ಯೆಂಟು ದ್ವಾರಪಾಲಕರು
ಜಯದೇವಿ ರಮಣನರಮನೆಗೆ ಕೋಲೆ

ಜಯದೇವಿ ರಮಣನರಮನೆ ಬಾಗಿಲೊಳ್
ಜಯ ಜಯವೆನುತ ನಿಂದಾರೆ ಕೋಲೆ ೧೦೦

ಕಸವೆಲ್ಲ ಪರಿಮಳ ಕೆಸರೆಲ್ಲ ಶ್ರೀಗಂಧ
ಬಿಸರುಹ ನೇತ್ರನ ಅರಮನೆ ಕೋಲೆ
ಬಿಸರುಹ ನೇತ್ರನ ಅರಮನೆಯೊಳಗೆಲ್ಲ
ಕುಸುಮದ ಮಳೆಯು ಗರೆವುದು ಕೋಲೆ ೧೦೧

ಕಾಜಿನ ನೆಲೆಗಟ್ಟು ರಾಜ ಮಾಣಿಕ ಗೋಡೆ
ಈ ಜಡ ದ್ರವ್ಯವಲ್ಲಿಲ್ಲ ಕೋಲೆ
ಈ ಜಡ ದ್ರವ್ಯವಲ್ಲಿಲ್ಲ ಪುಸಿಯಲ್ಲ
ಶ್ರೀ ಜನಾರ್ದನನರಮನೆಯೊಳ್ ಕೋಲೆ ೧೦೨

ಸೂರ್ಯ ಚಂದ್ರಮ ಅಗ್ನಿ ಮೊದಲಾದವರ
ಕಾರ್ಯಕ್ಕೆ ಅಲ್ಲಿ ತಳವಿಲ್ಲ ಕೋಲೆ
ಕಾರ್ಯಕ್ಕೆ ಅಲ್ಲಿ ತಳವಿಲ್ಲ ನಮ್ಮ ಸುರ–
ವರ್ಯ ಅಚ್ಯುತನರಮನೆಯೊಳ್ ಕೋಲೆ ೧೦೩

ಅಲ್ಲಿ ಸರ್ವರು ಸುಖದಲ್ಲಿ ಇಪ್ಪರು ನೋಡೆ
ಅಲ್ಲಿ ಸರ್ವರು ಯಶಸ್ವಿಗಳು ಕೋಲೆ
ಅಲ್ಲಿ ಸರ್ವರು ಯಶಸ್ವಿಗಳು ಸಭೆಯೊಳು
ಎಲ್ಲರು ಸಹಾಯ ಪರರಯ್ಯ ಕೋಲೆ ೧೦೪

ಮಂಗಳವಂತರು ಶ್ರೀಮಂತರು ದಾರಿ–
ದ್ರ್ಯಂಗಳ ಕಳೆದು ನಲಿವರು ಕೋಲೆ
ದಾರಿದ್ರ್ಯಂಗಳ ಕಳೆದು ನಲಿವರು ಮುಕ್ತಿ–
ಯಂಗನೆ ಕೂಡಿ ಸುಖಿಸೋರು ಕೋಲೆ ೧೦೫

ಕಾಮ ಕ್ರೋಧ ದರ್ಪವೆಂಬ ಮಾತುಗಳಿಲ್ಲ
ಪ್ರೇಮವನ್ಯೋನ್ಯ ಮಿತ್ರತ್ವ ಕೋಲೆ

ಪ್ರೇಮವನ್ಯೋನ್ಯ ಮಿತ್ರತ್ವ ಮುಕ್ತರ
ಸ್ತೋಮವಿನ್ನೆಂತು ವರ್ಣಿಪೆ ಕೋಲೆ ೧೦೬

ಕಂಟಕವೆಂಬುದು ಕನಕ ಕೇತಕಿಯಲ್ಲಿ
ಉಂಟು ಸಂನ್ಯಾಸಿ ಕರದಂಡ ಕೋಲೆ
ಉಂಟು ಸಂನ್ಯಾಸಿ ಕರದಂಡ ಬದ್ಧ ವೈ–
ಕುಂಠದೊಳುಳ್ಳವರ ಕರದಲ್ಲಿ ಕೋಲೆ ೧೦೭

ಬಂಜೆಯರಿಲ್ಲ ಪತಿಗಂಜದ ಸತಿಯಿಲ್ಲ
ಸಂಜೆಯಲಿ ಮಲಗುವವರಿಲ್ಲ ಕೋಲೆ
ಸಂಜೆಯಲಿ ಮಲಗುವವರಿಲ್ಲ ಅತಿಥಿಗಳು
ಭುಂಜಿಸಿ ಸುಖಿಸದವರಿಲ್ಲ ಕೋಲೆ ೧೦೮

ವಿಧವೆಯರಿಲ್ಲ ವಿಧುರ ಪುರುಷರಿಲ್ಲ
ಮದುವೆಯು ಇಲ್ಲದವರಿಲ್ಲ ಕೋಲೆ
ಮದುವೆಯು ಇಲ್ಲದವರಿಲ್ಲ ನಮ್ಮ ಶ್ರೀ–
ಮಧುಸೂದನನಿಪ್ಪ ಪುರದಲ್ಲಿ ಕೋಲೆ ೧೦೯

ಅಂಧ ನಪುಂಸಕರಿಲ್ಲ ಮಂದಭಾಗ್ಯರು ಇಲ್ಲ
ನಿಂದನೆ ಮಾಡುವ ಜನರಿಲ್ಲ ಕೋಲೆ
ನಿಂದನೆ ಮಾಡುವ ಜನರಿಲ್ಲ ನಮ್ಮ ಮು–
ಕುಂದನಿರುತಿಪ್ಪ ಪುರದಲ್ಲಿ ಕೋಲೆ ೧೧೦

ರೇತೋತ್ಸರ್ಜನವಿಲ್ಲ ಮೂತ್ರ ಪುರೀಷವಿಲ್ಲ
ವಾತಪಿತ್ತ ಶ್ಲೇಷ್ಮ ಮೊದಲಿಲ್ಲ ಕೋಲೆ
ವಾತಪಿತ್ತ ಶ್ಲೇಷ್ಮ ಮೊದಲಿಲ್ಲ ಹಸಿ ತೃಷೆ
ಆತುರವೆಂಬೊದಲ್ಲಿಲ್ಲ ಕೋಲೆ ೧೧೧

ಅಲ್ಲಿದ್ದ ತೃಣ ವೃಕ್ಷ ಅಚ್ಛೇದ್ಯ ಭೇದ್ಯವು
ಬಲ್ಲ ಸಜ್ಜನರ ಪುಣ್ಯ ಫಲ ಕೋಲೆ

ಬಲ್ಲ ಸಜ್ಜನರ ಪುಣ್ಯ ಫಲಂಗಳಿಗೆ
ಅಲ್ಲಿ ನಾಶಂಗಳಿಲ್ಲವು ಕೋಲೆ ೧೧೨

ಸಾರೂಪ್ಯ ಸಾಲೋಕ್ಯ ಸಾಮೀಪ್ಯ ಸಾಯುಜ್ಯ
ಸಾರಿಷ್ಟಿ ಪಂಚವಿಧ ಮುಕ್ತಿ ಕೋಲೆ
ಸಾರಿಷ್ಟಿ ಎಂಬೋದು ವಿರಿಂಚಿಯೊಬ್ಬಗೆ
ಈರೆರಡು ಮುಕ್ತಿ ಇತರರಿಗೆ ಕೋಲೆ ೧೧೩

ಅಲ್ಲಿ ಪಂಚವಿಧ ತಾರತಮ್ಯಗಳುಂಟು
ಅಲ್ಲಿ ನೀಚೋಚ್ಚ ಭಾವವು ಕೋಲೆ
ಅಲ್ಲಿ ನೀಚೋಚ್ಚ ಭಾವವು ಮುಕ್ತರು
ಬಲ್ಲ ಹಿರಿಯರ ಭಜಿಸೋರು ಕೋಲೆ ೧೧೪

ಅರ ಯೆಂದು ಣ್ಯ ಎಂದು ಎರಡು ಸುಧಾಂಬುಧಿ
ಇರುತಿಪ್ಪವಚ್ಯುತನ ಪುರದಲ್ಲಿ ಕೋಲೆ
ಇರುತಿಪ್ಪವಚ್ಯುತನ ಪುರದಲ್ಲಿ ಮುಕುತರು
ಸರಿ ಬಂದ ತೆರದಿ ಕ್ರೀಡಿಸುವರು ಕೋಲೆ ೧೧೫

ಉತ್ತರಗಡಲೊಳು ಹತ್ತೆಂಟು ಯೋಜನ
ಉತ್ತಮೋತ್ತಮ ಶ್ವೇತ ದ್ವೀಪ ಕೋಲೆ
ಉತ್ತಮೋತ್ತಮ ಶ್ವೇತ ದ್ವೀಪದೊಳಗೆಲ್ಲ
ಮುತ್ತಿನಂತ್ಹೊಳೆವ ಮುಕುತರು ಕೋಲೆ ೧೧೬

ಅನ್ನಂತಾಸನವೆಂಬೋದಿನ್ನೊಂದು ಮನೆ ಹರಿಗೆ
ಘನ್ನೋದಕದ ಮೇಲೆ ಮಿಂಚೋದು ಕೋಲೆ
ಘನ್ನೋದಕದ ಮೇಲೆ ಮಿಂಚೋದು ಅದರೊಳು
ಮನ್ನೆ ಮನ್ನೆಯಲಿ ಮುಕುತರು ಕೋಲೆ ೧೧೭

ಲಕ್ಷ ಯೋಜನದ ಮೇಲಿಪ್ಪುದನಂತಾಸನ
ಲಕ್ಷ್ಮೀಶನಿಹ ಶ್ವೇತ ದ್ವೀಪ ಕೋಲೆ

ಲಕ್ಷ್ಮೀಶನಿಹ ಶ್ವೇತ ದ್ವೀಪದೊಳಗೆ ಸ-
ಲಕ್ಷಣವಾಗಿಹರ್ ಮುಕುತರು ಕೋಲೆ ೧೧೮

ಸಿರಿ ವೈಕುಂಠದೊಳಗಿರುತಿಪ್ಪ ಮುಕುತರು
ವರ ಚತುರ್ಭುಜ ಪೀತಾಂಬರ ಕೋಲೆ
ವರ ಚತುರ್ಭುಜ ಪೀತಾಂಬರಗಳುಟ್ಟು
ಹರಿ ಸಾರೂಪ್ಯವ ಧರಿಸೋರು ಕೋಲೆ ೧೧೯

ಒಬ್ಬ ಬ್ರಹ್ಮನು ದೇವತಾರ್ಚನೆ ಮಾಡುವ
ಒಬ್ಬ ಬ್ರಹ್ಮನು ಅಗ್ನಿಹೋತ್ರವ ಕೋಲೆ
ಒಬ್ಬ ಬ್ರಹ್ಮನು ಅಗ್ನಿಹೋತ್ರ ಮಾಡುತ್ತಿರೆ
ಒಬ್ಬ ಬ್ರಹ್ಮನು ಪೇಳ್ವ ಪುರಾಣ ಕೋಲೆ ೧೨೦

ಕಂಜಾಕ್ಷಿ ರುಕ್ಮಿಣಿ ಕರೆಯ ಬರಲಿಲ್ಲ
ಸಂಜೆಯಲಿ ನಾವು ಬಂದೆವು ಕೋಲೆ
ಸಂಜೆಯಲಿ ನೀವು ಬಂದರೇನಾಯಿತು
ಅಂಜ ಬೇಡೌ ಅಭಯ ಕೊಡುತೇವೆ ಕೋಲೆ ೧೨೧

ಅತ್ತಿಗೆ ಮನೆಗೆ ಬಂದು ಹತ್ತು ಘಳಿಗಾಯಿತು
ಎತ್ತ ಓಡಿದಳೊ ನಮಗಂಜಿ ಕೋಲೆ
ಎತ್ತ ಓಡಿದಳೊ ನಮಗಂಜಿ ರುಕ್ಮಿಣಿ
ಇತ್ತ ಬಾ ಅಭಯ ಕೊಡುತೇವೆ ಕೋಲೆ ೧೨೨

ಅತ್ತಿಗೆ ನಿನ ಮೈಗೆ ಹತ್ಯಾವೆ ರುದ್ರಾಕ್ಷಿ
ನೆತ್ತಿ ಮೇಲೆಲ್ಲ ಜಡೆಗಳು ಕೋಲೆ
ನೆತ್ತಿ ಮೇಲೆಲ್ಲ ಜಡೆಗಳು ನಿನ ಜನ
ಅರ್ತಿಲಿ ನೋಡಿ ನಗುತಾರೆ ಕೋಲೆ ೧೨೩

ಅಣ್ಣನ ಮನೆಗೆ ಬಂದು ಸಣ್ಣ ಹೊತ್ತಾಯಿತು
ಅಣ್ಣನ ಮಡದಿ ಬರಲಿಲ್ಲ ಕೋಲೆ

ಅಣ್ಣನ ಮಡದಿ ಬರಲಿಲ್ಲ ಸತ್ಯಭಾಮೆ
ಇನ್ನು ಬಾ ಅಭಯ ಕೊಡುತೇವೆ ಕೋಲೆ ೧೨೪

ತಾಯಿ ಮನೆಗೆ ಬಂದು ಬಹಳ ಹೊತ್ತಾಯಿತು
ತಾಯಿ ಸೊಸೇರು ಬರಲಿಲ್ಲ ಕೋಲೆ
ತಾಯಿ ಸೊಸೇರು ಬರಲಿಲ್ಲ ನಮಗಂಜಿ
ಬಾಯಿ ಬಿಡುತಾರೆ ಬಳಗೆಲ್ಲ ಕೋಲೆ ೧೨೫

ಬಂದ ಬೀಗಿತ್ತಿಯ ಚಂದದಿದಿರ್ಗೊಂಡು
ಮುದಹಾಸದಲಿ ನುಡಿಸ್ಯಾಳು ಕೋಲೆ
ಮಂದಹಾಸದಲಿ ನುಡಿಸ್ಯಾಳೆ ರುಕ್ಮಿಣಿ
ಬಂದವರು ಯಾರ ಮನೆಯವರು ಕೋಲೆ ೧೨೬

ಶುಂಡಾಲ ನಗರದ ಪಾಂಡು ಭೂಪರ ಸೊಸೆ
ಗಂಡುಗಲಿ ಪಾರ್ಥನರ್ಧಾಂಗಿ ಕೋಲೆ
ಗಂಡುಗಲಿ ಪಾರ್ಥನರ್ಧಾಂಗಿ ಮುಯ್ಯವ
ಕೊಂಡು ಬಂದಳು ತಿರುಗಿಸು ಕೋಲೆ ೧೨೭

ಬಾರವ್ವಾ ಸುಭದ್ರಾ ಏರವ್ವಾ ಸೋಪಾನ
ತೋರವ್ವ ನಿನ್ನ ವಚನವ ಕೋಲೆ
ತೋರವ್ವ ನಿನ್ನ ವಚನವನೆನುತಲಿ
ಡೋರ್‍ಯದ ಕೈಯ್ಯ ಹಿಡಿದಳು ಕೋಲೆ ೧೨೮

ಓಡಿ ಬಂದವಳು ಒಳಗೆ ಸೇರಿಕೊಂಡು
ನೋಡುವಳೆ ನಮ್ಮ ನುಡಿಸುವಳೆ ಕೋಲೆ
ನೋಡುವಳೆ ನಮ್ಮ ನುಡಿಸುವಳೆ ನಮ್ಮಣ್ಣ
ಮಾಡಿದ ಮೋಹ ತಲೆಗೇರಿತು ಕೋಲೆ ೧೨೯

ಅತ್ತೆಯ ಮಗಳೆಂದು ಹತ್ತೆಂಟು ತಾಳಿದೆ
ಉತ್ತರ ನಿಮಗೊಂದು ಕೊಡುತೇನೆ ಕೋಲೆ

ಉತ್ತರ ನಿಮಗೊಂದು ಕೊಡುತೇನೆ ಸುಭದ್ರೆ
ಚಿತ್ತಕ್ಕೆ ಹೋಗಿ ನೆಡುವಂತೆ ಕೋಲೆ ೧೩೦

ಓಡಿ ಬಂದಳೆಂದು ಆಡಿದರೇನು ತಿರು-
ಗಾಡಿದರಿಷ್ಟು ಹುರುಡಿಲ್ಲ ಕೋಲೆ
ಆಡಿದರಿಷ್ಟು ಹುರುಡಿಲ್ಲ ಸುಭದ್ರೆ
ನೋಡಿಕೋ ನಿನ್ನ ಮನದೊಳು ಕೋಲೆ ೧೩೧

ಅಣ್ಣನ ವಂಚಿಸಿ ಓಡಿ ಬಂದವಳೆಂದು
ಕಣ್ಣಿಲಿ ನೋಡಿ ಕರೆಯುವಳೆ ಕೋಲೆ
ಕಣ್ಣಿಲಿ ನೋಡಿ ಕರೆಯುವಳು ನಮ್ಮ
ಅಣ್ಣನ ಬಲವ ಹಿಡಕೊಂಡು ಕೋಲೆ ೧೩೨

ಅಣ್ಣನ ವಂಚಿಸಿ ಓಡಿ ಬಂದವಳೆಂದು
ಎನ್ನ ನೀ ನುಡಿವೆ ಸುಭದ್ರೆ ಕೋಲೆ
ಎನ್ನ ನೀ ನುಡಿವೆ ಸುಭದ್ರೆ ಕೇಳು ನಾ
ಸಂನ್ಯಾಸಿಯೊಡನೆ ಬರಲಿಲ್ಲ ಕೋಲೆ ೧೩೩

ಕೂಲಿ ಕೊಟ್ಟು ನಿನ್ನ ಕುಲವನ್ನುದ್ಧರಿಸಿದೆ
ಏಳಲವಾದೆ ಸಭೆಯೊಳು ಕೋಲೆ
ಏಯಲವಾದೆ ಸಭೆಯೊಳ್ ನಿಮ್ಮಕ್ಕನ
ಕಾಲಿಗಾದಾರೂ ಹೋಲೀಯ ಕೋಲೆ ೧೩೪

ಒಂದನೆಂದು ಹನ್ನೊಂದನೆನ್ನಿಸಿಕೊಂಡೆ
ಕುಂದಿಲ್ಲವಲ್ಲೆ ನಿನ ಬಣ್ಣ ಕೋಲೆ
ಕುಂದಿಲ್ಲವಲ್ಲೆ ನಿನ ಬಣ್ಣ ಸುಭದ್ರೆ
ಬಂದ್ಹಾದಿ ಹಿಡಿದು ಮನೆಗ್ಹೋಗು ಕೋಲೆ ೧೩೫

ಬಾಳೋರ ಮನೆ ಮುಂದೇನೊ ಕೂಗ್ಯಾಡಿದಂತೆ
ವೀಳ್ಯವ ಕೊಟ್ಟು ಏತರಲಿ ಕೋಲೆ

ವೀಳ್ಯವ ಕೊಟ್ಟು ಏತರೊಳ್ಳಾಯಿಸಿಕೊಂಡೆ
ಹೇಳದೆ ಹೋಗೆ ಮನೆತನಕ ಕೋಲೆ ೧೩೬

ಆನೆಯ ಸಂಗಡ ಆಡ್ಹುಲ್ಲು ಮೆದ್ದರೆ
ಆನೆ ಹಿಂಗಾಲಲ್ಲೊದೆಯದೆ ಕೋಲೆ
ಆನೆ ಹಿಂಗಾಲಲ್ಲೊದೆಯದೆ ಸುಭದ್ರೆ
ರಾಣಿ ರುಕ್ಮಿಣಿಗೆ ಸರಿಯೇನೆ ಕೋಲೆ ೧೩೭

ಕುದುರೆಯ ಸಂಗಡ ಕುರಿ ಹುಲ್ಲು ಮೆದ್ದರೆ
ಕುದುರೆಯ ಹಿಂಗಾಲಿಂದೊದೆಯದೆ ಕೋಲೆ
ಕುದುರೆ ಹಿಂಗಾಲಿಂದೊದೆಯದೆ ಸುಭದ್ರೆ
ಸುದತಿ ರುಕ್ಮಿಣಿಗೆ ಸರಿಯೇನೆ ಕೋಲೆ ೧೩೮

ಬೀಗರಾಡಿದ ಬಲು ಬಿಂಕದ ನುಡಿ ಕೇಳಿ
ಸಾಗರ ಶಯನ ಮುರಿದೆದ್ದ ಕೋಲೆ
ಸಾಗರ ಶಯನ ಮುರಿದೆದ್ದ ಅರ್ಜುನ
ಹೇಗಿದೆ ನಿನ್ನ ಮನದೊಳು ಕೋಲೆ ೧೩೯

ಹುಚ್ಚು ಕುಂದಿನ ಮಾತು ಆಡಿದೆ ನೀ ಕೇಳು
ಹುಚ್ಚಾಗಿ ಹೋದಿ ಸಭೆಯೊಳಗೆ ಕೋಲೆ
ಹುಚ್ಚಾಗಿ ಹೋದಿ ಸಭೆಯೊಳಗೆನ್ನುತ್ತ
ಅಚ್ಚುತಾನಂತನು ನುಡಿದನು ಕೋಲೆ ೧೪೦

ಏನೆಲೊ ಅರ್ಜುನ ಈ ನುಡಿ ನಿನಗೇಕೊ
ನೀನು ನಮ್ಮವನು ತಿರುತಿರುಗಿ ಕೋಲೆ
ನೀನು ನಮ್ಮವನು ತಿರುತಿರುಗಿ ಮಾರಿದರು
ಕಾಣೆಯ ಹೊಲವ ಅರಿಯರಿ ಕೋಲೆ ೧೪೧

ಆವು ಕಾವನಿಗೆ ಯಾವಾಗ ಮೂರ್ ದುಡ್ಡು
ಭಾವ ನಿನಗೊಮ್ಮೆ ದೊರೆತನ ಕೋಲೆ

ಭಾವ ನಿನಗೊಮ್ಮೆ ದೊರೆತನ ಉಂಟಯ್ಯ
ನಾವೆ ಕೊಟ್ಟೇವು ತಕ್ಕೊಳ್ಳೊ ಕೋಲೆ ॥೪೨

ದನಗಾವಿ ನೀನೆತ್ತ ವನಜಕುಸುಮವೆತ್ತ
ಕನಕ ಕಬ್ಬಿಣಕೆ ಸರಿಯುಂಟೆ ಕೋಲೆ
ಕನಕ ಕಬ್ಬಿಣಕೆ ಸರಿಯುಂಟೆ ಅರ್ಜುನ
ನಿನಗೆ ಸುಭದ್ರೆ ಸರಿಯೇನೊ ಕೋಲೆ ॥೪೩

ದನಗಾವಿ ಎಂದರೆ ನನಗೆ ಹೀನತೆಯಿಲ್ಲ
ಜನರೆಲ್ಲ ಬಲ್ಲರು ಈ ಮಾತು ಕೋಲೆ
ಜನರೆಲ್ಲ ಬಲ್ಲರು ಈ ಮಾತು ಭಾವಯ್ಯ
ನೆನಪು ಕೊಟ್ಟೆಲ್ಲೊ ಮರೆತಿದ್ದೆ ಕೋಲೆ ॥೪೪

ಗೋಪಾಲ ಶಬ್ದಾರ್ಥ ನೀ ಕೇಳು ಭಾವಯ್ಯ
ಕೋಪವಿನ್ಯಾಕೆ ಎನ್ನ ಮೇಲೆ ಕೋಲೆ
ಕೋಪವಿನ್ಯಾಕೆ ಎನ ಮೇಲೆ ನಿನ್ಮಹಿಮೆ
ನೀ ಪೇಳಿಕೊಂಡೆ ನಿಷ್ಕಪಟ ಕೋಲೆ ॥೪೫

ಹೆಣ್ಣು ಕೊಟ್ಟನು ನಿನಗೆ ಕಣ್ಣು ಕಾಣದೆ ವನಧಿ
ಇನ್ನೆಲ್ಲಿ ವರನು ದೊರೆಯದೆ ಕೋಲೆ
ಇನ್ನೆಲ್ಲು ವರನು ದೊರೆಯದೆ ಇರಲಿಂಥಾ--
ವನ್ನಿಗೆ ಕೊಟ್ಟವ ಹೆಡ್ಡನು ಕೋಲೆ ॥೪೬

ಕೊಟ್ಟರೇನಾಯಿತು ಇಟ್ಟಾಣೆ ಇಂಬಿಲ್ಲ
ಹುಟ್ಟು ಗತಿಯಂತು ಮೊದಲಿಲ್ಲ ಕೋಲೆ
ಹುಟ್ಟು ಗತಿಯಂತು ಮೊದಲಿಲ್ಲ ದಾನವ
ಕೊಟ್ಟ ಬಲೀಂದ್ರನಿದಕೆ ಸಾಕ್ಷಿ ಕೋಲೆ ॥೪೭

ಕುಲಗೋತ್ರವಿಲ್ಲ ನೆಲೆಯಿಲ್ಲಾಚಾರಿಲ್ಲ
ಬಲು ದೈತ್ಯರೊಳು ಹಗೆಗಾರ ಕೋಲೆ

ಬಲು ದೈತ್ಯರೊಳು ಹಗೆಗಾರಂಥವನಿಗೆ
ಜಲಧೀಶ ಮಗಳ ಕೊಡಬಹುದೆ ಕೋಲೆ ೧೪೮

ಬಲುಮಂದಿ ಸವತೇರು ಮಲ ಮಕ್ಕಳೆಂಬೋರು
ನೆಲೆಯಿಲ್ಲವೀ ಜಗತ್ರಯದೊಳು ಕೋಲೆ
ನೆಲೆಯಿಲ್ಲವೀ ಜಗತ್ರಯದೊಳು ನಮ್ಮ ಶ್ರೀ
ಲಲನೆಗೆ ತಕ್ಕ ವರನೇನು ಕೋಲೆ ೧೪೯

ಚಿಕ್ಕವನೆಂಬೆನೆ ಲೆಕ್ಕವಿಲ್ಲದ ವೃದ್ಧ
ರೊಕ್ಕ ರೂಪಾಯಿಗಳಿವಗಿಲ್ಲ ಕೋಲೆ
ರೊಕ್ಕ ರೂಪಾಯಿಗಳಿವಗಿಲ್ಲ ಇಂಥವಗೆ
ಅಕ್ಕರದಿ ಹೆಣ್ಣು ಕೊಡಬಹುದು ಕೋಲೆ ೧೫೦

ಕುದುರೆ ಮೋರೆಯ ಉರಿಗಣ್ಣಿನ ವರನಿಗೆ
ಇದಿರು ಹೆಣ್ಣಿಗಾಗಿ ಮನಸೋತ ಕೋಲೆ
ಇದಿರು ಹೆಣ್ಣಿಗಾಗಿ ಮನಸೋತು ಕೊಟ್ಟ ಮೇಲೆ
ಬದಲು ಮಾತಾಡಿ ಫಲವೇನು ಕೋಲೆ ೧೫೧

ಮಗಳ ಕೊಟ್ಟಿಹೆನೆಂದು ಮಮಕಾರದಿಂದಲಿ
ಸುಗುಣ ಸಮುದ್ರ ಉಳುಹಿದ ಕೋಲೆ
ಸುಗುಣ ಸಮುದ್ರ ಉಳುಹಿದ ಅಹಿರೋಷ
ಖಗರಾಜನಿಂದ ಕೈಗಾಯ್ತು ಕೋಲೆ ೧೫೨

ಹಾರುವ ಖಗರಾಜ ಹಾರ್ವಾರೆ ಪೋಗುವ
ಮೂರುತಿ ಕರವ ನೆಗಹಿದ ಕೋಲೆ
ಮೂರುತಿ ಕರವ ನೆಗಹಿದ ಕಾರಣ
ಹಾರುವ ಗರುಡ ಕೈಗಾಯ್ದ ಕೋಲೆ ೧೫೩

ವಾರಿಧಿಯೊಳು ಮನೆ ಹಾವಿನ ಮೇಲ್ ನಿದ್ರೆ
ಹಾರುವ ಹದ್ದಿನ ಏರುವ ಕೋಲೆ

ಹಾರುವ ಹದ್ದಿನ ಏರುವನೆಂಬಂಥ
ಘೋರ ಅಹಂಕಾರ ನಿನಗೇಕೆ ಕೋಲೆ ೧೫೪

ಹಾರುವ ಹದ್ದಿನ ಏರಿ ತಿರುಗಾಡ್ವಾಗ
ಜಾರಿ ಬಿದ್ದರೆ ತೆರನೇನು ಕೋಲೆ
ಜಾರಿ ಬಿದ್ದರೆ ತೆರನೇನು ಇವಗೆ ಬುದ್ಧಿ
ಯಾರು ಪೇಳ್ವರು ಜಗದೊಳಗೆ ಕೋಲೆ ೧೫೫

ಭರದಿಂದ ನಿನ್ನೆದೆ ಬಿರಿಯಲೊದ್ದನು ಋಷಿ
ದುರುಳ ಶಿಶುಪಾಲ ಸಭೆಯೊಳು ಕೋಲೆ
ದುರುಳ ಶಿಶುಪಾಲ ಸಭೆಯೊಳು ಬೈದದ್ದು
ಸರಿಬಂತು ಎನ್ನ ಮನಸಿಗೆ ಕೋಲೆ ೧೫೬

ದಾನವಾಂತಕನೆಂದು ಪೊಗಳೋರು ಜಗದೊಳು
ಕಾಣದೆ ಕಣ್ಣು ತಿಳಿಯದೆ ಕೋಲೆ
ಕಾಣದೆ ಕಣ್ಣು ತಿಳಿಯದೆ ಜನಗಳು
ಮಾನ್ಯ ಗುಣಂಗಳನರಿಯದೆ ಕೋಲೆ ೧೫೭

ಕಾಲಯಮನನು ಕಲಹ ಕೊಡಲಿ ಬಂದರೆ ಕೃಷ್ಣ
ಮೂಲೆಯಲಿ ಹೋಗಿ ಅಡಗಿದೆ ಕೋಲೆ
ಮೂಲೆಯಲಿ ಹೋಗಿ ಅಡಗಿದೆ ಮುಚುಕುಂದ
ವಾಲಯದಲಿ ನಿನ್ನ ಉಳುಹಿದ ಕೋಲೆ ೧೫೮

ಭೇರಿ ಬಾರಿಸೆ ಬರಲು ಧೀರ ಜರೆಯ ಸುತಗೆ
ಮೋರೆ ತೋರದೆ ಕಳ್ಳ ವೇಷದಿ ಕೋಲೆ
ಮೋರೆ ತೋರದೆ ಕಳ್ಳ ವೇಷದಿ ಬಂದಿರೆ ವೀರ
ಮಾರುತಿ ಜೈಸಿ ಉಳುಹಿದ ಕೋಲೆ ೧೫೯

ನಂದನವನ ಪೊಕ್ಕು ಸುರತರು ತರುವಾಗ
ಇಂದ್ರನು ಬಂದಿದ್ದ ಜಗಳಕ್ಕೆ ಕೋಲೆ

ಇಂದ್ರನು ಬಂದಿದ್ದ ಜಗಳಕ್ಕೆ ನಮ್ಮಕ್ಕ-
ನಿಂದ ನಿನ್ನಭಿಮಾನ ಉಳಿಯಿತು ಕೋಲೆ ೧೬೦

ಅಂದು ದುರ್ಯೋಧನ ಸಭೆಯೊಳು ಕಟ್ಟಲು
ಅಂದು ನಮ್ಮಿಂದ ಉಳಿದೆಲ್ಲೊ ಕೋಲೆ
ಅಂದು ನಮ್ಮಿಂದ ಉಳಿದೆಲ್ಲೊ ಭಾವಯ್ಯ
ಅಂದಿನ ಭವಣೆ ಮರೆತೇನೊ ಕೋಲೆ ೧೬೧

ಜರೆಯ ಸುತನಿಗಂಜಿ ಮಥುರೆಯೊಳಿರದೆ
ಹೊರಟೋಡಿದೆ ಗೋಮಂತಕಗೆ ಕೋಲೆ
ಹೊರಟೋಡಿದೆ ಗೋಮಂತಕಗೆ ಹಿಂದೆ ಪಟ್ಟ
ಕರೆಕರೆಯನೆಲ್ಲ ಮರೆತೆಯ ಕೋಲೆ ೧೬೨

ಇದಿರಾಗಿ ಇದ್ದು ಕಾದಿ ಒಬ್ಬರನಾದರೂ
ಮಧುವೈರಿ ನೀನು ಗೆಲಲಿಲ್ಲ ಕೋಲೆ
ಮಧುವೈರಿ ನೀನು ಗೆಲಲಿಲ್ಲ ಸರ್ವರ
ಸದೆದೆ ಮಾರ್ಮಲಚಿ ವಂಚಿಸಿ ಕೋಲೆ ೧೬೩

ಮೂರು ಗುಣಂಗಳ ಮೀರಿದವನಿವ
ಮೂರು ಮನೆ ಚಿಂಚಿಯೆನಿಸುವ ಕೋಲೆ
ಮೂರು ಮನೆ ಚಿಂಚಿಯೆನಿಪನಿವನ ಮಹಿಮೆ
ಯಾರು ಬಲ್ಲರು ಜಗದೊಳು ಕೋಲೆ ೧೬೪

ಕ್ಷೀರಸಾಗರ ಶಯನ ಎಂದರೆ ಹಿಗ್ಗುವಿ
ಯಾರು ಅರಿಯರೆ ನಿನ್ನ ಹುಳುಕನು ಕೋಲೆ
ಯಾರು ಅರಿಯರೆ ನಿನ್ನ ಹುಳುಕು ಅತ್ತೆಮನೆಯ
ಸೇರಿ ಇದ್ದುದನರಿಯರೆ ಕೋಲೆ ೧೬೫

ಪಾಲು ಮೊಸರು ಕದ್ದು ಬಾಲೇರೆಲ್ಲರ ಕೆಡಿಸಿ
ಕಾಲು ಒರಳಿಗೆ ಕಟ್ಟಿಸಿಕೊಂಡೆ ಕೋಲೆ

ಕಾಲು ಒರಳಿಗೆ ಕಟ್ಟಿಸಿಕೊಂಡದ್ದು
ಭೂಲೋಕದಲ್ಲಿ ಮರೆತೇನೆ ಕೋಲೆ ೧೬೬

ಬೆಣ್ಣೆ ಮೊಸರು ಕದ್ದು ಕನ್ಯೆರೆಲ್ಲರ ಕೆಡಿಸಿ
ಮುನ್ನೆ ತೊತ್ತಿನ ಮನೆಯಲ್ಲಿ ಕೋಲೆ
ಮುನ್ನೆ ತೊತ್ತಿನ ಮನೆಯಲ್ಲಿ ಉಂಡು ಹಿಂದೆ
ಹೆಣ್ಣಾಗಿದ್ದದ್ದು ಮರೆತೇನೆ ಕೋಲೆ ೧೬೭

ಅಪಾರ ನಾರೇರ ಒಗೆತನಕೆ ನೀರ್ ತಿದ್ದಿ
ವ್ಯಾಪಾರ ಬಹಳ ನಡೆಸಿದೆ ಕೋಲೆ
ವ್ಯಾಪಾರ ಬಹಳ ನಡೆಸಿದೆ ಶ್ರೀಕೃಷ್ಣ
ಅಪಾರ ಮಹಿಮಗೆ ನಮೋ ಎಂಬೆ ಕೋಲೆ ೧೬೮

ಸ್ವರಮಣನೆಂತೆಂದು ಸುಖಿಸುತ್ತ ಹೆದ್ದೈವ
ಕರಡಿ ಮಗಳ ತಂದು ಮದುವ್ಯಾದೆ ಕೋಲೆ
ಕರಡಿ ಮಗಳ ತಂದು ಮದುವ್ಯಾದೆ ಚುಂಚುತ್ತಿ–
ಯೊಡಗೂಡಿ ಅವಳ ನೆರೆವರೆ ಕೋಲೆ ೧೬೯

ನಾರುವ ಮೈಯ್ಯುವ ನೀರೊಳಗಡಗಿಹ
ಮೋರೆ ಹಂದಿಯವ ಬಲು ಕೋಪಿ ಕೋಲೆ
ಮೋರೆ ಹಂದಿಯವ ಬಲು ಕೋಪಿ ತಿರಿತಿಂಬ
ಹಾರುವನ ಗೊಡವೆ ನಮಗೇಕೆ ಕೋಲೆ ೧೭೦

ಕೊಡಲಿ ಪಿಡಿದು ತನ್ನ ಪಡೆದ ಮಾತೆಯ ಕೊಂದು
ಕಡಲ ಬಂಧಿಸಿ ಮಡದಿಯ ಕೋಲೆ
ಕಡಲ ಬಂಧಿಸಿ ಮಡದಿಯ ಕೊಂಡು ಬಂದು
ಅಡವಿಗಟ್ಟಿದ ಮಹಮಹಿಮ ಕೋಲೆ ೧೭೧

ಜಾರ ಚೋರನೆಂದು ಜಗದೊಳು ಪೆಸರಾದ ಅ–
ಪಾರವಾಗಿದ್ದ ವನಿತೇರ ಕೋಲೆ ಅ–

ಪಾರವಾಗಿದ್ದ ಗೋಪೇರ ಪಾಲ್ಗೊಸರ
ಚೋರತನದಲ್ಲಿ ಕೆಡಿಸಿದ ಕೋಲೆ ೧೭೨

ಭಂಡನಂದದಲಿ ಬತ್ತಲೆ ತಿರುಗುತ್ತ
ಪುಂಡಗಾರನಂತೆ ಹಯವೇರಿ ಕೋಲೆ
ಪುಂಡಗಾರನಂತೆ ಹಯವೇರಿ ಹೇಸದ
ಲಂಡರ ಗೊಡವೆ ನಮಗೇಕೆ ಕೋಲೆ ೧೭೩

ಶಬರಿಯೆಂಜಲ ತಿಂದೆ ಕುಬುಜೆಯ ಕೂಡಿದೆ
ಅಬುಜ ದಳಾಕ್ಷಾಷ್ಟ ಮಹಿಷೇರ ಕೋಲೆ
ಅಬುಜದಳಾಕ್ಷಾಷ್ಟ ಮಹಿಷಿಯರಿಗೆ
ಪ್ರಭುವಾದವಗೆ ಬಹುನೀತವೆ ಕೋಲೆ ೧೭೪

ಸಾರಿ ಪೋಗಲು ಬಲು ದೂರ ವೈಕುಂಠವು
ಯಾರು ಪೋದರು ಹಿಂದಿರುಗರು ಕೋಲೆ
ಯಾರು ಪೋದರು ಹಿಂದಿರುಗಿ ಮರಳಿ ಸುದ್ದಿ
ಯಾರು ತರರು ಏನಾದರೂ ಕೋಲೆ ೧೭೫

ಹೆತ್ತ ಮಗಳನಿತ್ತ ಅತ್ತೆಯ ಬಿಡದವ
ಮತ್ತೆ ಪರಹೆಣ್ಣುಗಳ ಬಿಡುವನೆ ಕೋಲೆ
ಮತ್ತೆ ಪರಹೆಣ್ಣುಗಳ ಬಿಡುವನೆ ಇವ ತನ್ನ
ಅರ್ತಿಯ ಮಗಳ ಮದುವ್ಯಾದ ಕೋಲೆ ೧೭೬

ತಲೆಹೊಡಕ ಹಿರಿಮಗ ಕಿರಿಮಗ ಚಂಚಲ
ಬಲು ಚಾಡಿಗೇಡಿ ಮೊಮ್ಮಗ ಕೋಲೆ
ಬಲು ಚಾಡಿಗೇಡಿ ಮೊಮ್ಮಗನೆಂದು
ಫಲುಗುಣ ನಗುತ ನುಡಿದನು ಕೋಲೆ ೧೭೭

ಹೊರಗಿನಿಂದ ಬಂದಳು ತಿರುಗಾಲ ತಿಪ್ಪಿಯು
ಹೆರರಿಗುಪಕಾರಿ ಮನೆ ಮಾರಿ ಕೋಲೆ

ಹೆರರಿಗುಪಕಾರಿ ಮನೆ ಮಾರಿ ಹಡೆದ್ದಡೆದು
ತರಳರನೆಲ್ಲ ಎಸೆದಳು ಕೋಲೆ ೧೭೮

ಬಲು ಭಾಗ್ಯವಂತೆಂದು ಜಗವೆಲ್ಲ ಮೆಚ್ಚಲು
ತಲೆಯಲ್ಲಿ ಹೊತ್ತ ಮಹದೇವ ಕೋಲೆ
ತಲೆಯಲ್ಲಿ ಹೊತ್ತ ಮಹದೇವ ಇಂಥವಳ
ಬಲು ಪಾತಿವ್ರತ್ಯವ ನೋಡಿದ್ಯ ಕೋಲೆ ೧೭೯

ನಿಲ್ಲು ನಿಲ್ಲೆಲೊ ನಿನ್ನ ಸೊಸೆ ಎಂಬುವಳು
ಎಲ್ಲರ ಬಾಯಿಗೆ ಬರುವಳು ಕೋಲೆ
ಎಲ್ಲರ ಬಾಯಿಗೆ ಬರುವಳು ಇಷ್ಟಿರಲು
ಒಳ್ಳೇದೆ ನಿನ್ನ ಮನೆತನ ಕೋಲೆ ೧೮೦

ಮಗನ ಮಗನು ಬಲು ಕೊಂಡೆಗಾರನಾದ
ಮಗಳ ಮಗನು ನಿನ್ನ ಎದೆಗೆಚ್ಚ ಕೋಲೆ
ಮಗಳ ಮಗನು ನಿನ್ನ ಎದೆಗೆಚ್ಚದ್ದು ಕಂಡು
ನಗುತಾರೆ ನಿನ್ನ ಸರಿಯವರು ಕೋಲೆ ೧೮೧

ರುದ್ರ ಬ್ರಹ್ಮತ್ಯಗಾರ ಕ್ಷುದ್ರ ಬಲೀಂದ್ರನು
ಕದ್ದ ಸುವರ್ಣದ ಮುಕುಟವ ಕೋಲೆ
ಕದ್ದ ಸುವರ್ಣದ ಮುಕುಟವ ಬಲರಾಮ
ಮದ್ಯಪಾಯಿ ಇನ್ನು ನುಡಿದೇನು ಕೋಲೆ ೧೮೨

ಚಂದ್ರಗುರು ತಲ್ಪಗ ಇಂದ್ರ ತತ್ಸರಿಯೋಗ
ಚಂದುಳ್ಳ ಬಳಗ ನಿನಗಿವರು ಕೋಲೆ
ಚಂದುಳ್ಳ ಬಳಗ ನಿನಗಿವರು ಎನುತಲಿ
ಮಂದಹಾಸದಿ ನುಡಿದನು ಕೋಲೆ ೧೮೩

ಮಾತೃ ದ್ರೋಹಿ ನಾರದ ಪಿತೃದ್ರೋಹಿ ಪ್ರಹ್ಲಾದ
ಭ್ರಾತೃ ದ್ರೋಹಿ ವಿಭೀಷಣ ಕೋಲೆ

ಭ್ರಾತೃ ದ್ರೋಹಿ ವಿಭೀಷಣ ಮುಖ್ಯರು ಪ್ರೇಮ
ಪಾತ್ರರಾದರು ನಿನಗದರಿಂದ ಕೋಲೆ ೧೮೪

ಸ್ವಾಮಿ ದ್ರೋಹಿ ಅಕ್ರೂರ ಗುರುದ್ರೋಹಿ ಧರ್ಮಜ
ಬ್ರಹ್ಮ ದ್ರೋಹಿಗಳು ಯಾದವರು ಕೋಲೆ
ಬ್ರಹ್ಮ ದ್ರೋಹಿಗಳಾದ ಯಾದವರಿಗೆಲ್ಲ
ಸ್ವಾಮಿ ಎಂದು ನೀನೆನಿಸುವಿ ಕೋಲೆ ೧೮೫

ಅತ್ತೆಯ ಮಗನೆಂದು ಮತ್ತೆ ತಂಗಿಯ ಕೊಟ್ಟು
ಅರ್ತಿಲಿ ರಥವ ನಡೆಸಿದೆ ಕೋಲೆ
ಅರ್ತಿಲಿ ರಥವ ನಡೆಸಿದುಪಕಾರವ
ಎತ್ತಲು ದಾನವ ತಿರುಹಿದೆ ಕೋಲೆ ೧೮೬

ಗುಣನಿಧಿ ನಿನ್ನ ದುರ್ಗುಣಿಯೆಂದು ಪೇಳಿದೆ
ಎಣಿಸದಿರೆನ್ನ ಅಪರಾಧ ಕೋಲೆ
ಎಣಿಸದಿರೆನ್ನ ಅಪರಾಧವೆನುತಲಿ
ಮಣಿದನು ಶ್ರೀಹರಿ ಚರಣಕ್ಕೆ ಕೋಲೆ ೧೮೭

ಸ್ವಾಮಿ ಭೃತ್ಯ ನ್ಯಾಯವರಿಯದೆ ನಾ ನಿನ್ನ
ಪಾಮರನಂತೆ ನುಡಿದೆನು ಕೋಲೆ
ಪಾಮರನಂತೆ ನುಡಿದಪರಾಧವ
ಶ್ರೀ ಮನೋಹರನೆ ಮನ್ನಿಸು ಕೋಲೆ ೧೮೮

ನಿನ್ನ ನಾಮ ಮುದ್ರೆ ಧರಿಸಿದ ದಾಸರು
ಉನ್ನಂತ ಪಾಪವ ಮಾಡಲು ಕೋಲೆ
ಉನ್ನಂತ ಪಾಪವ ಮಾಡಲು ಪರಿಹರಿಸಿ
ಮನ್ನಿಸಿ ಪೊರೆವುದು ನಿನ್ನ ನಾಮ ಕೋಲೆ ೧೮೯

ಬಡನಡು ನಡುಗತ ಕುಚಗಳಲ್ಲಾಡಿಸುತ
ಮುಡಿದ ಪುಷ್ಪಗಳು ಉದುರುತ ಕೋಲೆ

ಮುಡಿದ ಪುಷ್ಪಗಳು ಉದುರುತ ಅಣ್ಣನ
ಅಡಿಗಳಿಗೆರಗಿದಳು ಸುಭದ್ರೆ ಕೋಲೆ ೧೯೦

ಹೆಣ್ಣು ಕೊಟ್ಟ ಮೇಲೆ ಹಿತವೆ ಚಿಂತಿಸಬೇಕು
ಇನ್ನು ನುಡಿದುದರಿಂದ ಫಲವೇನು ಕೋಲೆ
ಇನ್ನು ನುಡಿದುದರಿಂದ ಫಲವೇನು ಅಣ್ಣಯ್ಯ
ಎನ್ನ ಕಡೆ ನೋಡಿ ಮನ್ನಿಸು ಕೋಲೆ ೧೯೧

ಜಾಂಬೂನದಾಂಬರ ನಿನಗೆ ತಂದೇನೊ ಸ್ವಾಮಿ
ಜಾಂಬವತೀಶ ಸ್ವೀಕರಿಸು ಕೋಲೆ
ಜಾಂಬವತೀಶ ಸ್ವೀಕರಿಸಿ ನಮಗಿನ್ನು
ಇಂಬು ವೈಕುಂಠದಿ ಕೊಡಬೇಕು ಕೋಲೆ ೧೯೨

ಏನವ್ವ ಸುಭದ್ರೆ ಈ ನುಡಿ ನನಗೇಕೆ
ನೀನು ನಿನ್ನಿಂದ ನಿಮ್ಮವರು ಕೋಲೆ
ನೀನು ನಿನ್ನಿಂದ ನಿಮ್ಮವರು ಎನ್ನ
ಪ್ರಾಣ ಪದಕರೆನುತಿಹರು ಕೋಲೆ ೧೯೩

ಮೊದಲೆ ಅತ್ತೆಯ ಮಗ ಅದರಿಂದ ನಿನ ಕೊಟ್ಟ
ಹೆದರುವರೆ ಅವರು ನಮಗಿನ್ನು ಕೋಲೆ
ಹೆದರುವರೆ ಅವರು ನಮಗಿನ್ನು ಎನುತಲಿ
ಮುದದಿಂದ ಕೇಳಿ ನಗತಿದ್ದ ಕೋಲೆ ೧೯೪

ಅತ್ತಿಗೆ ನೀ ನಮ್ಮ ಹೆತ್ತ ತಾಯ್ ಸರಿಯಮ್ಮ
ಅತ್ಯಂತ ನಾನು ನುಡಿವೆನು ಕೋಲೆ
ಅತ್ಯಂತ ನಾನು ನುಡಿದಪರಾಧವ
ಚಿತ್ತದೊಳಿಡದೆ ಕರುಣಿಸು ಕೋಲೆ ೧೯೫

ದೇವಿ ರುಕ್ಮಿಣಿ ನೀ ದೇವಕಿ ಸರಿಯಮ್ಮ
ನಾ ವಿಗಡ ಬುದ್ಧಿಯಲಿ ನುಡಿದೆನು ಕೋಲೆ

ನಾ ವಿಗಡ ಬುದ್ಧಿಯಲಿ ನುಡಿದಪರಾಧವ
ಭಾವದೊಳಿಡದೆ ಪಾಲಿಸು ಕೋಲೆ ೧೯೬

ಸುಗುಣ ಸಾಕಾರಿಯೆ ನಿಗಮಾಭಿಮಾನಿಯೆ
ವಿಗಡ ಬುದ್ಧಿಯಲಿ ನುಡಿದೆನು ಕೋಲೆ
ವಿಗಡ ಬುದ್ಧಿಯಲಿ ನುಡಿದೆನು ನಾ ನಿನ
ಮಗಳು ಭಾಗೀರಥಿ ಸರಿಯೆನ್ನು ಕೋಲೆ ೧೯೭

ಸಿಂಧುಜಾತೆ ದೇವಿ ಮಂದರುದ್ಧಾರಿಯೆ
ಮಂದಮತಿಯಲ್ಲಿ ನುಡಿದೆನು ಕೋಲೆ
ಮಂದಮತಿಯಲ್ಲಿ ನುಡಿದಪರಾಧಗ–
ಳೊಂದೆಣಿಸದೆ ಕರುಣಿಸು ಕೋಲೆ ೧೯೮

ಸರಿಯಲ್ಲದವಳು ಸರಿಯೆಂದು ನುಡಿದೆನು
ಹಿರಿಯತ್ತೆ ಮಗಳೆ ನಿಮಗಿನ್ನು ಕೋಲೆ
ಹಿರಿಯತ್ತೆ ಮಗಳೆ ನಮ್ಮಿಂದ ತಪ್ಪೆಂದು
ಚರಣಕ್ಕೆರಗಿದಳು ಸುಭದ್ರೆ ಕೋಲೆ ೧೯೯

ಎರಗಿದ ನಾದಿನಿಯ ಕರಗಳ ಪಿಡಿದೆತ್ತಿ
ಭರದಿ ತಕ್ಕೈಸಿ ರುಕ್ಮಿಣಿ ಕೋಲೆ
ಭರದಿ ತಕ್ಕೈಸಿ ರುಕ್ಮಿಣಿ ಸುಭದ್ರೆ
ದೊರೆ ಮಗಳೆ ನಮಗೆ ಎರಗುವಿಯ ಕೋಲೆ ೨೦೦

ಬ್ರಹ್ಮೇಶ ಶಕ್ರ ರವಿ ಧರ್ಮ ಶಶಾಂಕ ಪೂರ್ವ
ಸುಮ್ಮನಸ ಸಂತತಿ ಮೊದಲಾಗಿ ಕೋಲೆ
ಸುಮ್ಮನಸ ಸಂತತಿ ಮೊದಲಾಗಿ ಶ್ರೀದೇವಿ
ನಿಮ್ಮ ಕಟಾಕ್ಷ ಬಯಸುವರು ಕೋಲೆ ೨೦೧

ಅಂದರೇನಮ್ಮ ನಿನ್ನ ಕುಂದ ಹಿಡಿವರಾರು
ಮಂದರೋದ್ಧರನ ಕಿರು ತಂಗಿ ಕೋಲೆ

ಮಂದರೋದ್ಧರನ ಕಿರು ತಂಗಿ ಸುಭದ್ರೆ
ಗಂಧ ಕುಂಕುಮವ ಧರಿಸಮ್ಮ ಕೋಲೆ ೨೦೨

ನುಡಿದರೆಮ್ಮ ತಪ್ಪು ಹಿಡಿವರಾರು ನಿನ್ನ
ಕಡಲಶಯನನ ಕಿರುತಂಗಿ ಕೋಲೆ
ಕಡಲಶಯನನ ಕಿರುತಂಗಿ ಸುಭದ್ರೆ
ಉಡಿಯ ತುಂಬುವೆನು ಬಾರಮ್ಮ ಕೋಲೆ ೨೦೩

ಚರಣಕ್ಕಂದಿಗೆ ಗೆಜ್ಜೆ ಮಿನುಗೋ ಪೀತಾಂಬರ
ಸಿರಿ ವತ್ಸ ಗಂಧ ತುಳಸಿಯ ಕೋಲೆ
ಸಿರಿ ವತ್ಸ ಗಂಧ ತುಳಸಿ ಕೌಸ್ತುಭ ಹಾರ
ಸಿರಿದೇವಿ ರಮಣಗುಡುಗೋರೆ ಕೋಲೆ ೨೦೪

ನೊಸಲೊಳೊಪ್ಪುವ ನಾಮ ಎಸೆವ ಕರ್ಣ ಕುಂಡಲ
ಮಿಸುನಿಯಂತೊಪ್ಪುವ ವಸನವು ಕೋಲೆ
ಮಿಸುನಿಯಂತೊಪ್ಪುವ ಮಕುಟ ಮೌಕ್ತಿಕ ಹಾರ
ವಸುದೇವ ತನಯಗುಡುಗೋರೆ ಕೋಲೆ ೨೦೫

ಅನರ್ಘ್ಯವಾಗಿಹ ಅನಂತ ವಸ್ತ್ರಾಭರಣ
ಅನಂತ ಕಾಲಕ್ಕೆ ತಂದೆವು ಕೋಲೆ
ಅನಂತ ಕಾಲಕ್ಕೆ ತಂದೆವು ಲಕ್ಷ್ಮೀ ನಿಮ್ಮ
ಅನಂತ ಬಳಗಕ್ಕೆ ಕೊಡಬನ್ನಿ ಕೋಲೆ ೨೦೬

ಗಂಧ ಕುಂಕುಮ ಹಚ್ಚಿ ತಂದ ವೀಳ್ಯವ ಕೊಟ್ಟು
ಮಂದಹಾಸದಲ್ಲಿ ಕಳುಹುತ್ತ ಕೋಲೆ
ಮಂದಹಾಸದಲ್ಲಿ ಕಳುಹುತ್ತ ರುಕ್ಮಿಣಿ
ಬಂದಳು ಬಾಗಿಲ ಹೊರಹೊರಟು ಕೋಲೆ ೨೦೭

ಸಾಗರ ತನಯಳೆ ಪೂಗರ್ಭನ ಮಾತೆ
ನಾಗಾರಿ ಗಮನನ ಅರ್ಧಾಂಗಿ ಕೋಲೆ

ನಾಗಾರಿ ಗಮನನ ಅರ್ಧಾಂಗಿ ರುಕ್ಮಿಣಿ
ಹೋಗಿ ಬರುತ್ತೇನೆ ದಯವಿರಲಿ ಕೋಲೆ ೨೦೮

ಹಾದಿ ಹಾಡಲ್ಲಶ್ವಮೇಧ ಪರ್ವದ ಕಥೆ
ಸಾಧು ಸಜ್ಜನರ ಪದಧೂಳಿ ಕೋಲೆ
ಸಾಧು ಸಜ್ಜನರ ಪದಧೂಳಿ ಧರಿಸಿ
ಮೇದಿನಿಯೊಳಿದ ರಚಿಸದೆ ಕೋಲೆ ೨೦೯

ಜಯಗಳಾಗಲಿ ಅಪಜಯಗಳು ಪೋಗಲಿ
ಜಯದೇವಿ ರಮಣನೊಲಿಯಲಿ ಕೋಲೆ
ಜಯದೇವಿ ರಮಣನೊಲಿಯಲಿ ನಮ್ಮ ವಿ–
ಜಯ ದಾಸಾರ್ಯರು ಸಲಹಲಿ ಕೋಲೆ ೨೧೦

ಮಂಗಳಾಗಲಿ ಅಮಂಗಳ ಪೋಗಲಿ
ರಂಗನ ಒಲುಮೆ ದೊರೆಯಲಿ ಕೋಲೆ
ರಂಗನ ಒಲುಮೆ ದೊರೆಯಲಿ ನಮ್ಮ ದುರಿ–
ತಂಗಳು ನಿಲ್ಲದೆ ಓಡಲಿ ಕೋಲೆ ೨೧೧

ಶುಭಗಳಾಗಲಿ ಅಶುಭಗಳು ಓಡಲಿ
ಇಭವರದ ನೊಲುಮೆ ದೊರೆಯಲಿ ಕೋಲೆ
ಇಭವರದ ನೊಲುಮೆ ದೊರೆಯಲಿ ನಮ್ಮ ವಿಜಯ
ಪ್ರಭುಗಳ ಕೀರ್ತಿ ಮೆರೆಯಲಿ ಕೋಲೆ ೨೧೨

ಶ್ರೀಕೃಷ್ಣ ಅರ್ಜುನ ಸುಭದ್ರೆ ರುಕ್ಮಿಣಿ
ಸಾಕಾರವಾಗಿ ಸರಸವ ಕೋಲೆ
ಸಾಕಾರವಾಗಿ ಸರಸವಾಡಿದ ಕಥೆ
ಸಾಕಲಿ ನಮ್ಮ ಸರ್ವದಾ ಕೋಲೆ ೨೧೩

ಪಾರ್ಥಿವ ವತ್ಸರ ಕಾರ್ತಿಕ ಮಾಸದ
ಪಾರ್ಥಸಾರಥಿ ಪಕ್ಷ ಹರಿದಿನ ಕೋಲೆ

ಪಾರ್ಥಸಾರಥಿ ಪಕ್ಷ ಹರಿದಿನ ಗುರುವಾರ
ಪೂರ್ತಿಯಾಗಿಹುದು ಈ ಕೃತಿ ಕೋಲೆ ೨೧೪

ಪೂರ್ಣಬೋಧ ಮತಾಬ್ಧಿ ಪೂರ್ಣೇಂದೆನಿಪ ಸತ್ಯ
ಪೂರ್ಣ ಗುರುಗಳ ನಿಜ ಶಿಷ್ಯ ಕೋಲೆ
ಪೂರ್ಣ ಗುರುಗಳ ನಿಜ ಶಿಷ್ಯನ ಕವನ
ಪೂರ್ಣ ಮಾಡಿಹರು ಗುರುಗಳು ಕೋಲೆ ೨೧೫

ಗುರು ವಿಜಯರಾಯರ ಕರುಣಾ ಕಟಾಕ್ಷದಿ
ಪರಮ ವೈಷ್ಣವರ ದಯದಿಂದ ಕೋಲೆ
ಪರಮ ವೈಷ್ಣವರ ದಯದಿಂದಲೀ ಕಥೆ
ಧರೆಯೊಳಗೆಲ್ಲ ಮೆರೆಯಲಿ ಕೋಲೆ ೨೧೬

ಪನ್ನಂಗ ಶಯನ ಸುಪರ್ಣ ಗಿರೀಶ ಸು-
ಪರ್ಣ ವಾಹನ್ನ ಸುಖಪೂರ್ಣ ಕೋಲೆ ಸು-
ಪರ್ಣ ವಾಹನ್ನ ಸುಖಪೂರ್ಣನಾದ ಮೋ-
ಹನ್ನ ವಿಠ್ಠಲ ಕರುಣಿಸು ಕೋಲೆ ೨೧೭

## ೫೪

## ಹಸೆಗೆ ಕರೆಯುವ ಹಾಡು

ಇಂದಿರಾ ದೇವಿಯ ರಮಣ ಬಾ
ವೃಂದಾರಕ ಮುನಿ ವಂದ್ಯ ಬಾ ಶೋಭಾನೇ ಪ

ಸಿಂಧು ಶಯನ ಗೋವಿಂದ ಸದಮಲಾನಂದ ಬಾ
ತಂದೆಯ ಕಂದ ಬಾ ಮಾವನಾ ಕೊಂದ ಬಾ ಗೋಪಿಯ
ಕಂದ ಬಾ ಹಸೆಯ ಜಗುಲಿಗೇ ಅ.ಪ.

ಕೃಷ್ಣವೇಣಿಯ ಪಡೆದವನೆ ಬಾ
ಕೃಷ್ಣನ ರಥ ಹೊಡೆದವನೆ ಬಾ
ಕೃಷ್ಣೆಯ ಕಷ್ಟವ ನಷ್ಟವ ಮಾಡಿದ ಕೃಷ್ಣನೆ ಬಾ ॥
ಯದುಕುಲ ಶ್ರೇಷ್ಠ ಬಾ
ಸತತ ಸಂತುಷ್ಟನೆ ಬಾ
ಉಡುಪೀಯ ಕೃಷ್ಣ ಬಾ ಹಸೆಯ ಜಗುಲಿಗೇ ೧

ಕ್ಷೀರವಾರಿಧಿ ಕುವರಿ ಬಾ
ಸಾರಿದವರಿಗಾಧಾರ ಬಾ
ಮಾರ ಜನನಿ ನಾಗಾರಿ ಮಧ್ಯಳೆ ಹೊಂತಕಾರಿ ಬಾ ॥
ಬಲು ದುರಿತಾರಿ ಬಾ
ಬಹು ವೈಯ್ಯಾರಿ ಬಾ
ಸುಂದರ ನಾರೀ ಬಾ ಹಸೆಯ ಜಗುಲಿಗೇ ೨

ಶ್ರೀ ಭೂ ದುರ್ಗಾಂಭೃಣಿಯೆ ಬಾ
ಶೋಭನ ಗುಣ ಮಣಿ ಖಣಿಯೇ ಬಾ
ಸೌಭಾಗ್ಯದ ಪನ್ನಗವೇಣಿ ಬಾ ॥
ಪರಮ ಕಲ್ಯಾಣಿ ಬಾ
ನಿಗಮಾಭಿಮಾನೀ ಬಾ
ಭಾಗ್ಯದ ನಿಧಿಯೇ ಬಾ ಹಸೆಯ ಜಗುಲಿಗೇ ೩

ಪತಿಯಲ್ಲಿ ಅವತರಿಸಿದವಳೆ ಬಾ
ಪತಿಯ ಸಂಗಡ ಜನಿಸಿದವಳೇ ಬಾ
ಸದ್ಗುಣವತಿಯೇ ಬಾ ॥
ಪತಿತ ಪಾವನ ಸಿರಿ ಮೋಹನ ವಿಠಲನ ಸತಿಯೇ ಬಾ
ವೇದಾವತಿಯೇ ಬಾ
ಬಲು ಪತಿವ್ರತೆಯೇ ಬಾ ಹಸೆಯ ಜಗುಲಿಗೇ ೪

೫೫

## ಬಾಗಿಲು ತೆರೆಯುವ ಹಾಡು

ನಾರಿ ಶಿರೋಮಣಿ ವಾರಿಜ ಮುಖಿಯೆ ಗಂಭೀರಳೆ ಬಾಗಿಲು ತೆರೆಯೇ ।
ಗಂಭೀರಳೆ ಬಾಗಿಲ ತೆರೆಯೇ ಪ

ಆರು ನಿನ್ನಯ ಪೆಸರೆನಗೆ ಪೇಳದಲೆ ದ್ವಾರವ ತೆಗೆಯೆನು ನಾನು ।
ನಾ ದ್ವಾರವ ತೆಗೆಯೆನು ನಾನು ಅ.ಪ.

ನೀರೊಳು ಸಂಚರಿಸಿ ಕ್ರೂರ ತಮನ ಕೊಂದ
ಧೀರ ಮತ್ಸ್ಯನು ಕಾಣೆ ನಾರೀ । ನಾ
ಧೀರ ಮತ್ಸ್ಯನು ಕಾಣೆ ನಾರೀ ॥
ಧೀರ ಮತ್ಸ್ಯನು ನೀನಾದರೊಳಿತು ದೊಡ್ಡ
ವಾರಿಧಿಯೊಳಗಿರು ಹೋಗಯ್ಯ । ದೊಡ್ಡ
ವಾರಿಧಿಯೊಳಗಿರು ಹೋಗಯ್ಯ ೧

ಸುರರು ಅಸುರರು ಕೂಡಿ ಶರಧಿ ಮಥಿಸುತಿರಲು
ಗಿರಿಯ ತಾಳಿದ ಕೂರ್ಮ ಕಾಣೆ । ನಾ
ಗಿರಿಯ ತಾಳಿದ ಕೂರ್ಮ ಕಾಣೆ ॥
ಗಿರಿಯ ತಾಳಿದ ಕೂರ್ಮನಾದರೊಳಿತು । ದೊಡ್ಡ
ಮಡುವಿನೊಳಗೆ ಇರು ಹೋಗಯ್ಯ । ದೊಡ್ಡ
ಮಡುವಿನೊಳಗೆ ಇರು ಹೋಗಯ್ಯ ೨

ಧರೆಯ ಕದ್ದಸುರನ ದಾಡೆಯಿಂದಲಿ ಸೀಳ್ದ
ವರಹ ಕಾಣೆಲೆ ವಾರಿಜಾಕ್ಷಿ । ನಾ
ವರಹ ಕಾಣೆಲೆ ವಾರಿಜಾಕ್ಷೀ ॥
ವರಹ ನೀನಾದರೊಳಿತು ನಡೆ ನಡೆ । ದೊಡ್ಡ
ವನಾಂತ್ರದೊಳಗಿರು ಹೋಗಯ್ಯ ॥ ದೊಡ್ಡ
ವನಾಂತರದೊಳಗಿರು ಹೋಗಯ್ಯ ೩

ತರಳನ ಮೊರೆ ಕೇಳಿ ಹಿರಣ್ಯಕಶಿಪುವ ಕೊಂದ
ನರ ಮೃಗ ರೂಪ ಕಾಣೆ ನಾರೀ । ನಾ
ನರ ಮೃಗ ರೂಪ ಕಾಣೆ ನಾರೀ ॥
ನರ ಮೃಗ ನೀನಾದರೊಳಿತು ದೊಡ್ಡ
ಗಿರಿ ಶಿಖರದೊಳಗಿರು ಹೋಗಯ್ಯ । ದೊಡ್ಡ
ಗಿರಿ ಶಿಖರದೊಳಗಿರು ಹೋಗಯ್ಯ ೪

ಭೂಮಿ ಈರಡಿ ಮಾಡಿ ಬಲಿಯ ಪಾತಾಳಕಿಟ್ಟ
ವಾಮನ ಕಾಣೇ ವಾರಿಜಾಕ್ಷೀ । ನಾ
ವಾಮನ ಕಾಣೇ ವಾರಿಜಾಕ್ಷೀ ॥
ವಾಮನ ನೀನಾದರೊಳಿತು ನಿನ್ನ
ಪ್ರೇಮ ಬಂದಲ್ಲಿರು ಹೋಗಯ್ಯ । ನಿನ್ನ
ಪ್ರೇಮ ಬಂದಲ್ಲಿರು ಹೋಗಯ್ಯ ೫

ತಂದೆ ಆಜ್ಞೆಯ ಪೊತ್ತು ತಾಯಿ ಸೋದರನ್ನ
ಕೊಂದವ ನಾನೇ ಕೋಮಲಾಂಗೀ । ನಾ
ಕೊಂದವ ನಾನೇ ಕೋಮಲಾಂಗೀ ॥
ಕೊಂದವ ನೀನಾದರೊಳಿತು ಮುನಿ
ವೃಂದದಲ್ಲಿ ಇರು ಹೋಗಯ್ಯಾ । ಮುನಿ
ವೃಂದಾದಲ್ಲಿ ಇರು ಹೋಗಯ್ಯ ೬

ಲಂಡ ರಾವಣನ ಶಿರವ ಚಂಡಾಡಿ ಸೀತೆ ತಂದ । ಪ್ರ–
ಚಂಡ ವಿಕ್ರಮ ರಾಮ ಕಾಣೇ । ನಾ ಪ್ರ–
ಚಂಡ ವಿಕ್ರಮ ರಾಮ ಕಾಣೇ ॥
ಪ್ರಚಂಡ ವಿಕ್ರಮನಾದರೊಳಿತು ಕೋತಿ
ಹಿಂಡುಗಳೊಳಗಿರು ಹೋಗಯ್ಯ । ಕೋತಿ
ಹಿಂಡುಗಳೊಳಗಿರು ಹೋಗಯ್ಯ ೭

ಮಧುರಾಪುರದಿ ಪುಟ್ಟಿ ಮಾವ ಕಂಸನ ಕೊಂದ
ಚದುರ ಕಾಣೆಲೆ ಶಾಮಲಾಂಗೀ । ನಾ

ಚದುರ ಕಾಣಲೆ ಶಾಮಲಾಂಗೀ ॥
ಚದುರ ನೀನಾದರೊಳಿತು ನಡೆ ನಡೆ ಗೋಪೇ–
ರಧರ ಚುಂಬಿಸುತಿರು ಹೋಗಯ್ಯ । ಗೋಪೇ–
ರಧರ ಚುಂಬಿಸುತಿರು ಹೋಗಯ್ಯ ೮

ಶುದ್ಧ ಖಳನು ಆಗಿ ವ್ರತವನಳಿದು ಬಂದ
ಬೌದ್ಧ ಕಾಣಲೇ ಮಂದಗಮನೇ । ನಾ
ಬೌದ್ಧ ಕಾಣಲೇ ಮಂದಗಮನೇ ॥
ಬೌದ್ಧನು ನೀನಾದರೊಳಿತು ನಡೆ ನಡೆ ನಿನ್ನ
ಬುದ್ಧಿ ಬಂದಲ್ಲಿರು ಹೋಗಯ್ಯ । ನಿನ್ನ
ಬುದ್ಧಿ ಬಂದಲ್ಲಿರು ಹೋಗಯ್ಯ ೯

ತುರಗವನೇರಿ ಕಲಿಯ ಕಡಿದು ಶಾಂತನ ಸಹೋ–
ದರಗೆ ರಾಜ್ಯವನಿತ್ತೆ ಕಾಣೇ । ಸಹೋ–
ದರಗೆ ರಾಜ್ಯವನಿತ್ತೆ ಕಾಣೇ ॥
ಪರಮ ಪುರುಷನಹುದೋ ರಾಹುತರಿರುವ
ಸ್ಥಳದಲ್ಲಿರು ಹೋಗಯ್ಯ । ನೀ
ರಾಹುತರಿರುವ ಸ್ಥಳದಲ್ಲಿರು ಹೋಗಯ್ಯ ೧೦

ಕನ್ಯಾಮಣಿಯೆ ಕೋಮಲೆಯೇ ಗುಣಪೂರ್ಣ ಮೋ–
ಹನ್ನ ವಿಠಲ ರಾಯ ಕಾಣೆ । ನಾ ಮೋ–
ಹನ್ನ ವಿಠಲ ರಾಯ ಕಾಣೆ ॥
ಎನ್ನ ಅಪರಾಧ ಕ್ಷಮಿಸಬೇಕು ಎನುತಲಿ
ಚೆನ್ನಾಗಿ ಪಾದಕ್ಕೆರಗಿದಳು ದೇವಿ ೧೧

## ೫೬

### ಉರುಟಣೆ ಪದ

ಜಯ ಜಯ ರಾಮ ಜಯ
ಜಯ ಜಯ ನಮ್ಮ ಜಾನಕೀ ರಮಣಗೇ ಪ

ಇಂದಿರಾದೇವಿ ರಮಣಿ ಶರಣ್ಯ
ಮಂದರ ಗಿರಿಧರ ಶರಣ್ಯ
ಕಂದನ ನುಡಿ ಕೇಳಿ ಕಂಬದಿಂದಲಿ ಬಂದ
ಸಿಂಧು ಶಯನ ಸಲಹುವಾದೆನ್ನ ೧

ಗುರು ವಿಜಯದಾಸರ ಚರಣಾ
ಸರಸಿರುಹವ ಮನದೊಳಾಗಿರಿಸಿ
ಹರಿ ಸರ್ವೋತ್ತಮ ಮಂಗಳ ಚರಿತೆಯ
ವಿರಚಿಸುವೆನು ಸುಜನರು ಕೇಳಿ ೨

ಮುತ್ತೈದೆರೆಲ್ಲಾ ಬೇಗಾದಿ ಬಂದು
ಅರ್ತಿಯಿಂದಲಿ ಶೃಂಗಾರವಾಗಿ
ಚಿತ್ತಜನಯ್ಯನ ಉರುಟಣೆ ಎನುತಾಲಿ
ಮತ್ತ ಗಮನೇರು ಬಂದರಾಗಾ ೩

ಸರಸ್ವತಿ ಭಾರತಿ ಮೊದಲಾದ
ಸರಸಿಜ ಮುಖಿಯರೆಲ್ಲಾರು ನೆರೆದು
ಸರಸ ಉರುಟಣೆಯ ಮೊಡಬೇಕೆನುತಾಲಿ
ಕರೆಸಿದರಾಗ ಮುತ್ತೈದೆರಾಗ ೪

ಹೇಮಮಯದ ಮಂಟಪದೊಳಗೆ
ಪ್ರೇಮದಿಂದಲಿ ಹಾಸಿಕೆ ಹಾಕಿ

ಸೋಮವದನನ ಗುಣವ ಕೊಂಡಾಡುತ
ಕಾಮಿನಿಯರು ಕರೆದಾರು ಹಸೆಗೇ ೫

ಕೌಸಲ್ಯಾದೇವಿ ತನಯಾನೆ ಕೇಳು
ಹರ್ಷದಾಯಕ ರಕ್ಷಕನೇಳು
ಹಂಸವಾಹನನಯ್ಯನೆ ಹಸೆಗೆ ಏಳೇಳೆಂದು
ಹಂಸಗಮನೆಯರು ಕರೆದರು ಹಸೆಗೆ ೬

ನಿಗಮವ ತಂದಾ ಮಚ್ಛ್ಯಾನೇಳು
ನಗವ ಬೆನ್ನಿಲಿ ಪೊತ್ತ ಕೂರ್ಮನೇಳು
ಜಗವನುದ್ಧರಿಸಿದ ವರಹ ಮೂರುತಿ ಏಳು
ಮೃಗ ನರ ರೂಪ ಹರಿಗೇಳೆಂದಾರು ೭

ಸುರನದಿಯ ಪಡೆದ ವಾಮನನೇಳು
ಪರಶುರಾಮ ಮೂರುತಿ ಏಳು
ಶರಧಿಯ ದಾಟಿ ಸೀತೆಯ ತಂದ
ಶಿರಿ ರಾಮಕೃಷ್ಣ ಹಸೆಗೇಳೆಂದರು ೮

ವ್ರತವನಳಿದ ಬೌದ್ಧನೇಳು
ಅತಿಬಲ ರಾಹುತನೇಳು
ಪೃಥಿವಿಗೊಡೆಯ ರಾಮನೇಳೆಂದು
ಅತಿ ಚಮತ್ಕಾರದಿ ಕರೆದರಾಗ ೯

ಇಂತು ಬಗೆಯಾಲಿ ತುತಿಸಿ ಕರೆಯೇ
ಕಂತುಜನಕನು ಹರುಷದಾಲೆದ್ದು
ಕಾಂತೆ ಕೈ ಪಿಡಿದು ನಡೆ ತರಲಾಗಲು
ನಿಂತಾರು ನಾರಿಯರೆಲ್ಲರಾಗ ೧೦

ಎತ್ತಿಕೊಂಬುವದು ರಾಘವ ನಿಮ್ಮ
ಪತ್ನಿಯ ನಡೆಸಲಾಗದು ಕೇಳಿ

ನೀ ಪೃಥ್ವೀಶನಾದರೆ ನಮಗೇನೆನುತಾಲಿ
ಸುತ್ತು ಕಟ್ಟಿದರು ವಾಮಾಕ್ಷಿಯರು ೧೧

ಮಂಗಳಾಂಗಿಯನು ಎತ್ತಿಕೊಂಡು ರಾಮ
ಹಿಂಗಾದೆ ದ್ವಾರದಲ್ಲಿಗೆ ಬರಲು
ಮಂಗಳದೇವಿಯ ಹೆಸರು ಹೇಳೆನುತಾಲಿ
ಅಂಗನೆಯರು ಅಡ್ಡಗಟ್ಟಿದರಾಗಾ ೧೨

ನಾಳೆ ಹೇಳುವೆನು ಇವಳ ಹೆಸರು
ತಾಳಲಾರೆನು ಭಾರವು ಎನಲು
ಶ್ರೀ ಲಕ್ಷ್ಮೀದೇವಿಯ ಹೆಸರು ಹೇಳಿದೆ ಬಿಡೆವೆಂದು
ಬಾಲೆಯರೆಲ್ಲಾರು ಇಟ್ಟರು ಕದವಾ ೧೩

ಸತತ ಶ್ರೀರಾಮನು ನಸುನಗುತಾ
ಸೀತೆಯೆನುತಾ ಹೇಳಿದನು ರಾಮಾ
ಸೀತೆ ಪುತ್ಥಳಿ ಗೊಂಬೆ ಹೆಸರು ಹೇಳೆನೆ ರಘು–
ನಾಥಾನು ಎಂದಾಳು ಜಾನಕೀ ೧೪

ಅಂಗಜನಯ್ಯಾ ಸತಿಯು ಸೀತೆಯ ಸಹಿತ
ರಂಗು ಮಾಣಿಕದ ಹಾಸಿಕೆಯ ಮೇಲೆ
ಶೃಂಗಾರದಿಂದಾಲಿ ಬಂದು ಕುಳ್ಳಿರಲಾಗ
ಸುರರೆಲ್ಲಾ ಹಿಗ್ಗಿ ಕರೆದರು ಪೂ ಮಳೆಯಾ ೧೫

ಸಾಸಿರ ನಾಮದ ಒಡೆಯ ಬಂದಾ
ಶೇಷಶಯನಾ ಮೂರುತಿ ಬಂದಾ
ಭಾಸುರಾಂಗನೆ ಸೀತೆ ಆಳಿದಾ ರವಿಕುಲಾ–
ಧೀಶ ಬಂದಾನು ಎಂದಾರು ಕೇಳೆ ೧೬

ವಾನರಾಧೀಶನೊಡೆಯಾ ಬಂದಾ
ದಾನವಾಂತಕ ರಾಘವ ಬಂದಾ ಶ್ರೀ–

ಜಾನಕೀದೇವಿ ಪ್ರಾಣದೊಲ್ಲಭ ಜಗ-
ತ್ರಾಣ ಬಂದಾನು ಎಂದಾರು ಕೇಳೆ ೧೭

ಸತ್ಯ ಸಂಕಲ್ಪ ಶ್ರೀ ಹರಿಯು ಬಂದಾ
ಭೃತ್ಯ ಪಾಲಕ ದೊರೆಯು ಬಂದಾ
ಮಿತ್ರೆ ಜಾನಕಿದೇವಿ ಪ್ರಾಣದೊಲ್ಲಭ ಸ-
ರ್ವೋತ್ತಮ ಬಂದನೆಂದಾರು ಕೇಳೇ ೧೮

ಸುಗ್ರೀವನ ಪರಿಪಾಲಕ ಬಂದಾ ಕ-
ರಿಗ್ರಾಹ ಸಂಹಾರಿಕ ಬಂದಾ
ವ್ಯಾಘ್ರ ಚರ್ಮಾಂಬರ ಸಖ ಸುಂದರ
ವಿಗ್ರಹ ಬಂದಾ ಎಂದಾರು ಕೇಳೇ ೧೯

ಇಂದ್ರನ್ನ ಪರಿಪಾಲಕ ಬಂದಾ
ಚಂದ್ರನ್ನ ಪ್ರಭೆಯಾ ಸೋಲಿಪ ಬಂದಾ
ಇಂದುವದನೆ ಸೀತೆ ಪ್ರಾಣದೊಲ್ಲಭ ರಾಮ-
ಚಂದ್ರ ಬಂದನೆಂದಾರು ಕೇಳೇ ೨೦

ಚಂದನ ಗಂಧೆಯರು ಎಲ್ಲಾರು ಕೂಡಿ
ಗಂಧ ಕುಂಕುಮ ಅರಿಷಿಣ ಕಲಿಸಿ
ಇಂದುವದನೆ ಸೀತೆಯ ಕೈ ಒಳಗಿಟ್ಟು ಶ್ರೀರಾಮ-
ಚಂದ್ರಗೆ ಹಚ್ಚಿಸಿರೆಂದರಾಗ ೨೧

ವಾರಿಜೋದ್ಭವ ಮೊದಲಾದವರು
ತಾರತಮ್ಯದಿಂದಾಲಿ ಕುಳಿತು
ವಾರಿಜಾಮುಖಿ ಸೀತೆ ನುಡಿಯೆಂದೆನುತಾಲಿ
ಸಾರಿದರಾಗ ಸಂದಣಿಯರೆಲ್ಲಾ ೨೨

ನಿಲ್ಲಾದೆ ನಿಮ್ಮ ಬಾಯಿಗಳಾಲಿನ್ನು
ಗಲಬಲೆ ಮಾಡಲಾಗದು ಜನರು

ಚೆಲ್ವಾ ಸೀತೆಯಾ ಗಿರಿ ವಾಕು ಕೇಳಬೇಕೆಂದು
ಜಲಜ ಸಂಭವನು ನುಡಿದಾನು ನಗುತಾ ೨೩

ಕಂಜವದನೆ ಜಾನಕೀದೇವಿ
ಅಂಜಲಾಗ ನಿಮ್ಮ ಪುರುಷಾರಿಗೆ
ಕುಂಜರ ವರದಾ ದಾಕ್ಷಿಣ್ಯ ಬ್ಯಾಡೆಂದು
ಅಂಜಾದೆ ನುಡಿದಾರು ನಸುನಗುತಾ ೨೪

ದೋಷ ವರ್ಜಿತನೇ ಹರಿ ನಿಮ್ಮ
ದೂಷಣೆ ಮಾಡಿದಳೆನ ಬ್ಯಾಡಿ
ಮೋಸದಿಂದಲಿ ಬಲು ದೈತ್ಯರ ಕೊಂದ ಜಗ–
ದೀಶ ನಿಮ್ಮ ಮುಖವಾ ತೋರೆಂದಾಳು ೨೫

ದೇವಿ ಹಸ್ತದೊಳು ಅರಿಶಿನವ ಪಿಡಿದು
ಭಾವಜನಯ್ಯನ ನುಡಿದಾರಾಗ
ದೇವರ ದೇವೋತ್ತಮ ಶಿಖಾಮಣಿ
ದೇವಾ ನಿಮ್ಮಯ ಮುಖವಾ ತೋರೆಂದಾಳು ೨೬

ಭಸ್ಮಾಸುರನ ಕೊಂದಾ ಬಹು ಶೂರನಾರಿ
ಕಂಸನಳಿದಾ ಧೀರ ಅಸುರ ಹಿರಣ್ಯಕನ
ಅಸುವ ಹೀರಿದ ದೊಡ್ಡ
ಅಸುರಾಂತಕ ಮುಖವಾ ತೋರೆಂದಾಳು ೨೭

ವಾಲಿಯ ಸಿಟ್ಟಿನಿಂದಾಲಿ ಕೊಂದು
ಕಾಲ ಯಮನಾನಸುವ ಯುಕ್ತಿಯಿಂದಾ
ಭಳಿರೆ ಮಧುಕೈಟಭರ ಕೊಂದಾ
ಕಾಲಾಂತಕ ಮುಖವ ತೋರೆಂದಾಳು ೨೮

ಶ್ರೀನಾಥ ದ್ವಾರಕಾಪುರ ಮಾಡಿ
ಆ ನಂದಿ ಗೋಮಂತಾ ಗಿರಿಗೊಲಿದೆ

ವಾನರಾಧೀಶನಾ ಬಲು ಕೊಂಡಾಡುತ್ತ
ದಾನವಾಂತಕಾ ಮುಖವಾ ತೋರೆಂದಾಳು ೨೯

ಅರಿಶಿನವಾನು ಹಚ್ಚಿದಳು ಸೀತೆ
ಅರಸನ ಫಣೆಗೆ ಕುಂಕುಮವಾ ಹಚ್ಚಿ
ಸರಸದಿ ವದನಕ್ಕೆ ಗಂಧವಾ ಹಚ್ಚಲು
ಸುರರೆಲ್ಲಾ ನಕ್ಕಾರು ಕೈ ಹೊಡೆದು ೩೦

ಸರಸ್ವತಿ ಪತಿ ಮೊದಲಾಗಿ ಚಪ್ಪಾಳೆನಿಟ್ಟು
ಹರಸಿದರಾಗ ಜಾನಕಿದೇವಿ
ಶಿರಿಯು ಗೆದ್ದಳು ಅಯೋಧ್ಯದ
ಅರಸು ಸೋತನೆಂದು ನಗುತೆ ೩೧

ಬಾಹುಗಳಿಗೆ ಗಂಧವಾ ಹಚ್ಚಿಸಿ
ಮ್ಯಾಲೆ ಪರಿಮಳಾ ಪೂಸಿದಳು
ಶ್ರೀ ಹರಿಯ ಚರಣಾವ ಪಾಲಿಸಬೇಕೆನುತಲಿ
ಸರಸಾದಿಂದಾಲಿ ನುಡಿದಾಳು ಜಾನಕೀ ೩೨

ಪಾಷಾಣ ಪೆಣ್ಣಾ ಮಾಡಿದಾ ಚರಣ
ಶೇಷನಾ ಮ್ಯಾಲೆ ಮಲಗಿದ ಚರಣ
ಭಾಸುರಾಂಗಿ ನಿನ್ನ ಲೀಲೆಯಾ ತೋರಿದಾ
ಶೇಷಶಯನ ಚರಣಾ ಪಾಲಿಸೆಂದಾಳು ೩೩

ಆಕಾಶಗಂಗೆಯ ಪಡೆದಾ ಚರಣಾ
ಶಕಟನ ಮುರಿದೊಟ್ಟಿದ ಚರಣಾ
ಭಕುತ ಜನರ ಸೇವೆ ಕೊಂಬ ಚರಣ
ರಕ್ಕಸ ದಲ್ಲಣ ಚರಣಾವ ಪಾಲಿಸೆಂದಾಳು ೩೪

ಅಂಕುಶದೊಜ್ರ ರೇಖೆಯ ಚರಣಾ
ಕುಂಕುಮಾಂಕಿತ ರಾಶಿಯ ಚರಣಾ

ಬಿಂಕದಿಂದ ಕುರುಪತಿಯ ಕೆಡಹಿದ ಬಿರು–
ದಾಂಕ ನಿನ್ನಯ ಚರಣಾ ಪಾಲಿಸೆಂದಾಳು ೩೬

ನಸುನಗುತ ಹರಿ ಚರಣ ವೀಕ್ಷಿಸಿ
ಶಶಿಮುಖಿ ಸೀತೆ ಆನಂದದಿಂದಾ
ಮಿಸಣಿಯಂತೊಪ್ಪುವ ಅರಿಶಿನೆಣ್ಣೆಯಾ
ಎಸೆವ ಪಾದಕ್ಕೆ ಹಚ್ಚಿದಳಾಗ ೩೭

ಕೊರಳಿಗೆ ಪರಿಮಳ ಗಂಧವು ಹಚ್ಚಿ
ಪರಿಪರಿ ಪೂಮಾಲೆ ಕೊರಳಿಗೆ ಹಾಕಿ
ನೀಲವರ್ಣನ ಪಾದ ಪದ್ಮಕ್ಕೆ ಎರಗಿ
ಪಾಲಿಸಬೇಕೆಂದಾಳು ಅಂಗನೆ ೩೮

ಕರಗಳ ಪಿಡಿದೆತ್ತಿದನು ರಾಮಾ
ಹರಸಿದ ಮುತ್ತೈದಾಗೆಂದು
ಪರಮ ಪತಿವ್ರತೆಯೆನಿಸು ಎನುತಾಲಿ
ಹರಿ ಹರಸೀದಾನು ಹರುಷದಲ್ಲಾಗ ೩೯

ಅಂಡಜವಾಹ ಭಗವಂತನು
ಹೆಂಡತಿಯ ಮುಖವ ನೋಡೆನುತಲಿ
ಗಂಡು ಮಕ್ಕಳ ಘನವಾಗಿ ಪಡೆಯೆಂದು
ಪುಂಡರೀಕಾಕ್ಷ ಹರಸಿದನಾಗ ೪೦

ಮಂದಗಮನಿಯ ಕುಳ್ಳಿರಿಸಿ
ಇಂದಿರೇಶ ಮುಂಗುರಳಾ ತಿದ್ದಿ
ಎಂದೆಂದಿಗೆ ಅಗಲದಿರೆಂದು ರಾಮ–
ಚಂದ್ರಾನು ಹರಸಿದನಾಗ ೪೧

ಭೂಲೋಕದೊಡೆಯ ರಾಘವರಾಯನ
ಶ್ರೀಲತಾಂಗಿಯ ಕುಳ್ಳಿರಿಸಿದನು

ಬಾಲಕಿಯರೆಲ್ಲಾರು ಗಲಿಬಿಲಿ ಮಾಡಾದಿರೆಂದು
ಫಾಲಾಲೋಚಾನು ನುಡಿದನು ನಗುತ ೪೨

ಕಂತುಜನಕ ರಾಘವಾ ನಿಮ್ಮಾ
ಪಂಥ ಸಲ್ಲಾದು ಜಾನಕಿಯೊಡನೆ
ಯಂತ್ರವಾಹಕ ಶ್ರೀರಾಮ ಏಳೇಳೆಂದು
ಕಾಂತೆಯರೆಲ್ಲರು ನುಡಿದಾರು ನಗುತಾ ೪೩

ಭಾಗೀರಥಿ ಪಾರ್ವತಿದೇವಿ
ಬೇಗದಿ ಅರಿಷಿನ ಕೈಲಿ ಕಲಿಸಿ
ಸಾಗರ ಶಯ್ಯನ ಕೈಯೊಳಗಿಟ್ಟು
ಬಾಗಿ ಸೀತೆಯ ಮುಖಕೆ ಹಚ್ಚೆಂದಾರು ೪೪

ನಿಂದಲ್ಲಿ ನಿಲ್ಲಾದೆ ಚಂಚಳೆ ಲಕ್ಷ್ಮೀ
ಬಂಧು ಬಳಗವನಗಲಿಸುವ ತರಳೆ
ತಂದೆ ಮಕ್ಕಳೊಳಗೆ ಕದನವ ನಿಡುವಂಥ
ಮಂದಹಾಸೆ ಮುಖವ ತೋರೆಂದಾನು ರಾಮಾ ೪೫

ಅಣ್ಣನ ವಂಚಿಸಿ ಬೇಡಿದವಳೇ
ಮನ್ನೆ ಮನ್ನೆಯರಾ ಕಳಿಸಿದವಳೇ
ಚೆನ್ನಾಗಿ ಮನೆಯೋಳಿದ್ದು ಪೋಗುತ
ಚೆನ್ನಾಯಿತೆ ಮುಖವ ತೋರೆಂದಾನು ೪೬

ಭಾಷೆಯನು ಕೊಟ್ಟು ತಪ್ಪಿಸುವಳೆ
ಕಾಸುವೀಸಾಕೆ ವತ್ತಿ ಬೀಳುವಳೆ
ಹೇಸಿಕಿಲ್ಲದೆ ಕುಲಹೀನನ ಮನೆಯೊಳು
ವಾಸವಾಗಿರುವಾ ಮುಖವ ತೋರೆಂದಾನು ೪೭

ರಾಮಚಂದ್ರಾನು ಅರಿಶಿನ ಗಂಧವ
ಭೂಮಿಜಳಿಗೆ ಹಚ್ಚಿದನಾಗಾ

ಸಾಮಜಗಮನೆಯ ಹಣೆಗೆ ಕುಂಕುಮ ಹಚ್ಚಿ
ಪ್ರೇಮದಿ ಪರಿಮಳ ಪೂಸಿದಾನು ೪೮

ಕುಸುಮ ದಂಡೆಯ ಮಾಡಿದರು
ಬಾಸಿಂಗವನು ಕಟ್ಟಿದಾರು
ಭೂಸುರರೆಲ್ಲರು ಮಂತ್ರಾಕ್ಷತೆ ತಳಿದು ನಿ-
ರ್ದೋಷನಾಗೆಂದು ಹರಸಿದರು ೪೯

ಇಂದುಮುಖಿಯರೆಲ್ಲಾರು ಕೂಡಿ
ನಂದದಿ ಜಾನಕಿಗೆ ವೀಳ್ಯವನಿತ್ತು
ಅಂದಮಾಣಿಕದ ಅಕ್ಷತೆಗಳ ತಳಿದು
ಮಂದರೋದ್ಧರನ ಹರಿಸಿದರು ೫೦

ದೇವಿಯನ್ನೆತ್ತಿಕೊಂಡು ರಾಮ
ದೇವರ ಮನೆಗೆ ಬಾಹೋದು ಕಂಡು
ಭಾವುಕರೆಲ್ಲಾ ಹೆಸರು ಪೇಳೆಂದೆನುತ
ದೇವಿ ರಘುನಾಥನೆಂದು ಪೇಳಿದಳಾಗ ೫೧

ಇಂದುಮುಖಿಯರೆಲ್ಲಾರು ಕೂಡಿ
ಇಂದಿರೇಶಾನೆ ಹೆಸರು ಪೇಳೆನಲು
ಎಂದಾ ಮೇಲೆ ಜಾನಕಿಯೆಂತೆಂದು
ಮಂದರಧರನು ನುಡಿದನಾಗ ೫೨

ಸತಿಪತಿಯರಿಬ್ಬರು ಕೂಡಿ
ಅತಿಶಯದಲಿ ನಮಸ್ಕರಿಸಿದಾರು
ಕ್ಷಿತಿಯ ಸುರರಿಗೆ ಲೀಲೆಯ ತೋರಿದ ದೇವಾ
ಪತಿತ ಪಾವನ್ನ ಎನ್ನ ಸಲಹು ಎಂದಾನು ೫೩

ಈ ಕಥೆಯನು ಆದರದಿಂದಾ ಬರೆದು ಹೇ-
ಳಿ ಕೇಳುವ ಜನರಾ

ಶ್ರೀಕಾಂತನೊಲಿದು ಕರುಣಿಸುವ ತಾ ಸಿದ್ಧ
ನೇಮದಿಂದಾ ಪಾಡಿರಿ ಜನರು ೫೪

ಕುರುಡಾನು ಈ ಕಥೆಯಾನು ಕೇಳಿದರೆ
ಕರುಣದಿಂದಾಲಿ ಕಂಗಳ ಬರಿಸುವ
ಶರಣವತ್ಸಲ ತನ್ನ ಶರಣರೊಳಿಟ್ಟು
ಪರಿಪಾಲಿಸುವನು ಶತಸಿದ್ಧ ೫೫

ದಾರಿದ್ರನಾದವನು ಕೇಳಿದರೆ
ಮೇರೆಯಿಲ್ಲದಾ ಸಿರಿ ಒದಗುವದು
ದಾರ ಇಲ್ಲದ ಬ್ರಹ್ಮಚಾರಿ ತಾ ಕೇಳಲು
ನಾರಿಯ ಸಹಿತೆ ವಾಸಿಸುವನು ೫೬

ಉದ್ಯೋಗ ಇಲ್ಲದವನು ಕೇಳಿದರೆ
ಸದ್ಯ ಐಶ್ವರ್ಯ ಒದಗುವದು ಸಿದ್ಧ
ಮುದ್ದು ಸುತರಿಲ್ಲದ ಸ್ತ್ರೀಯು ಕೇಳಲು
ಬುದ್ಧಿವಂತ ಸುತರಾಗುವರು ಸಿದ್ಧ ೫೭

ವಿಭವ ಸಂವತ್ಸರ ಫಾಲ್ಗುಣ ಶುದ್ಧದಿ
ದ್ವಿಜನಾಭಾ ದಿನದಾ ಗುರುವಾರಾ
ಶುಭವಾರಾ ಈ ಕಥೆ ಕೇಳಿದ ಜನರಿಗೆ
ಅಭಯ ಕೊಡುವ ಆನಂದ ಮೂರ್ತಿ ೫೮

ತಾವರೆ ಕಮಲ ಧರಿಸಿಪ್ಪ
ಪಾವನ ಮೂರುತಿ ಹೃದಯಾದಲ್ಲಿ
ದೇವಿ ಸಹಿತವಾಗಿ ಕಾವನು ಕರುಣಾದಿ
ನೀವೆಲ್ಲಾರು ತಿಳಿರಿ ಜನರು ೫೯

ಜಯಜಯ ಲೋಕಪಾಲಕ ದೇವಾ
ಜಯ ಜಯ ಮೋಹನ್ನ ವಿಠ್ಠಲರಾಯಾ
ಜಯ ಜಯ ಪ್ರದ ಜಾಹ್ನವಿ ಜನಕನು
ಜಯ ಜಯವೆಂದು ಮಂಗಳವ ಪಾಡೇ ೬೦

೫೭

## ಧ್ರುವತಾಳ

ಹರಿಯ ಸರ್ವೋತ್ತಮ ಸಿರಿಯು ಆತನ ರಾಣಿ
ಸರಸಿಜೋದ್ಭವ ಮಾರುತ ಪುತ್ರರಯ್ಯಾ
ಸರಸ್ವತಿ ಭಾರತಿ ಗರುಡ ಶೇಷ ರುದ್ರ
ಹರಿಯ ರಾಣಿಯರು ನಾಲ್ಕೆರಡು ಮಂದಿ ಸೌ–
ಪರಣಿ ವಾರುಣಿ ಗಿರಿಜಾ ಸುರಪತಿ ಕಾಮಾದ್ಯರ
ತರತಮ್ಯ ಜ್ಞಾನದಿಂದ ತಿಳಿಯಬೇಕು
ಸುರ ನದಿ ಪಿತ ನಮ್ಮ ಮೋಹನ್ನ ವಿಠ್ಠಲ
ಶರಣು ನೆನಿಸಿದವಗೆ ಇನ್ನು ಸರಿಯು ಕಾಣೆ ೧

## ಮಟ್ಟ ತಾಳ

ಜೀವ ಜೀವಕೆ ಭೇದ ಜಡ ಜಡಕೆ ಭೇದ
ಜೀವ ಜಡಕೆ ಭೇದ ಹರಿಗೆ ಜಡಕೆ ಭೇದ
ಜೀವ ಈಶಗೆ ಭೇದ ದೇವ ನಾರಾಯಣನ
ಭಾವ ಕ್ರಿಯಗಳಿಗೆ ಅಭೇದವನ್ನು ತಿಳಿದು
ಶ್ರೀವಲ್ಲಭ ನಮ್ಮ ಮೋಹನ ವಿಠ್ಠಲನ್ನ
ಪಾವನ ಚರಣ ನಾಮ ತೀವ್ರದಲಿ ಭಜಿಸು ೨

## ತ್ರಿವಿಡಿತಾಳ

ಹರಿಯು ತನಗೆ ಬೇಕಾದವನ ಮನಸು
ಎರಗಲೀಸನು ಅನ್ಯ ಸತಿಯರಲ್ಲಿ

ಎರಗಿಸಿದರೆ ಬೇಗ ತಿರಿಗಿಸುವನಯ್ಯ
ತಿರುಗಿಸದಿದ್ದರೆ ಬೆರೆಯಲೀಸಾ
ಬೆರೆದರೆ ಬೆರೆಯಲಿ ರತಿಯ ಪುಟ್ಟಲೀಸಾ
ರತಿ ಪುಟ್ಟಿದರೆ ಏನು ಕಾಕು ಮಾಡಲೀಸನಯ್ಯಾ
ಕರುಣಾಸಾಗರ ನಮ್ಮ ಮೋಹನ ವಿಠ್ಠಲನ ಪಾವನ
ಚರಣವನು ತೀವ್ರದಲಿ ಭಜಿಸೊ ೩

**ಅಟ್ಟತಾಳ**

ಮಾರುತ ಮತವ ಪೊಂದಿ ಹರಿಗೆ ಪರನೆಂದು
ಗುರು ಹಿರಿಯರ ಚರಣಕ್ಕೆರಗು ಆವಾಗಲು
ಹರಿಕಥಾಮೃತವಕರ್ಣದಿಂದಲಿ ಕೇಳು
ಹರಿ ನಿರ್ಮಾಲ್ಯವ ಶಿರದಲ್ಲಿ ಧರಿಸುತಿರು
ಹರಿ ನೈವೇದ್ಯವ ಹರುಷದಲಿ ಭುಂಜಿಸು
ಹರಿದಾಸರ ಕೂಡ ತಿರುಗು ಊಳಿಗನಂತೆ
ಹರಿ ಅವತಾರ ಸಿರಿ ಮೋಹನ ವಿಠ್ಠಲ
ಹರಿಯೆ ತ್ರಿಭುವನ ಧೊರೆ ಎಂದು ತಿಳಿಯೊ ೪

**ಆದಿತಾಳ**

ತನಗೆ ಬೇಕಾದವನು ಉನ್ನತ ಪಾಪವ ಮಾಡೆ
ದಾನವರಿಗೆ ಕೊಡಿಸಿ ಪುಣ್ಯ ಭಕ್ತರಿಗೀವ
ಘನ್ನ ಮಹಿಮ ಲಕುಮಿಯನ್ನು ಬಿಟ್ಟರೇನು ಪ್ರ–
ಪನ್ನರ ಬಿಡೆನೆಂಬ ಚಿನ್ಮಯ ಮೂರುತಿ
ಪನ್ನಗಾದ್ರಿ ನಿಲಯ ಮೋಹನ ವಿಠ್ಠಲನ್ನ
ಸನ್ನುತಿಸುವನಿಗೆ ಇನ್ನು ಸರಿಯು ಕಾಣೆ ೫

**ಜತೆ***

ತಾರತಮ್ಯ ಪಂಚಭೇದ ತಿಳಿಯದವಗೆ
ಮಾರುತಿ ಪ್ರೀಯಾ ಮೋಹನ ವಿಠ್ಠಲವೊಲಿಯಾ ೬

೫೮

# ಸಾಧನ ಸುಳಾದಿ ವಿಚಾರ

## ಧ್ರುವತಾಳ

ಹರಿದಾಸನು ನಾನಲ್ಲ ಹರಿಭಕುತಿ ಎನಗಿಲ್ಲ
ಧರೆಯೊಳು ಒಂದು ವೇಷವ ಧರಿಸಿ ತಿರುಗುವೆನು ನಾನು
ತರುಣಿ ಮಕ್ಕಳು ಸಹೋ<del>ದ</del>ರ ಮೊದಲಾದವರ
ಪೊರೆವೆನೆನುತ ಡಂಭ ವಿರಚಿಸಿ ಶರಣನೆಂತೆಂದು
ಕರೆಸಿಕೊಂಬೆನೊ ಬಹಿರದಲ್ಲಿ ಅನ್ಯರಿಂದಲೆ
ಸಿರಿಪತಿ ನಿನ್ನ ಪಾದ ಸ್ಮರಿಸದಲೆ
ಪರಮ ದಯಾಳು ಮೋಹನ್ನ ವಿಠ್ಠಲ ರೇಯಾ
ಕರಣ ಶುದ್ಧನಾಗದೆ ತಿರುಗಿದೆ ಪೊಟ್ಟೆಗಾಗಿ ೧

## ಮಟ್ಟತಾಳ

ದೇಶ ದೇಶಕೆ ಧನದ ಆಶೆಗಾಗಿ ಪೋಗಿ
ಕಾಶಿಗ್ಹೋಗುವೆನೆಂದು ಕಾಸು ಹಣವ ತಂದು
ಈ ಸಂಸಾರಕ್ಕೆ ನಾ ಸಮರ್ಪಿಸಿ
ತೋಷ ಪಡುವೆ ದುರಿತ ರಾಸಿ ಯಂದರಿಯದಲೆ
ಭೂ ಸುರರು ಎನ್ನ ವಾಸದಲ್ಲಿಗೆ ಬರಲು
ಗ್ರಾಸವೀಯದೆ ಅಪಹಾಸ ಮಾಡುವೇನು
ದೋಷ ವರ್ಜಿತ ನಮ್ಮ ಮೋಹನ ವಿಠ್ಠಲ
ಘಾಸಿಯಾದೆನೊ ಯಮ ಪಾಶಕ್ಕೆ ಗುರಿಯಾಗಿ ೨

---

*ಧಾರವಾಡ ಸಂಗ್ರಹದಲ್ಲಿಯ ಜತೆ ಪನ್ನಗಾದ್ರಿ ನಿಲಯ ಮೋಹನವಿಠ್ಠಲನ ಸನ್ನುತಿಸುವನಿಗೆ ಇನ್ನು ಸರಿಯು ಕಾಣೆ ಎಂದಿದೆ.

## ತ್ರಿವಿಡಿತಾಳ

ವಿತ್ತವಿದ್ದವನ ಮನಿಯೊಳು ಪೋಗಿ ಕುಳಿತು ಬಲು
ಉತ್ತಮನೆಂದವನ ಸ್ತೋತ್ರವ ಮಾಡಿ
ಹತ್ತೆಂಟು ಪುಸಿ ವಾರ್ತೆ ಪೇಳೆ ಅವನು ಈ
ಹೊತ್ತು ಬನ್ನಿರಿ ಎನ್ನೆ ಹರುಷದಿಂದ
ಹತ್ತೈದು ದೇವತಾರ್ಚನೆಯ ಸಾಮಗ್ರೀಯ
ತತ್ಥಳಿಸುವಂತೆ ವಿರಚಿಸುವೆ
ಸುತ್ತ ಧೂಪ ದೀಪವತ್ತಿ ನೈವೇದ್ಯವ
ಹತ್ತಿಲಿರಿಸಿಕೊಂಡು ಮುಸುಕುನಿಟ್ಟು
ಚಿತ್ತ ಶುದ್ಧಿಯಿಲ್ಲದಲೆ ಬಹಿರದಲ್ಲಿ ಕರ–
ವೆತ್ತಿ ಪಿಟಿ ಪಿಟಿ ಎಂದು ತುತಿಸುವೆನೊ
ಮತ್ತೇನು ಮಂತ್ರ ತಂತ್ರವು ಬಾರದೆನ್ನೆ
ಹತ್ತೀಲಿ ಸೇರಲೀಸನೋ ಸ್ವೋತ್ತುಮರ
ಎತ್ತ ನೋಡಲು ಎನ್ನ ಹತ್ತಿಲಿ ಹೊದ್ದಿದವರು
ಮುತ್ತಿಕೊಂಡು ಕಾಗೆ ಬಳಗದಂತೆ
ಚಿತ್ತಜನಯ್ಯಾ ಮೋಹನ ವಿಠ್ಠಲ ನಿನ್ನ
ಭೃತ್ಯನೆನಿಸಿ ಸ್ವಸ್ಥ ಚಿತ್ತದಿಂದಿರದ್ಹೋದೆ ೩

## ಅಟ್ಟತಾಳ

ಕಾಮ ಕ್ರೋಧ ಲೋಭ ಮದ ಮತ್ಸರಂಗಳು
ರೋಮ ರೋಮ ಕೂಪದೊಳು ತುಂಬಿಕೊಂಡು
ಭೂಮಿ ಸುರ ದೇಹ ಬಂದೀಹದೆಂತೆಂಬ
ಈ ಮಹಾ ಗರ್ವದಿಂದಾಡುವೆ ಸುಜನರ
ಶ್ರೀ ಮನೋಹರ ನಿನ್ನ ತಾಮರಸಾಂಘ್ರಿ ನಿ–
ಷ್ಕಾಮದಿಂದಲಿ ಭಜಿಸಿ ಮರೆ ಪೋಗಲಿಲ್ಲವೊ
ಭೂಮಿ ಭಾರಕನಾಗಿ ತನುವ ಪೊರೆದೆ ನಿನ್ನ
ನಾಮಾಮೃತವನು ಪ್ರೇಮದಿ ಸವಿಯದೆ

ಸಾಮಜವರದ ಮೋಹನ್ನ ವಿಠ್ಠಲ ಅ-
ನಾಮಧೇಯನಾದೆ ಪಾಮರರೊಡಗೂಡಿ ೪

## ಆದಿತಾಳ

ಅನ್ಯರ ಪದಾರ್ಥವ ತಂದು ನಿನ್ನ ಮುಂದೆ ಸಮರ್ಪಿಸಲು
ಎನಗೇನು ಬರುವದೊ ಬಲುಪುಣ್ಯ ಅದರಿಂದ
ತನ್ನ ಕರದಿಂದಲಿ ಉದಕವನ್ನು ತಂದು ತುಲಸಿಯಿಂದ
ನಿನ್ನ ಪೂಜೆ ಮಾಡಲು ಪ್ರಸನ್ನನಾಗಿ ಪಾಲಿಸುವಿ
ಮುನ್ನೆ ಒಬ್ಬ ಕುಚೇಲಂಗೆ ಮನ್ನಿಸಿ ಪದವಿಯನಿತ್ತೆ
ನಿನ್ನ ಮಹಿಮೆ ಎಣಿಪರಾರೊ ಘನ್ನ ಮಹಿಮ ಮೋ-
ಹನ್ನ ವಿಠ್ಠಲರೇಯಾ ಅನ್ಯರಲಿ
ಪೋಗಿ ಪಾಪ ಕೊಂಡು ಬರುವೆನೊ ೫

## ಜತೆ*

ಕೆರೆ ನೀರು ಕೆರೆಗೆ ಚೆಲ್ಲಿ ವರಗಳು ಪಡೆದಂತೆ
ಕರುಣಾಳು ಮೋಹನ್ನ ವಿಠ್ಠಲನರ್ಚಿಸು ಮನವೆ ೬

## ೫೯

## ಧ್ರುವತಾಳ

ಶ್ರೋತರ ನಿನ್ನ ಕತೆ ಕೇಳಲೊಲ್ಲದು ಪರ-
ಮಾತುರದಿಂದ ದುರ್ವಾರ್ತಿ ಕೇಳುತಲಿದೆ
ನೇತುರ ನಿನ್ನ ಮೂರ್ತಿಯ ನೋಡದಲೆ ಗಾಡಿ-
ಕಾರ್ತಿಯರನು ಮನದಣಿಯ ನೋಡುತಲಿದೆ

---

*ಧಾರವಾಡದ ಪ್ರತಿಯಲ್ಲಿ ಜತೆ ಸಕಲಕ್ಕು ನಿನ್ನ ಬೇಡುವದೇನೊ ವಿಷಯದಾಸಕುತಿ ಬಿಡಿಸೊ ನಮ್ಮ ಮೋಹನವಿಠ್ಠಲ ಎಂದಿದೆ.

ಗಾತುರ ನಿನ್ನ ದಾಸರನಪ್ಪದೆ ಕಾ-
ಮಾತುರದಿಂದ ಕಂಡವರ ನಪ್ಪುತಲಿದೆ
ಪೂತ ಪದಾರ್ಥವ ಭುಂಜಿಸದಲೆ ಜಿಹ್ವೆ
ಪಾತಕರ ದುಷ್ಟನ್ನ ಕೊಳುತಲಿದೆ
ಶ್ರೀ ತುಳಸೀ ಆಘ್ರಾಣಿಸದಲೆ ಮೂಗು
ಬಾತಿ ಬಸಿದ ಕುಗಂಧಕೋಡುತಲಿದೆ
ಯಾತರಿಂದಲಿ ನಿನ್ನ ಮನಕೆ ಬಪ್ಪೆನೆ ದೇವ
ಕೋತಿ ಕೊರವಂಗೆ ಸಿಲ್ಕಿದಂತಾಯಿತು
ಜ್ಯೋತಿರ್ಮಯ ನಮ್ಮ ಮೋಹನ ವಿಠ್ಠಲ ಬೆ-
ನ್ನಾತು ಸಲಹದಿರೆ ಗತಿ ಯಾವುದು ಎನಗೆ ೧

## ಮಟ್ಟತಾಳ

ಸಂಸಾರವೆಂತೆಂಬೊ ಸಾಗರದೊಳು ಸಿಲ್ಕಿ
ಹಿಂಸೆಬಡುತ ತೇಲಿ ಮುಳುಗುವವನ ಕಂಡು
ಕಂಸಾರಿ ನೀ ಕೈಯ ಆನದಿದ್ದರೆ
ಇನ್ನು ಕಡೆಹಾಯುವದೆಂತೊ
ಹಂಸ ವಾಹನನಯ್ಯಾ ಮೋಹನ್ನ ವಿಠ್ಠಲ
ಸಂಶಯವೆಂತೆಂಬೊ ಸುಳಿಯೊಳು ಸಿಲ್ಕಿದನ
ಕಡೆ ಹಾಯುವದೆಂತೊ ಕಡೆ ಹಾಯುವದೆಂತೊ ೨

## ತ್ರಿವಿಡಿತಾಳ

ವಾಕು ನಿನ್ನನು ಕೊಂಡಾಡಲೊಲ್ಲದೆ ಕೆಟ್ಟ
ಕಾಕು ಪೋಕರ ಕೂಡ ಕೆಲದಾಡುತಲಿದೆ
ಬೇಕೆಂದು ನಿನ್ನ ಪೂಜೆಯ ಮಾಡದಲೆ ಪಾಣಿ
ಕುಕರ್ಮಕೊಳಗಾಗಿ ಭ್ರಷ್ಟ ಮಾಡುತಲಿದೆ
ಶ್ರೀಕಾಂತನ ಯಾತ್ರೆ ಮಾಡಲೊಲ್ಲದು ಪಾದ
ಬೇಕೆಂದು ಧನದಾಶೆಗೆ ತುಕ್ಕುತಲಿದೆ
ನೀ ಕೇಳೊ ಎರಡೈದೇಂದ್ರಿಯ ವ್ಯಾಪಾರ

ವಾಕಾಮಗೋಚರ ವಶವಾಗದು ಎನಗೆ
ಕಾಕೋದರ ಶಾಯಿ ಮೋಹನ್ನ ವಿಠ್ಠಲ
ನೀ ಕೈಯ ಹಿಡಿಯದಿರೆ ಗತಿ ಯಾವುದೆನಗೆ ೩

**ಅಟ್ಟತಾಳ**

ಪಂಚ ಜ್ಞಾನೇಂದ್ರಿಯ ಪಂಚ ಕರ್ಮೇಂದ್ರಿಯ
ಪಂಚಭೂತ ಪಂಚ ತನ್ಮಾತ್ರಗಳು
ಪ್ರಪಂಚಕ ಎಳದೊಯ್ದು ಘಾತಿಸುತಲಿವೆ
ಪಂಚ ಬಾಣನ್ನೈಯ್ಯ ಪಂಚ ಪ್ರಾಣ ಪ್ರೀಯ
ಪಂಚ ಪಂಡವ ಪಾಲ ಪಾಂಚಾಲಿ ವರದನೆ
ಪಂಚ ರೂಪಾತ್ಮಕ ಮೋಹನ ವಿಠ್ಠಲ
ಮಿಂಚಿನಂದದಿ ಪೊಳೆಯೋ ದೋಷವ ಕಳೆಯೋ ೪

**ಆದಿತಾಳ**

ವೇದಶಾಸ್ತ್ರವ ಸಾಧು ಪುರಾಣ
ಓದಿದವನಲ್ಲ ಕೇಳಿದವನಲ್ಲ
ಮಾಧವನ ಪೂಜೆ ಮಾಡಿದವನಲ್ಲ
ವಾದಿಸುವೆ ಕುತರ್ಕವನು ಮಾಡಿ
ಬೋಧ ಮೂರುತಿ ನಮ್ಮ ಮೋಹನ ವಿಠ್ಠಲ
ನೀ ದಯದಿ ಕೈ ಪಿಡಿಯದೆಂತೊ ೫

**ಜತೆ**

ತನುವೆ ತೀರಲಿ ನಿಜ್ಜಾ ಗುಣವೆ ತೀರಲಿ ಎನ್ನ
ಮನ ನಿನ್ನಂಘ್ರಿಯಲಿಡೊ ಮೋಹನ್ನ ವಿಠ್ಠಲ ॥

## ೬೦

ಉಡುಪಿಯ ಕೃಷ್ಣನೆ ಸಡಗರ ನಿನಗ್ಯಾಕೆ
ಬಡವನಾದವನ ಭವ ಮಡುವಿನೊಳಗೆ ನೂಕಿ
ಮಿಡುಕಿಸಿಕೊಂಬುವದು ಥರವೇನು ಹರಿಯೇ
ಒಡಲಿಗೋಸುಗ ನಿನ್ನ ಬೇಡ ಬಂದವನಲ್ಲ
ದೃಢ ಭಕ್ತಿ ಜ್ಞಾನಕೊಟ್ಟು ರಕ್ಷಿಸು ಹರಿಯೇ
ಕಡಲ ಶಯನ ನಮ್ಮ ಮೋಹನ್ನ ವಿಠಲ
ಅಡದು ದಧಿಯ ದಾಟಿಸಿ ಕಡೆಗಾಣಿಸು ಸುಲಭದಿಂದ.

## ೬೧

ಮಧ್ವರಾಯರ ಭಾಗ್ಯ ಎಂಥದೋ ವರ್ಣಿಸಲು
ಶುದ್ಧ ಸತ್ವಾತ್ಮಕವಾದ ಶರೀರವು
ಅದ್ವೈತ ಮತವೆಂಬೊ ಅರಣ್ಯವಾ ಪೊಕ್ಕು
ನಿಧ್ವಂಸ ಮಾಡಿ ವಾದಿಗಳನೆ ಗೆದ್ದು
ಪದ್ಧತಿ ತಪ್ಪದಂತೆ ಮತವನ್ನುದ್ಧರಿಸಿ
ವೃದ್ಧಿಗೈಸಿದರು ಸರ್ವ ಸಜ್ಜನರನ್ನು
ಸಿದ್ಧರಾವೆಂದು ಗೀರ್ವಾಣರೆಲ್ಲರು
ಎದ್ದೆದ್ದು ಕುಣಿದರು ಕರವ ಹೊಡೆದು
ವಿದ್ವಾಂಸ ನಾನೆಂದು ಅಹಂಕರಿಸದೆ ಇವರ ಪಾದ
ಪದ್ಮದಲ್ಲಿ ಅತಿ ದೃಢ ಭಕುತಿ ಮಾಡಿ
ಮಧ್ವರಾಯರೆ ನಮಗೆ ಉದ್ಧಾರಕರೆಂದು
ಪದ್ದೊಪದಿಗೆ ತಿಳಿದು ಕೊಂಡಾಡಿದರೆ
ಸಿದ್ಧಿದಾಯಕ ಸಿರಿ ಮೋಹನ್ನ ವಿಠ್ಠಲ
ಹೃದೃಶ್ಯದಲಿ ನಿಂತು ಸಲಹುವನು ವೇಗ.

## ೬೨

ಕೃಷ್ಣನ ನೋಡಿದೇ ಸರ್ವೋತ್ಕೃಷ್ಟನ ಪಾಡಿದೆ ಪ

ಕೃಷ್ಣನ ನೋಡಿ ಸಾಷ್ಟಾಂಗವ ಮಾಡಿದೆ
ಕಷ್ಟವ ಪರಿಹರಿಸೀಷ್ಟವನೀವನ ಅ.ಪ

ಶಿಷ್ಯನ ನೋಡಿದೆ – ವರ ನಿರ್ದುಷ್ಟನ ನೋಡಿದೆ
ಹೃಷ್ಟ ಪುಷ್ಟ ಸಂತುಷ್ಟನ ಶ್ರೇಷ್ಠನ
ಶಿಷ್ಟರ ಕಷ್ಟ ನಿವಿಷ್ಟನ – ದೇವನ ೧

ರಂಗನ ನೋಡಿದೆ – ದೇವೋತ್ತುಂಗನ ನೋಡಿದೆ
ಅಂಗಸಿಂಗ ಕಾಳಿಂಗ ಮರ್ದನನ
ಮಂಗಳಾಂಗ ಭವ ಭಂಗನ ನೋಡಿದೆ ೨

ದೇವನ ನೋಡಿದೆ ಮುಕುತಿಯೀವನ ನೋಡಿದೆ
ಗೋವ ಕಾವ ಭೂದೇವ ವಂದಿತ ಬಲ–
ದೇವಾನುಜ ಹಯಗ್ರೀವನ ನೋಡಿದೆ ೩

ಧೀರನ ನೋಡಿದೆ– ಜಗದ ಉದ್ಧಾರನ ನೋಡಿದೆ
ವೀರ ಶೂರ ಪರಾತ್ಪರ ತಾನ–
ಕ್ರೂರ ವರದ ಸಿರಿಧಾರನ ನೋಡಿದೆ ೪

ಶ್ಯಾಮನ ನೋಡಿದೆ – ಬಲು ನಿಸ್ಸೀಮನ ನೋಡಿದೆ
ವಾಮನ ರಾಮನ ಕಾಮನ ಅಯ್ಯನ
ಸಾಮನ ಸೀಮನ ಸೋಮನ ನೋಡಿದೆ ೫

ಬಾಲನ ನೋಡಿದೆ – ಲಕುಮೀ ವಿಲೋಲನ ನೋಡಿದೆ
ಶೀಲ ಶೂಲಧರ ಪಾಲ ಲೀಲ ಶಿಶು–
ಪಾಲ ಕಾಲ ವನಮಾಲನ ನೋಡಿದೆ ೬

ಜಾಣನ ನೋಡಿದೆ – ಬಲು ವಿನೋದನ ನೋಡಿದೆ
ಗುಣಗಣ ಅಗಣಿತ ಪ್ರಾಣರ ಪ್ರಾಣನ
ವೇಣುಗೋಪಾಲ ವಿಠ್ಠಲ ಕಲ್ಯಾಣನ ೭

೬೩

## ಶ್ರೀ ಪಾರ್ವತಿದೇವಿಯ ಸ್ತೋತ್ರ

ಪಾರ್ವತಿ ಪಾಲಿಸೆನ್ನ ಮಾನಿನಿ ರನ್ನೆ
ಪಾರ್ವತಿ ಪಾಲಿಸೆನ್ನ ಪ

ಪಾರ್ವತಿ ಭಕ್ತರ ಸಾರಥಿ ವಂದಿತೆ
ಸುರಪತಿ ಗಜಮುಖ ಮೂರುತಿ ಮಾತೆ ಅ.ಪ

ಮನದಭಿಮಾನಿಯೆ ನೆನೆವೆನು ನಿನ್ನನು
ಅನುಕರಿಸೆನ್ನನು ಅಂಬುಜಪಾಣಿ ೧

ಮಂಗಳೆ ಮೃಡನಂತರಂಗಳೆ ಹರಿಪದ
ಭೃಂಗಳೆ ತುಂಗಳೆ ಪನ್ನಗವೇಣಿ ೨

ಗುಣಪೂರ್ಣ ವೇಣುಗೋಪಾಲ ವಿಠಲನ್ನ
ಕಾಣಿಸಿ ಕೊಡುವಂಥ ಶೂಲಿಯ ರಾಣಿ ೩

೬೪

## ಶ್ರೀ ಮಧ್ವಾಚಾರ್ಯರ ಸ್ತೋತ್ರ ಪದ

ನಮೋ ನಮೋ ಹರಿಪ್ರೀಯ ನಮೋ ನಮೋ ಸುರಗೇಯ
ನಮೋ ನಮೋ ಗುರುರಾಯ ಮಧ್ವ ಮುನಿ ಜೀಯಾ ಪ

ಧರೆಗೆ ಭಾರವಾಗಿ ಚರಿಸುತಿರೆ ಮಾಯಿಗಳು
ಧರಿಸಲಾರದೆ ಧರಣಿ ಸರಸಿಜೋದ್ಭವಗೆ
ಮೊರೆಯಿಡಲು ಅಜನಾಗ ಹರಸುರರ ಸಹವಾಗಿ
ಹರಿಯ ಸದನವ ಸಾರಿ ಅರುಹಿದನು ಇದನೆಲ್ಲ ೧

ಕಾವನಯ್ಯನು ವಸುಧೆ ಭಾವವನು ತಿಳಿದನಿಲ
ದೇವನೇ ನಿನಗೆ ಆಜ್ಞೆಯನೀಯಲು
ದೇವ ನೀ ನವತರಿಸಿ ಪಾವನವ ಮಾಡಿ ಸ-
ಜ್ಜೀವಿಗಳ ಪೊರೆದರ ದುರ್ಜೀವಿಗಳ ನೀ ಮುರಿದೆ ೨

ಕಾಮವನು ಕಡಿದು ಸನ್ನೇಮವನೆ ಹಿಡಿದು ಬಹು
ಸೀಮೆಯೊಳು ವಾದಿಗಳ ಸ್ತೋಮ ತರಿದು
ಹೇಮಕಚ್ಚುಲ ವೇಣುಗೋಪಾಲ ವಿಠಲನ
ನಾಮಸುಧೆ ಸುಜನರಿಗೆ ಪ್ರೇಮದಲಿ ಸಮಿಯಿತ್ತೆ ೩

೬೫

## ಶ್ರೀ ವಾದಿರಾಜರ ಸ್ತೋತ್ರ ಪದ

ವಾದಿರಾಜರೆ ನಿಮ್ಮ ಪಾದಕ್ಕೆರಗಿ ನಾ
ಮೋದದಿಂ ಬೇಡುವೆ ಮಾಧವನ ತೋರೋ ಪ

ಸಕಲವೇದ ಪುರಾಣ ಶಾಸ್ತ್ರಗಳೆಲ್ಲಾ
ಪ್ರಕಟಿಸಿದೆ ಕನ್ನಡದಿ ಪ್ರೇಮದಿಂದ
ನಿಖಿಳ ಜನರು ತಾವಾನಕ ದುಂದುಭಿ ಸುತನ
ಭಕುತಿಯ ಪಡೆದು ಮೇಣ್ಮುಕುತಿಯೈದಲಿ ಎಂದು ೧

ಗಣನೆ ಇಲ್ಲದೆ ಕೀರ್ತನೆ ಸುಳಾದಿಗಳನ್ನು
ಮನವೊಲಿದು ಮಾಡಿದ್ದು ಜನರು ಪಠಿಸಿ
ವನಜನಾಭನ ಕರುಣವನು ಪಡೆದು ತಾ
ವನುಭವಿಸಲಾನಂದನೆನುತಲಿ ೨

ನಿನ್ನ ನೆನೆಯೆ ಧನ್ಯ ನಿನ್ನ ಪಾಡಲು ಮಾನ್ಯ
ನಿನ್ನ ಕೊಂಡಾಡಲು ಪಾಪಶೂನ್ಯ
ನಿನ್ನವನೆನೆ ವೇಣುಗೋಪಾಲ ವಿಠಲ
ಮನ್ನಿಸಿ ಸದ್ಗತಿ ಪಾಲಿಪ ಮುದದಿ ೩

೬೬

## ಶ್ರೀ ಪುರಂದರದಾಸರ ಸ್ತೋತ್ರ ಪದ

ವಂದಿಪೆ ಪುರಂದರದಾಸರ ಪಾದ
ದ್ವಂದ್ವಕೆ ನಾನು ನಿರಂತರ ಪ

ಮಂದರೋದ್ಧರ ಗೋವಿಂದ ಮುಕುಂದನ
ಎಂದಿಗೂ ವಂದಿಸುತಿರ್ಪರ ಅ.ಪ

ಒದಗಿದ ಜ್ಞಾನವನೋಡಿಸಿ ಮತ್ತೆ
ಸದಮಲ ಜ್ಞಾನವ ಪಾಲಿಸಿ
ಪದುಮನಾಭನ ಕಥೆ ಕೇಳಿಸಿ ಸನ್
ಮುದದಿ ಪಾಲಿಪರ ಧ್ಯಾನಿಸಿ ೧

ಮೊರೆ ಹೊಕ್ಕ ಸುಜನಗಿಹಪರದ ಸುಖ
ತರಗಳನೊದಗಿಸಿ ಹರಿಪದದ
ಪರಮಭಕ್ತಿಯ ನೀವರೆಂದರೆ ದಾವಾಗ
ಸ್ಮರಿಸುವೆನವರಿಗೆ ಕರಮುಗಿದು ೨

ಅನಾಥಜನರನು ಮನ್ನಿಸಿ
ವೇಣುಗೋಪಾಲ ವಿಠಲನ್ನ ಕಾಣಿಸಿ
ಜ್ಞಾನಭಕ್ತಿಯ ಪಥ ತೋರಿಸಿ ಕಾಯ್ವ
ಜ್ಞಾನಿಗಳರಸನ ತುತಿಸಿ ತುತಿಸಿ ೩

## ೬೭

## ಶ್ರೀ ವಿಜಯದಾಸರ ಸ್ತೋತ್ರ ಪದಗಳು

ಕಾಯೋ ಕಾಯೋ ಕಾಯೋ – ವರವೀಯೋ ಪ

ಕಾಯೋ ಕಾಯೋ ವರವೀಯೋ ವಿಜಯ ಗುರು
ರಾಯ ನೀನಲ್ಲದುಪಾಯ ಮತ್ತಿಲ್ಲ ಅ.ಪ

ತಾಪತ್ರಯ ಬಲುದ್ದೀಪನವಾಗಿದೆ
ನೀ ಪರಿಪಾಲಿಸದೀಪರಿ ಥರವೇ ೧

ಪಾಪಗಳೆಣಿಸದೆ ಪಾವನ ಮಾಳ್ಪದು
ಶ್ರೀಪತಿ ಪಡೆದ ಸುರಾಪಗದಂತೆ ೨

ಸ್ವೀಕರಿಸೆನ್ನ ನಿರಾಕರಿಸದೆ ಬಲು
ವ್ಯಾಕುಲನಾಗಿಹೆ ನೀ ಕರುಣದಲಿ ೩

ದೂರ ನೀ ನೋಡಲು ಆರು ಇಲ್ಲವೊ ಗತಿ
ಕಾರುಣ್ಯದಿಂದ ನಿವಾರಿಸೊ ದುರಿತ ೪

ಒಂದರಿತವನಲ್ಲ ಇಂದಿರೇಶನ ಪದ
ದ್ವಂದ್ವವ ತೋರೋ ಹೇ ತಂದೆ ಕರುಣದಿ ೫

ಮಾನವರೊಳಗೆಲ್ಲ ಈ ನರಮೂರ್ಖನು
ಏನು ಅರಿಯ ಬಲು ದೀನನಾಗಿಹನು ೬

ಆಲಸ್ಯ ತಾಳದು ಪಾಲಿಸು ವೇಣು ಗೋ–
ಪಾಲ ವಿಠಲನ ಆಳು ಕೃಪಾಳು ೭

## ೬೮

ಕರುಣವ ಮಾಡೊ ಶರಣರ ಪ್ರೇಮಿ
ಕರುಣವ ಮಾಡೊ ಅರುಣನಿಭನೆ ಗುರು । ಕರುಣವ ಮಾಡೊ ಪ

ಸುರ ತರುವಿನ ಅನುಸರಿಸಿದ ಮನುಜಗೆ ಮೃಷ್ಟಾನ್ನದ ಬರವೆ
ಸುರನದಿ ಅನುಸರಿಸಿದ ಮನುಜಗೆ ಘನ ತೃಷಿಯ ಬಾಧೆ ೧

ಕಾಮಧೇನು ತನ್ನ ಧಾಮದೊಳಗೆಯಿರೆ ಸೀಮೆ ಆಳುವರಾಸೆ
ರಾಮನ ಪದಯುಗ ತಾಮರಸವನಂಬೆ ಪಾಮರರಂಜಿಕೆಯೆ ೨

ವ್ರಜತಾಧಿಪ ವೇಣುಗೋಪಾಲ ವಿಠಲನ್ನ ನಿಜವಾಗಿ ಸ್ಮರಿಸುವರ
ಕುಜನ ದಲ್ಲಣ ಗುರು ವಿಜಯದಾಸರೆ ಸ್ಮರಿಸುವರೆಯಿವರ ೩

೬೯

ನಿನ್ನ ನಂಬಿದ ನರಗೆ ಅನ್ಯರಾಶ್ರಯವೇಕೋ
ಚನ್ನ ಗುರು ವಿಜಯರಾಯ ॥
ಬನ್ನ ಬಡುವೆನೊ ಜೀಯ ಘನ್ನ ಭವದೊಳು ಶಿಲ್ಕಿ
ಇನ್ನು ಕಡೆಗ್ಹಾಕೋ ಬ್ಯಾಗ ಈಗ ಪ

ಸಪ್ತ ದ್ವೀಪಾಧಿಪನ ಪುತ್ರನೊಬ್ಬನ ಪರರ
ಭೃತ್ಯನಾಗುವುದುಚಿತವೆ ॥
ವತ್ತಿ ಸುರನದಿ ನರನ ಸುತ್ತ ಪರಿಯಲು ನೀರಿ
ಗಾರ್ತನಾಗುವುದುಚಿತವೆ ॥
ಮತ್ತೆ ಸುರಧೇನುವಿನ ಹತ್ತಿಲಿರುವ ಯಿನ್ನು
ಹಸ್ತು ಬಳಲುವುದುಚಿತವೆ ॥
ನಿತ್ಯ ಸುಖದಾರಿ ವಿಚಿತ್ರ ನೀ ತೋರೆ ನಾ
ಹಸ್ತ ನರಗೊಡ್ಡುವುದು ಯತ್ನ ಉಚಿತವೆ ಗುರುವೆ ೧

ಕ್ಷೀರವಾರಿಧಿ ಸೇರಿ ನೀರ ಮಜ್ಜಿಗೆಗಾಗಿ
ಚೀರಿ ವರಲುವುದುಚಿತವೆ ॥
ನೂರಾರು ವಸನದ ಹೇರು ಮನೆಯೊಳಗಿರಲು
ಕೋರಿ ವುಡುವುದು ವುಚಿತವೆ ॥*
ವಾರವಾರಕೆ ಹರಿಯ ತೋರುವರನ ಬಿಟ್ಟು
ಕ್ರೂರ ವನ ಸೇವಿಸುವ ದಾರಿಗುಚಿತವೊ ಗುರುವೆ ೨

---

* ಮಧ್ಯದಲ್ಲಿ ಎರಡು ಸಾಲುಗಳು ಉಪಲಬ್ಧವಿಲ್ಲ.

ಸಾಕಿ ಸಲಹೆಂದು ಅತಿ ವ್ಯಾಕುಲದಿ ಬಂದವನ
ನೂಕಿ ಬಿಡುವುದುಚಿತವೆ ॥
ಬೇಕಾದ ವರವು ನೀ ಲೋಕರಿಗೆ ಕೊಡುವೆನ್ನ
ಕಾಕುಗೊಳಿಸವುದುಚಿತವೆ ॥
ಏಕ ಬುದ್ಧಿಯಿನಿತ್ತು ಜೋಕೆ ಮಾಡೆ ಮನ–
ನೇಕ ಮಾಡುವದುಚಿತವೆ ॥
ಶ್ರೀಕಾಂತ ವೇಣುಗೋಪಾಲ ವಿಠಲ ನಿನ್ನ
ವಾಕು ಮನ್ನಿಸಲು ನಾ ಕೆಡುವದುಚಿತವೆ ಗುರುವೆ ೩

## ೭೦

ಕಾಯೊ ಕಾಯೊ ಗುರು ವಿಜಯರಾಯ
ಕಾಯೊ ಕಾಯೊ ವರವೀಯೊ ವಿಜಯ ಗುರು
ರಾಯ ನೀನಲ್ಲದೆ ಉಪಾಯವೆ ಯಿಲ್ಲ ಪ

ತಾಪತ್ರಯಗಳುದ್ದೀಪನವಾಗಿವೆ
ನೀ ಪರಿ ಪಾಲಿಪದೀ ಪರಿ ಥರವೆ ೧

ಪಾಪಗಳೆಣಿಸದೆ ಪಾವನ ಮಾಳ್ಪದು
ಶ್ರೀಪತಿ ಪಡೆದ ಸುರಾಪಗದಂತೆ ೨

ದೂರ ನೀ ನೋಡಲು ಆರು ಯಿಲ್ಲವೊ ಗತಿ
ಕಾರುಣ್ಯದಲಿ ನಿವಾರಿಸು ದುರಿತ ೩

ಸ್ವೀಕರ ಮಾಳ್ಪದು ನೀ ಕರಿಸದೆ ಬಲು
ವ್ಯಾಕುಲನಾಗಿಹೆ ನೀ ಕರುಣದಲಿ ೪

ಪರಿಹರಿಸಲಿ ಸಲ್ಲ ಕರವಿಡಿ ಬ್ಯಾಗನೆ
ಗುರುವೆ ನಿಮ್ಮಯ ಚರಣ ಸೇವಕನ ೫

ನೀನಾಳುವರೊಳು ಈ ನರಮೂರ್ಖನು
ಏನು ಅರಿಯೆ ಬಲು ದೀನವಾಗಿಹನೊ ೬

ಆಲಸ ತಾಳದು ಪಾಲಿಸು ವೇಣು ಗೋ-
ಪಾಲ ವಿಠಲನ ಆಳು ಕೃಪಾಳೊ ೭

## ೭೧

ಸ್ಮರಿಸಿದದರಘನನಾಶನ ಸ್ಮರಿಸಿದವರಘನಾಶ
ಸ್ಮರನಯ್ಯನಂಘ್ರಿ ಯುಗ ಸರಸಿಜವ ಪೂಜಿಸುವ
ಗುರು ವಿಜಯರಾಯರ ಚರಣಾಬ್ಜ ಸಾರಿದವ
ದುರಿತಾಬ್ಧಿ ಮೀರಿದವ ಹರಿಪುರವ ಸೇರಿದವನೊ ಪ

ಹಿಂದೆ ದ್ವಾಪರದಿ ಅರವಿಂದನಾಭನು ಭಕ್ತ
ವೃಂದವನು ಸಲಹುವೆನೆಂದು ಅವತರಿಸಿ ಸಭೆ
ವಂದು ದಿನ ವಿಸ್ತರಿಸಿ ಕುಳಿತಿರಲು ಸುರಮುನಿ ಬಂದು ನುತಿಗೈದು ವರವ ॥
ಪೊಂದಿ ಕಲಿಯುಗದಲ್ಲಿ ನಿಂದು ನರಹರಿಯನಲು-
ವಿಂದ ವೊಲಿಸಿಕೊಳುತ ನಂದವನಧಿಯೊಳಗೆ
ಸಂದಣಿಸಿ ಸತಿಸುತರೊಡನೆ ಜನರ ಅಘ ಬಂಧ ಪರಿಹರ ಮಾಡುತಾ ಜನರು ೧

ಇನಿತು ಜನಸಮುದಾಯದೊಳು ಯಿರುತಿರ್ದ ಇಭವರದ
ನನುದಿನವು ಗಾಯನದಿ ಕೊಂಡಾಡಿ ಮನಮುಟ್ಟಿ
ವಿನಯಾತಿಶಯದಲ್ಲಿ ಗುರುವರ್ಯರಾ ಸೇವೆ ಘನವಾಗಿ ಮಾಡಿ ಮುದದಿ ॥
ತನುವೆತ್ತಿ ವರಸರಿತ ತೀರದಾ ಅಣು ಬದರಿ
ಜನ ಶ್ರೇಷ್ಠರೊಳು ಹರಿಯ ದಾಸ ಪೆಸರಲಿ ಬಂದು
ಘನ ಯಾದವಾದ್ರಿ ಪಟ್ಟಣದೊಳಗೆ ಯಿದ್ದು ಬಗೆ ಜನನಿ ಅನುಜಾತಿ ಸಹಿತ ೨

ಕೆಲವು ದಿನ ಸಂಸಾರ ಗಲಭಿಯೊಳು ಯಿರುತಿರ್ದು
ಜಲದೊಳಗೆ ಅಂಬುಜವು ಮಿಳಿತವಾಗಿದ್ದ ತೆರ
ಹಳಿದು ದುಷ್ವಾಸಿಯನು ಕಳೆದು ಕಡು ಮಮತೆಯನು ಪುಳಕೋತ್ಸ ಮನದಿ ತಾಳಿ ॥

ಜಲದೊಳುತ್ತಮವಾದ ಭಾಗೀರಥೀ ಯಾತ್ರಿ
ಛಲ ಭಕುತಿಯಿಂದಲಿ ಮಾಡಿ ಮೋದದಿ ಹರಿಯ
ಹಲವು ಬಗೆ ಲೀಲೆಯನು ಹರುಷದಿಂದಲಿ ಯಿನ್ನು ತಿಳಿದು ಗುರು ಕರುಣ ಬಲದಿ ೩

ಅಲ್ಲಿ ಗುರುಗಳ ಧ್ಯಾನದಲ್ಲಿ ದೃಢವಾಗಿ ಮನ
ನಿಲ್ಲಿಸೀ ವರ ಪಡೆದು ನಾನಾಕು ಪರಿಯುಸಿರ
ವಲ್ಲಭನ ಮೂರ್ತಿ ಮನದೊಳು ಕಂಡು ಸುಖವನಧಿಯಲ್ಲಿ ಲೋಲ್ಯಾಡಿಕೊಳುತ ॥
ಅಲ್ಲಿಂದ ತೆರಳಿ ಗಿರಿಯಲ್ಲಿದ್ದ ವೆಂಕಟನ
ಸಲ್ಲುವಾ ಭಕುತರೊಳು ಸಲೆ ಶ್ರೇಷ್ಠನೆಂದೆನಿಸಿ
ಮಲ್ಲ ಮರ್ದನನಾದ ಮುರಹರನ ಮಹಿಮೆ ಮನ ಬಲ್ಲನಿತು ವಿಸ್ತರಿಸುತ ಜನರು ೪

ಈ ತೆರದಿ ಇಭವರದನಾತುಮದೊಳಗೆ ತಂದು
ಭೂತಳದ ಬಲು ವಿಧದ ತೀರ್ಥಕ್ಷೇತ್ರಗಳಲ್ಲಿ
ಪ್ರೀತಿಯಿಂದಲಿ ಪರಮ ಪುರುಷನ್ನ ಧೇನಿಸುತ ಖ್ಯಾತಿ ಮಹಿಯೊಳಗೆ ಮೆರದು ॥
ವಾತಜಾತನ ಮತದ ವೊಳಗಿಪ್ಪ ವೈಷ್ಣವರ
ತಾತನೆಂದೆನಿಸಿ ಸುಖವ್ರಾತದೊಳಗಿಡುವಲ್ಲಿ
ಚಾತುರ್ಯದಿಂದ ಬಲುದಾತನೆನಿಸುತಲಿ ಭವತೀತರನ ಮಾಡಿ ಪೊರವ ಜನರು ೫

ಆ ಬಗೆಯಲೀ ಕಮಲನಾಭ ಕರುಣಿಸಿ ಯಿವರ
ಈ ಭುವನದೊಳು ಯಿಟ್ಟು ಜನರ ವುದ್ಧರಿಸುವ
ಲೋಭದಿಂದಲಿ ಸಕಲ ಸಜ್ಜನರ ಸನ್ಮಾರ್ಗ ಲಾಭದೊಳು ಸೇರಿಸಿದನೊ ॥
ತ್ರಿಭುವನದೊಡೆಯನ್ನ ಕಥೆಯ ತಿಳಿಸುವ ಜನಕೆ
ಶೋಭಿಸುವ ಗಾಯನದ ಸೊಬಗಿನಿಂದಲಿ ಕೇಳಿ
ಶ್ರೀಭೂರಮಣ ವೊಲಿದು ಪಾಲಿಸುವನಾಮೇಲೆ ಶೋಭನ ಗತಿಯ ನೀವನೊ ೬

ಶ್ರೀಕಾಂತ ಸಕಲ ಜಗ ವ್ಯಾಪಕನು ಸರ್ವೇಶ
ಲೋಕದೊಳು ಇವರಲ್ಲಿ ಬೇಕಾದ ಚರಿತೆಯು ಅ–
ನೇಕ ಬಗೆಯಿಂದಿವರ ಮುಂಭಾಗ ತೊಲಗದಲೆ ತಾ ಕುಣಿವ ತೋರಿಕೊಳುತ ॥
ಕಾಕು ಜನರಿಗೆ ಕಲುಷ ವಾಕು ವುಪಜೀವರಿಗೆ
ಏಕ ಮನದಿಂದಿರುವದೇ ಈ ಕಲಿಯುಗದಲಿ
ಸಾಕಾರ ಗುಣಪೂರ್ಣ ಶ್ರೀನಿವಾಸನು ಬಿಡದೆ ಸಾಕುವನು ಸಮ್ಮೊಗದಲಿ ಜನರು ೭

ದೇವಮುನಿ ನಾರದನು ಜೀವಿಗಳನುದ್ಧರಿಪ
ಭಾವದಲಿ ಯಮಪುರಿಯ ದೇವನಲ್ಲಿಗೆ ಪೋಗಿ
ಸಾವಧಾನದಿ ಸಕಲ ಸತ್ಕಾರಕೊಳಗಾಗಿ ನೋವು ಬಡವರನೀಕ್ಷಿಸಿ ॥
ಸಾವಧಾನದಿ ಕೇಳಿ ಕಲಶಾರುಣೀ ಭಕ್ತ–
ರಾವಳಿಯ ಸಲಹುವ ದೇವ ದೇವೇಶನನು
ತಾ ವದರಿ ಕೂಗಲಾ ಜೀವರೆಲ್ಲರು ಕೇಳಿ ಪಾವಿತ್ರವನೆಗೈದರೊ ಜನರು ೮

ಸಾಧುಗಳು ಇದು ಕೇಳಿ ಸಂತೈಸುವದು ಶಬ್ದ
ಬಾಧೆಗಳು ಯಿದ್ದರೂ ತಿಳಿದು ತಲೆದೂಗಿ ಮಹ
ಮೋದಕೊಳಗಾಗುವುದು ಮನಮುಟ್ಟಿ ನಲಿದು ಬುಧರಾದವರು ಭವ ವರ್ಜರೊ ॥
ವೇದಶಾಸ್ತ್ರಗಳು ಬಲು ಸಾಧನ ಪುರಾಣಗಳು
ಶೋಧಿಸೀ ಮನದಲ್ಲಿ ಪೇಳಿದವನಲ್ಲ ಗುರು
ಪಾದ ರೇಣುಗಳನ್ನು ಆಶ್ರೈಸಿ ಅರ್ಪಿಸಿದೆ ಶ್ರೀಧವನ ಸಿರಿ ಚರಣಕೆ ಜನರು ೯

ಪರಮಾತ್ಮ ಸಿರಿ ಬ್ರಹ್ಮ ಪುರಹರನು ಹರಿರಾಣಿ ಗಿರಿಜೆ
ಗಿರಿವೈರಿ ಪ್ರಾಣಾನಿರುದ್ಧ ಮರುತ ತರಣಿ
ವರುಣಾ ದೇವ ಮುನಿ ಭೃಗು ಋಷಿಗಳು ಸಪ್ತ
ವರವಿಶ್ವಾಮಿತ್ರ ವೈವಸ್ವತಾನುತಾರಾದಿ ಚತುರಗಣಪ ಮೊದಲಾದ ಶೇಷಶತರು॥
ಭರತಾದಿ ಕರ್ಮಜರು ಗಂಗೆ ಸ್ವಹಾ ಬುಧನು
ಸುರರ ವೈದ್ಯರ ಮಡದಿ ಶನಿ ಪುಷ್ಕರಾಮತ್ತೆ
ಇರುವ ದೇವತೆಗಳ ತಾರತಮ್ಯವ ತಿಳಿಸಿ ಶರಧಿ ಶಯನನ ತೋರುವ ಜನರು ೧೦

ದಾನವಾಂತಕ ದನುಜರನ್ನು ಸಂಹರಿಸುವಾ
ಜ್ಞಾನಪೂರ್ಣನು ಗುಪ್ತ ತಾನಾಗಿ ಜಗದೊಳಗೆ
ಹಾನಿ ವೃದ್ಧಿಂಗಳಿಗೆ ಹೊರಗಾಗಿ ಜೀವಿಗಳ ಮಾಣದಲೆ ಪರಿಪಾಲಿಪ ॥
ಕ್ಷೋಣಿಯೊಳು ಭಕುತರಘ ಹಾನಿಗೈಸುವ ಬಗಿಗೆ
ಈ ನಿರುದ್ಧಕೆ ಯಿವರಧೀನ ಮಾಡಿದ ನಮಗೆ
ವೇಣುಗೋಪಾಲ ವಿಠಲರೇಯ ತಾನೊಲಿದು ಸ್ವಾನಂದವನೆ ವುಣಿಸುವ ಜನರು ೧೧

## ೭೨

### ಧ್ರುವತಾಳ

ಏನಯ್ಯಾ ಸಿರಿಪತಿ ನಾ ನಿನ್ನ ನಂಬಿ ಇತರ
ಜ್ಞಾನವೇ ಮರೆದು ತನು ನಿನಗೊಪ್ಪಿಸಿ
ಹಾನಿ ವೃದ್ಧಿಗಳೆರಡು ಏನಾದರೆನ್ನ ನಿನ್ನ
ಧೀನವೆಂದು ನಿತ್ಯ ನಿಧಾನದಲ್ಲಿ
ನಾನಿಳಿ ಇತ್ತ ವಿಷಯ ಕಾನನಕ್ಕೆನ್ನೊಪ್ಪಿಸಿ
ನೀ ನಗುತಲಿಪ್ಪುದು ಸೋಜಿಗವೋ
ಆನಂದ ಶರಧಿಯಲ್ಲಿ ನಾನಾಗಿದ್ದ ಮನುಜ
ಹೀನ ಪೂಯಾವ ಸೇರಿದಂತಾಯಿತೋ
ಅನಘ ರಾಶಿಗಳು ಆವಾವ ಜನುಮದಲ್ಲಿ
ಏನೇನು ಮಾಡಿಸಿದ್ದು ಒದಗಿಸಿದಿಯೊ
ನಾನು ನಿನಗೆರವಾದದೇನಯ್ಯಾ ಕಾವನಯ್ಯಾ
ಭಾನುತೇಜನೆ ಭಕ್ತಾಧೀನ ಪ್ರೀಯಾ
ಆ ನಳಿನಭವ ರುದ್ರ ಇಂದ್ರಾದಿ ದಿವಿಜರಿಗೆ
ನೀನಲ್ಲದೆ ಎನಗಾರು ಗತಿಯೊ
ಶ್ರೀನಾಥನಾದ ವೇಣುಗೋಪಾಲ ವಿಠಲರೇಯಾ
ಅನಾದಿಯಿಂದ ನೋಡು ನಿನ್ನಾಧೀನವೆ ಸಿದ್ಧಾ ೧

### ಮಟ್ಟತಾಳ

ತಾಯಿ ತನ್ನ ಶಿಶುವು ತವಕದಿಂದಲಿ ಎತ್ತಿ
ಬಾಯಿಲೆ ಕೊಂಡಾಡಿ ಮುದ್ದಿಸಿ ಮೊಲೆಗೊಟ್ಟು
ಕಾಯುವ ಪೋಷಿಸುತ ಕರುಣವ ತಪ್ಪಿ ಒಮ್ಮೆ

ನೋಯದಾ ನುಡಿಯಿಂದ ನುಡಿದು ಬಡಿದು ನೂಕೆ
ಆ ಎಂದಬ್ಬರಿಸಿ ಅಳುವದಲ್ಲದೆ ಒಮ್ಮೆ
ಛೀ ಎನ್ನಲಾಪದೆ ಚಿತ್ತ ಪಲ್ಲಟ ಮಾಡಿ
ಕಾಯಜ ಪಿತ ನೀನು ಜನನಿಯ
ಮಾಯದ ಗುಣ ಮೂರು ಮೀರಿದ ಮಹಾ ಮಹಿಮ
ತಾಯಿ ನೀನು ಸಕಲ ಜಗಕೆ ಜನಕನಾಗಿ
ತಂದೆ ನೀನು ಜಗಕೆ ಪೋಷಣೆ ಭಿಕ್ಷೆಯಿಂದ
ಈಯಬಲ್ಲವರೊಡಿಯ ವೇಣುಗೋಪಾಲ ವಿಠಲ
ಧೇಯ ನೀನು ಸತ್ಯ ನಿನ್ನ ಬಿಡೆನೊ ನಾನು ೨

## ತ್ರಿವಿಡಿತಾಳ

ಭಕುತರ ಸಲಹುವಿ ಭಕುತರಗಲಿಸೂವಿ
ಭಕುತರ ವಶದಿ ಸಂಚರಿಸುವೆ ಅಯ್ಯ ನೀನು
ಭಕುತರೆ ನಿನ್ನ ಬಳಗ ಭಕುತರೆ ನಿನ್ನ ಬಂಧು
ಭಕುತರೆ ನಿನ್ನ ಶಳದು ಬದಿಗೆ ತಾ ಹರಯ್ಯ
ಭಕುತರು ಇಲ್ಲದಿರೆ ಏಕಾನಲ್ಲವೆ ನೀನು
ಉಕುತಿ ಶಕುತಿಗಳು ಆರಗೋಸುಗವಯ್ಯಾ
ಭಕುತರೊಡಿಯನಾಗಿ ಅನಾದಿಯಿಂದ ಮೆರೆವ
ಲಕುಮಿ ವಲ್ಲಭ ವೇಣುಗೋಪಾಲ ವಿಠಲ
ಭಕುತರೊಳ್ಕೇವಲ ಶಕಲನ ಸಲಹಯ್ಯಾ ೩

## ಅಟ್ಟತಾಳ

ಮಂಗಳಾಂಗನೆ ಶ್ರೀರಂಗಾಂಬುಧಿ
ತಿಂಗಳನ ಪ್ರಭೆ ಪಿಂಗೊಳಿಸುವ ನಖ
ಅಂಗುಲಿಯ ಸನ್ನೆ ಪೊಂಗೊಳಲ ನಾದ
ಸಂಗೀತದಿ ಗೋಪ ಅಂಗನಿಯರಸಾ
ಕಂಗೊಳಿಸಿದ ಶುಭಾಂಗಾ ರಿಪುಕುಲ
ಭಂಗ ಮಾಡಿದ ಭವ್ಯ ಮೂರುತಿಯೆ

ತುಂಗ ವೇಣುಗೋಪಾಲ ವಿಠಲ
ಹಂಗಿಸುವದೇಕಾಪಾಂಗದಲಿ ನೋಡೊ ೪

## ಆದಿತಾಳ

ಸುಖವಾದರೆ ಬಿಡೆ ದುಃಖವಾದರೆ ಬಿಡೆ
ಅಖಿಳವು ಒದಗಿಸಿದರೆ ನಾ ನಿನ್ನ ಬಿಡೆನಯ್ಯಾ
ಸಖ ನೀ ಎನಗೆ ಅನಾದಿ ಕಾಲದಲಿಂದ
ಮುಖತಾ ಪೇಳವದೇಕೆ ಪ್ರಕಟವಾದ ಪರಿ
ಸುಖ ಗುಣ ಗಣ ಪೂರ್ಣ ವೇಣುಗೋಪಾಲ ವಿಠಲ
ಮಖಜ ಮಿಕ್ಕಾದವರ ಯುಕುತಿಯಿಂದಲಿ ಪೊರದೆ ೫

## ಜತೆ

ಆವದಾದರು ನಿನ್ನ ಸೇವಕ ನಾ ಸತ್ಯ
ದೇವ ವೇಣುಗೋಪಾಲ ವಿಠಲ ನೀ ಬಿಡು ಮಾಯಾ ೬

# ೭೩

## ಧ್ರುವತಾಳ

ಎಲೆ ಎಲೆ ಕೃಷ್ಣಯ್ಯಾ ಎನ್ನ ಈ ಪರಿಯಿಂದ ಭವದ
ಬಲೆಯೊಳಗಿಟ್ಟು ಸತತ ಬಾಧಿಸುವರೆ
ಛಲವೇನೊ ನಿನಗೆ ಎನ್ನ ಮೇಲೆ ಚಲುವ ಚನ್ನ
ಗಲಭೆ ಕೇಳುವೆ ಬಲು ಕರುಣಿ ಎಂದು
ನೆಲೆಯಲ್ಲಿ ನರಲೋಕದ ಜನದ ಸಾಧನವೇನೊ
ಸುಲಭವೆನ್ನರೆ ಬುಧರು ಕಲಿಯುಗವ
ಸಲೆಯಮಗೆ ಭಾರತ ವರ್ಷ ಉತ್ಪತ್ತಿ ಎಂದು
ತಲೆದೂಗಿ ಕೊಂಡಾಡರೇ ಅಮರಗಣರು

ನಳಿನನಾಭನೆ ನಮಿತಾವಳಿಯ ಕಾಯ್ವ ಭಕ್ತ ಬಂಧು
ಹಳಿವದು ಹಿಂದೆ ಇದ್ದ ಪ್ರತಿಬಂಧಕ
ತಿಳಿಪದು ಎನ್ನೊಳಿದ್ದು ನಿನ್ನ ಮೂರುತಿಯನ್ನು
ಕಳೆವದು ಮುಂದೆ ಹೀನ ಆಗಾಮಿಯ
ಪುಳಕೋತ್ಸವವಾಗಲೆನ್ನ ಮನ ಮಿಕ್ಕಾದಿಂದ್ರಿಯಗಳು
ಜಲಜಾಕ್ಷ ನಿನ್ನಾಧೀನವೆನ್ನೆ ಅರಿತು
ಇಳಿಯೊಳಗೆ ನಿನ್ನಂಘ್ರಿ ಭಜಕಾ ಭಜಕರಾ ತೊಂ–
ಬಲಿಗಾನೆಂದೆನಿಸಿ ಬಲು ಸಾಕು ಬಲು ಹೆಚ್ಚು
ಬಲರಾಮನನುಜ ನಮ್ಮ ವೇಣುಗೋಪಾಲ ವಿಠಲ
ಹಲವು ಬಂಧಗಳ ಪರಿದು ನಿನ್ನವರ ನೆನಿಸೊ ೧

## ಮಟ್ಟ ತಾಳ

ಆನು ನೋಡುವದೆಲ್ಲ ನಿನ್ನ ಮೂರುತಿ ಎನಿಸೊ
ಆನು ನುಡಿವದೆಲ್ಲ ನಿನ್ನ ತುತಿಗಳೆನಿಸೊ
ಆನು ನಡಿವದೆಲ್ಲ ನಿನ್ನ ಯಾತ್ರೆ ಎನಿಸೊ
ಆನು ಪಿಡಿವದೆಲ್ಲ ನಿನ್ನ ಸ್ಪರಿಶ ಎನಿಸೊ
ಆನು ಉಡುವದೆಲ್ಲ ನಿನ್ನ ಉಡಿಗೆ ಎನಿಸೊ
ಆನು ತೊಡುವದೆಲ್ಲ ನಿನ್ನ ತೊಡಿಗೆ ಎನಿಸೊ
ಆನು ಬೇಡುವ ಕೊಡುವ ಆವಾವಾದರು
ನೀನೆ ಕೇಳಿಕೊಡುವೆ ಎಂದೆನಿಸೊ ದೇವ
ಆನು ಅನುದಿನ ಪೇಳಿ ಕೇಳುವದೆಲ್ಲ
ಶ್ರೀನಾಥನೆ ನಿನ್ನ ಕೀರ್ತಿ ವಾರ್ತೆ ಎನಿಸೊ
ಆನನುಭವಿಸುವ ಖತಿ[೧] ನಿದ್ರೆ[೨]ಗಳೆರಡು
ಮಾಣದೆ ತಪ ಆಲಿಂಗನೆ ಎಂದೆನಿಸೊ
ಆನು ಆಲಸದಿಂದ ಪವಡಿಸುವದೆಲ್ಲ
ಜ್ಞಾನಪೂರ್ಣನೆ ನಿನಗೆ ದಂಡ ಪ್ರಣಾಮ ಎನಿಸೊ
ಆನು ಅನ್ಯ ಜನರು ಮಾಡುವ ಮರಗುವ–

೧. ಸಿಟ್ಟು, ಕ್ರೋಧ. ೨. ಅಜ್ಞಾನ.

ದೇನು ಆದದ್ದು ಸಕಲ ದೇಹಾದಿಗಳಲ್ಲಿ
ಅನಂತ ಸುಖಪೂರ್ಣ ಅತಿ ನಿರ್ದೋಷನೆ
ಏನಾದರು ನಿನ್ನಾಧೀನವೆಂದೆನಿಸೊ
ದಾನವ ಕುಲ ವೈರಿ ವೇಣುಗೋಪಾಲ ವಿಠಲ
ನೀನಲ್ಲದೆ ಜಗವು ಮಾಡುವದೇನಯ್ಯಾ ೨

## ರೂಪಕತಾಳ

ಮನದೊಳು ನೀನೆ ಘನ ವಿಷಯಂಗಳೊಳು ನೀನೆ
ಇನಶಶಿ ಮೊದಲಾದ ಇಂದ್ರಿಯವರೊಳು ನೀನೆ
ಕನಸು ಸುಷುಪ್ತಿ ಜಾಗರಾದಿಗಳಲ್ಲಿ ನೀನೆ
ಮನ ಬಂದ ವ್ಯಾಪಾರ ಮಾಡಿ ಮೋದಿಪೆ ನೀನೆ
ಎನಗೆ ಸ್ವಾತಂತ್ರ ಯಳ್ಳನಿತಾದರು ಇದ್ದ-
ರನುನಯದಿ ಅರ್ಚಿಸದಿಪ್ಪೆನೆ ದೇವಾ
ಅನುದಿನ ವ್ಯಾಪಾರ ಆ ರಮೆ ಸಂಗಡ
(ತನಿಸಲಾ)[೧] ತನುಸಲಾ ವಿಚಿತ್ರ
ಮೊನೆ ಸ್ವಲ್ಪ ಮಾಡಿಪ್ಪೆ ಭೋಗ ಬಡುವದ-
ಕೆ ನ್ಯಾಯ ಇನಿತು ಬಗೆ ಇರಲಾಗಿ ಈ ಪರಿಯಾತಕೊ
ದಿನಮಣಿ ತೇಜನೆ ದೀನರುದ್ಧಾರಿಯೆ
ಫಣಿಶಯನ ಪಾವನ್ನ ಕಾಯಾ ಕೇಶವರಾಯ
ಘನವಲ್ಲವೊ ನೀನೊಯ್ಯಾದಿರೆ ಎನಗೆ
ವನಜಾಂಡದೊಡಿಯಾ ಸಿರಿ ವೇಣುಗೋಪಾಲ ವಿಠಲ
ಎನಿತಾದರೆನ್ನಯ್ಯ ಮನ ನಿನ್ನಾಧೀನವೊ ೩

## ತ್ರಿವಿಡಿತಾಳ

ವಾಣಿವಲ್ಲಭ ವಂದ್ಯಾ ಕ್ಷೋಣಿಧರ ಖಗಪ
ತ್ರಿಣಿನೇತ್ರ ದೇವಾ ಶ್ರೇಣಿಯಿಂದಲಿ ಸೇವ್ಯಾ
ಜಾಣ ಜಗದೊಳು ವ್ಯಾಪ್ತಾ ಚಾಣುರಾರಿ ಮರ್ದನ

---

೧. ಹೆಚ್ಚಾಗಿ ಮಾಡುತ್ತಿರಲು.

ಕಾಣಿಸಿದೆ ವಿಶ್ವ ಮಾತೆಗೆ ಬಾಯೊಳು
ಏಣಲೋಚನಿಯರ ಮಾಣದೆ ಮೋಹಿಸಿದ
ವೇಣುಗೋಪಾಲ ವಿಠಲ ಪಾಣಿ ಪಿಡಿವದೆನ್ನ ೪

**ಝಂಪೆತಾಳ**

ನಿನ್ನ ಕರುಣವಾಗೆ ಇನ್ನು ನರಗೆ
ಬನ್ನ ಉಂಟೇನಯ್ಯಾ ಭವದೊಳಗೆ
ಅನ್ನ ವಸನಾದಿಗಳ ಆಶೆ ಉಂಟೆ ಪಾ–
ವನ್ನ ನಿನ್ನಯ ಪಾದವನ್ನು ಪೊಂದಿದವಂಗೆ
ಇನ್ನು ಮಹಿಪದಿ[1] ಭಯಗಳುಂಟೆ ಪ್ರ–
ಸನ್ನ ಮೂರುತಿ ನಿನ್ನ ತಿಳಿಯದವಂಗೆ
ಸನ್ನುತಾಂಗಿಯ ರಮಣ ವೇಣುಗೋಪಾಲ ವಿಠಲ
ಎನ್ನೊಳೀ ದೃಢ ಸತತ ನಿಲ್ಲಿಸುವದು ಹರಿಯೆ ೫

**ಅಟ್ಟತಾಳ**

ಹಲವು ಜನ್ಮಂಗಳಲ್ಲಿ ಜಲಜಾಕ್ಷ ನಿನ್ನಂಘ್ರಿ
ನಲವಿಂದ ಭಜಿಸುವ ಛಲ ಭಕ್ತಿ ಎನಗಿತ್ತು
ಸುಲಭದಿ ಸಂಸಾರ ಬಲಿಗೆ ದೂರನ ಮಾಡಿ
ಚಲುವ ನಿನ್ನವರ ಬಾಗಿಲ ಕಾಯಿದವನ ಮಾಡೊ
ಇಳಿಯೊಳು ನಿನ್ನ ಮಾಯಾ ತಿಳಿವವನಾರು
ಜಲಜ ಸಂಭವಗೆ ಮಿಕ್ಕಾದವರಿಗೆಲ್ಲ ಅಳವಲ್ಲ
ಬಲಿಯನುದ್ಧರಿಸಿದ ವೇಣುಗೋಪಾಲ ವಿಠಲ
ಹಲವು ಬಗೆ ಮನ ನಿಲುವಂತೆ ಮಾಡೋ ೬

**ಆದಿತಾಳ**

ಪಾಲಿಸುವದೆನ್ನ ಪಾಲಸಾಗರ ಶಾಯಿ
ಮೂಲೋಕದೊಡಿಯ ಮುಚುಕುಂದ ಕೃಷ್ಣ

---

೧. ಇನ್ನುಂ – ಅಹಿಪದಿ, ಇನ್ನು ಅಹಿಪದಿ – ಹಾವುಗಳು.

ಏಳಲ ಮಾಡದಿರು ಎನ್ನನು ನಿನ್ನ ಭಕ್ತ
ರೊಳಗಾದವನೆನ್ನಿಸಿ ನೀಯೋ ಸೇವೆ
ಖೂಳರ ಸಂಗದಿಂದ ಕೀಳು ವಾರ್ತೆಗೆ ಮನ
ಆಲಸದಂತೆ ಮಾಡೊ ಅಂಬುಜನಾಭಾ
ಸ್ಥೂಲದೇಹವೆ ತೆತ್ತುವಾಲಯ ನಿನ್ನ ಧ್ಯಾನ
ಲೋಲನಾಗುವೆನೆಂಬ ಆಶೆ ಘನವೋ
ಜಾಲವರದರೇನು ನಿನ್ನಿಚ್ಛೆಯ ಮಾಡದಿರೆ
ಲೀಲಾ ವಿನೋದನೆ ಅಣುಸ್ಥೂಲ ವ್ಯಾಪ್ತಾ-
ಬಾಲನ ಬಲದಂತೆ ಎನ್ನ ಮೊರೆಯ ನಿನಗೆ
ಮೇಲೆ ನಿನ್ನಯ ಮನಾ ಮಾಧವನೆ
ಜಾಲಾ ಮಾಯಾ ವೇಣುಗೋಪಾಲ ವಿಠಲ
ಕಾಲ ಅಕಾಲವು ನೀನೆ ಬಲ್ಲಿಯಾ ಹರಿಯೆ ೭

**ಜತೆ**

ಖೇದ ಮೋದಗಳೊಳು ಸಾಧು ಸಂಗದಿ ನಿನ್ನ
ಪಾದ ಸ್ಮರಣೆ ನೀಯೊ ವೇಣುಗೋಪಾಲ ವಿಠಲ ॥

## ೭೪

**ಧ್ರುವತಾಳ**

ರಕ್ಷಿಸುವದು ಬಿಡದೆ ಪಕ್ಷಿವಾಹನ ಸತತ
ಕುಕ್ಷಿಯೊಳಿದ್ದ ದುರುಳ ರಕ್ಕಸರ ಬಾಧೆಯಿಂದ
ಅಕ್ಷಯ ಫಲ ನೀನು ಲಕ್ಷೆಯೆ ಇವರು ನಿನಗೆ
ಮಕ್ಷಕ ಸಮನಾದ ಶಕ್ತಿ ಸುಕ್ಷಮರೆಲ್ಲ
ಚಕ್ಷುರಿಂದ್ರಿಯದಿಂದ ನೀಕ್ಷಿಸಿ ದುಷ್ಟ ವಿಷಯ
ಪೇಕ್ಷಿಸಿ ಸರ್ವಕಾಲ ವಿಷಯ ಮಾಳ್ಪರಯ್ಯಾ
ಮೋಕ್ಷ ಮಾರ್ಗದ ಜ್ಞಾನ ವಕ್ಷಮಾನರಲ್ಲಿ

ಕಕ್ಷ ಕ್ರಮಾನು ಸಾಧನದ ಶಿಕ್ಷೆಯ ಕೈಗೊಂಡು –
ಪೇಕ್ಷ ಮಾಡದೆ ಸದಾ ತತ್ವಬುಭುಕ್ಷಿತನಾಗಿ
ಲಕ್ಷುಮಿಪತಿ ನಿನ್ನ ಲಕ್ಷಿಸುವಂತೆ ಮಾಡೊ
ರಾಕ್ಷಸಾಂತಕ ನೀನು ಪ್ರತ್ಯಕ್ಷನಾದರೆ ಈ
ಭಿಕ್ಷುಕರೆಲ್ಲ ಪೋಗಿ ಬಚ್ಚಿಟ್ಟುಕೊಂಬರಯ್ಯಾ
ರಿಕ್ಷಾವಂದಿತ ಸಿರಿ ವೇಣುಗೋಪಾಲ ಸಹ–
ಸ್ರಾಕ್ಷನ್ನ ಪ್ರಿಯ ಕುಪಿತಾಕ್ಷನೊಡಿಯ ಕಾಯೊ ೧

## ಮಟ್ಟತಾಳ

ದಾಸರೊಳಿಡುವದು ವಾಸುದೇವನೆ ಎನ್ನ
ಆಶೆಯ ಮೊದಲಾದ ಮೋಸಗಳಿಗೀಮನ
ಸೂಸಿ ಪೋಗದಂತೆ ಶ್ರೀಶನೆ ನೀ ಮಾಡೊ
ಏಸೇಸು ಕಾಲ ವಿಶೇಷನಾಗಿ ನಿನ್ನ
ಲೇಸಾಗಿ ಪೂಜೆ ನೇಮಿಸಿ ಮಾಡಿದರೆ
ಭೂಸುರರಿಂದ ಉಪದೇಶ ಕೈಕೊಂಡು
ಸಾಸಿರ ಸಾಸಿರ ವತ್ಸರ ತಪ ಮಾಡೆ ದೇಶ
ದೇಶದೊಳಿದ್ದ ಕ್ಷೇತ್ರ ತೀರ್ಥಗಳೊ
ಮೀಸಲು ಮನದಿಂದ ಶೇಷನೇರಿಸಿದವಗೆ
ಈಶ ನಿನ್ನಂಘ್ರಿಯ ಶಾಶ್ವತ ಭಜಿಸುವ
ದಾಸರು ತೋರುವ ರಹಸ್ಯವಲ್ಲವೊ ಮಾಯಾ
ನಾಶರಹಿತ ನಮ್ಮ ವೇಣುಗೋಪಾಲನೆ
ಈಸು ಬಗೆಗೆ ನಿನ್ನ ವಾಸವೊ ಜಗದೊಳು ೨

## ತ್ರಿವಿಡಿತಾಳ

ವನಜಾಕ್ಷ ನಿನ್ನ ಶ್ರವಣವನು ಕೇಳಿರಬೇಕು
ಮನನಾದಿಗಳು ಬಹುದಿನ ಮಾಡಿ ಇರಬೇಕು
ಧ್ಯಾನಾದಿಗಳು ಬಲುದಿನ ಮಾಡಿ ಇದ್ದ
ಮನುಜನಲ್ಲದೆ ನಿನ್ನ ದಾಸರ ತಿಳಿಯನಯ್ಯಾ

ವನಜಾಂಡದೊಡೆಯ ಸಿರಿ ವೇಣುಗೋಪಾಲನೆ
ಇನಿತು ಮಾಡಿಸದೆ ನಿನ್ನ ನೆನೆವರ ತೋರಿಸಯ್ಯಾ ೩

## ಅಟ್ಟತಾಳ

ಲೋಕರುದ್ಧಾರಕ್ಕೆ ದಾಸರ ನೇಮಿಸುವೆ
ಲೋಕರುದ್ಧಾರಾರ್ಥ ಲೀಲೆಯ ತೋರುವೆ
ಲೋಕರುದ್ಧಾರಕ್ಕೆ ಮಹಿಮೆಗಳನು
ಅನೇಕವಾಗಿ ತಿಳಿದು ಸಾಕುವೆ ಭಕುತರ
ಏಕಚಿತ್ತದಿ ನಂಬಿ ಲೋಕದಿ ಇರುವರ
ಜೋಕೆ ಮಾಡದೇವೆ ಬಿಡದೆ ಬೇಕೆಂದು ಪ್ರತಿದಿನ
ವಾಕೇಶನಯ್ಯ ಸಿರಿ ವೇಣುಗೋಪಾಲನೆ
ಕಾಕುಗೊಳಿಸದೆ ಸಲಹೊ ನಾಕೇಶನೊಡೆಯಾ ೩

## ಆದಿತಾಳ

ಸಕಲ ಜಗದೊಳಗೆಯಿದ್ದು ಯುಕುತಿಯಿಂದ ಮಾಡಿಸುವೆ
ಲಕುಮಿ ಮೊದಲಾದವರಿಗೆ ಅತಿಶಯವೇನೊ ನೀನು
ಭಕ್ತರೆಂದೆ ನೀ ಬಿಡದೆ ತುತಿಪರು ಸರ್ವದ
ಮುಕುತಿಯಪೇಕ್ಷದಿಂದ ಸಕತರಾಗಿಪ್ಪರನೆ
ಮುಕುತನು ನಿತ್ಯ ಸಿರಿ ಮತ್ತೆ ನೀ ಕೊಡುವದೇನು
ವಿಕಸಿತನಾಗಿ ನಂದಾ ಉಕುತದೆನಬೇಕು
ರಿಕುತವಲ್ಲವೋ ಲಕುಮಿ ಬಹುಪೂರ್ಣ ಮತ್ತಳಯ್ಯಾ
ಮಿಕುಣದ ಕಾರ್ಯವೇನು ತೊರೆವದಿಲ್ಲವೊ ಇನ್ನು
ಶಕುತ ಮುಕುತಿ ನಿನ್ನಲ್ಲಿ ಚಿತ್ರ ಒಂದುಂಟು ದೇವಾ
ವಿಕಸಿತನಯ್ಯಾ ನಿನ್ನ ನಿನ್ನ ಪಕ್ಷದಲ್ಲಿದ್ದು ಧ್ಯಾನಾ _
ಸಕತಳಾಗಿ ಅತಿ ಆಶ್ಚರ್ಯವ ಕಂಡು ದೇವ
ನಿಕರಕ್ಕೆ ಬೋಧಿಸುತ್ತ ಕಡೆಗಾಣಲಾರಳು
ಶಕಟ ಭಂಜನ ವೇಣುಗೋಪಾಲರೇಯನೆ
ಸಿಖರವೊ ನಿನ್ನ ಭಕುತರು ಸೇವಿಸುವ ಸಾಧನ ೫

**ಜತೆ**

ಸಿರಿಗೆ ದುರ್ಲಭ ಮಹಿಮಾ ವೇಣುಗೋಪಾಲ ಸು–
ಸ್ಥಿರ ಮಾಡು ನಿನ್ನ ಸೇವೆಯಲಿ ಎನ್ನಯ ಮನಾ ॥

## ೭೫

**ಧ್ರುವತಾಳ**

ಕರುಣಿಸುವದು ನೀನು ಶರಣರ ಪರಿಪಾಲಾ
ಪರಣ ಶಯನ ಜಗದಾವರಣ ವ್ಯಾಪುತ ದೇವಾ
ತರುಣಿ ಲಕುಮಿ ಸಹಿತಾ ಭರಣ ಸಕಲವಿಟ್ಟು
ನಿರ್ವಾಣ(ರು)ಣದಲ್ಲಿ ಪ್ರಜೆ ನಿರುತ ಕೈಕೊಂಬ ಚಲುವ
ಸ್ಮರಣೆ ಮಾಡಲು ವೇಗ ವರಣ ವರಣದ ವಸನ
ತರುಣಿ ದ್ರೌಪದಿಗಿತ್ತು ತುತಿಸಿಕೊಂಡೆ ಅಯ್ಯಾ
ಮರಣ ಭಯಕೆ ನಿನ್ನ ಮನದಿಂದ ಕೊಂಡಾಡಲು
ಗರುಡನ್ನೇರದೆ ಬಂದು ಕರಿಯನ್ನುದ್ಧರಿಸಿದೆ
ತರುಣಾವಸ್ಥಿಯಲಿ ಧ್ರುವನು ನೆನಿಯೆ ಗಲ್ಲಕೆ ಕಂಬು–
ಸ್ಫುರಣ ಬುದ್ಧಿಗೋಸುಗ ವತ್ತಿ ಪೊಗಳಿಸಿಕೊಂಡೆ
ವರಣಿಸಬಲ್ಲರಾರು ಸಿರಿ ಅರಸನೆ ನಿನ್ನ
ಹರಣದೊಳಗೆ ಒಲಿದು ಪೊಳೆಯೊ ನಿನ್ನಿಂದ ನೀನೆ
ಧರುಣಿಯೊಳಗೆ ನಿನಗೆ ಸರಿಯು ಮತ್ತುಂಟೆ ದೇವಾ
ಹರುಣಾಕ್ಷಿಯರ ನಾಳೆ ಬ್ರಹ್ಮಚಾರಿ ಎಂದೆನಿಪೆ
ವರುಣ ಲೋಕಕೆ ಪೋಗಿ ತಂದೆಯ ಬಿಡಿಸಿ ತಂದೆ
ಅರುಣೋದಯದಲ್ಲಿ ಪಾರಣೆ ಮಾಡಿಸಿ ಕಾಯದೆ
ಪೂರಣ ಆನಂದನಾಗಿ ಪೊರದೆ ಭಕ್ತರನ್ನೆಲ್ಲಾ–
ಚರಣೆ ಮಾಡಲು ಎನಗೆ ಸ್ಥಿರವಾದ ಮತಿಯನೀಯೊ
ವರುಣ ಶಬ್ದ ವಾಚ್ಯನೆ ವೇಣುಗೋಪಾಲರೇಯಾ
ಸರಿ ಬಂದ ಪರಿಯ ಮಾಡಿ ಭವ ದಾಟಿಸೋ ಎನ್ನ ೧

### ಮಟ್ಟತಾಳ

ಸಕಲ ದೇವೋತ್ತಮನೆ ಸಕಲರ ಕಾಮಾನೆ
ಸಕಲ ಜಗದಿ ಭರಿತ ಸಕಲ ಗುಣಪೂರ್ಣ
ಸಕಲರಿಗೆ ಸೌಖ್ಯ ಖತಿಗಳ ಕೊಡುವ
ಪತಿದೈವನು ನೀನು ಸಕಲ ಕಾಲಗಳಲ್ಲಿ
ಸಕಲ ಬ್ರಹ್ಮಾದಿಗಳು ಸಾಕಲ್ಯದಿ ನಿನ್ನ
ಕೃತಿಗಳು ಬಲ್ಲರೆ ಅದ್ಭುತ ಚರಿತಾ
ಸಕಲ ಭಕ್ತರಂತೆ ಬೇಡೆನೊ ನಾ ನಿನ್ನ
ಪ್ರಕಟವಾಗಿ ವೇಣುಗೋಪಾಲರೇಯಾ
ಸಕಲವು ಚಿತ ದುರಿತ ನಿಕರವ ಪರಿಹರಿಸಿ
ಹಕಲಗೊಳಿಸದೆನ್ನ ಸಕಲ ಭಕುತನೆನಿಸೊ ೨

### ರೂಪಕತಾಳ

ನಿರುತ ಸಜ್ಜನ ಸೇವೆ ಭರಿತವಾಗಲಿ ದೇಹ
ತ್ವರಿತ ಬೀಳುವ ವಿಷಯ ಮರಿಸಿ ಬಿಡುವದು ಹರಿಯೆ
ಶರಧಿ ತೆರೆಯಂದದಿ ಬರುವ ಕ್ಲೇಶಕೆ ಜ-
ರ್ಝರಿತವಾಗಿ ಎನ್ನ ತನುವು ನಡಗುತಿದೆ
ನರಹರಿ ನರಕಾರಿ ಪುರಹರಾದಿ ಪಾಲಾ
ಮುರಹರ ಮುಕ್ಕುಂದ ತರಿವದು ದುರ್ವಿಷಯ
ಹಿರಿದಾಗಿ ಅಜಮಿಳನು ಕರದ ಮಾತುರದಿಂದು-
ದ್ಧರಿಸಿದೆ ವೇಗದಿ ಪರಮ ಕರುಣಿಯೋ ನೀನು
ಹರಲಾಪೆ ಜಗದೊಳು ಇರುವೆ ವ್ಯಾಪುತನಾಗಿ
ಅರವಿಂದಾಲಯಳಾದ ಲಕುಮಿ ಸಹಿತ
ಸರುವರ ಸರಿ ನಾನು ಅಲ್ಲವೊ ಅವರ ದಾ-
ಸರ ದಾಸ ಅವರ ಪಾದದ ಸೇವಿಯಲ್ಲಿರಿಸೊ
ಸರಿಯಲೀಸದೆ ಮನವ ಸರಳು ಮಾಡೆಲೊ ದೇವ
ದೊರೆಯಲ್ಲವೆ ನೀನು ಪರಮ ಮುಖ್ಯದಿಂದ

ಶರಣರಾದಿಗಳ ಪಾಲಾ ವೇಣುಗೋಪಾಲ ನೀ
ಮರಿಯದೆನ್ನನು ಭಕ್ತ ಪುರದೊಳಿಟ್ಟು ಪೊರೆಯೊ ೩

### ಝಂಪಿತಾಳ

ಸತತ ಸಂಸಾರದೊಳಗಾಸಕ್ತನಾಗಿದ್ದು
ಪಥಿಸಿ ಧರೆಯನು ಗುರಿ ನಿನ್ನ ಮಾಡಿ
ಇತರ ಶಬ್ದಗಳಲ್ಲಿ ರತನಾಗಿದ್ದರೆ ಸರಿ
ಪ್ರತಿನಾಮ ನಿನ್ನವೂ ಎನ್ನುತಾ
ಮತಿಹೀನರಲ್ಲಿ ಅಮಿತವಾದ ಮಾತು ಅನು –
ಮತವಾದವರ ಪ್ರೀತಿ ಬಡಿಸಿ
ವ್ರತ ಭ್ರಷ್ಟನಿವನೆಂದು ತೋರಿ ದುರುಳರಿಗೊಂದು
ಪ್ರತಿವಾಕ್ಯ ನುಡಿಯದಲೆ ಸುಮ್ಮನಿದ್ದು
ತುತಿಯ ಬೈಗಳು ಎರಡು ಸಮವೆಂದರಿಯಲವಗೆ
ಶೃತುವ್ಯಾಕೊ ಮಾಡೆಲೊ ಮತ್ತೆ ಅವನು
ರತಿಪತಿಯ ಜನಕ ಸಿರಿ ವೇಣುಗೋಪಾಲನೆ
ರುತು[1] (ಋತು)[2] ಮಾಡು ಎನ್ನ ಮನದಲ್ಲಿ ವಿಶ್ರುತವಿದು ೪

### ತ್ರಿವಿಡಿತಾಳ

ಇನಿತು ಮಾಡಿಸೆ ನಿನ್ನ ಘನತೆ ಅತಿಶಯವಯ್ಯಾ
ದಿನಮಣಿ ತೇಜ ಯಜನಾದಿಗಳು ದೂರಾ
ದಿನ ದಿನದಲಿ ಎನ್ನ ತನುವೆಂಬ ಮಂದಿರದಿ
ಮಿನಗುವದು ಬಂದು ಕನಿಕರದಿಂದಲಿ
ವನಜನಾಭನೆ ನೀನು ನೆನೆಸಲು ಸಲುಹಿದೆ
ಕನಕನ್ನ ಕುವರನ್ನ ಕರುಣದಿಂದ
ಹನುಮ ವಂದಿತ ಚರಣ ವೇಣುಗೋಪಾಲ
ಪಾವನ ಮಾಡು ಎನ್ನ ಇನ್ನವರ ಸೇವಕನೆಂದು ೫

---

೧. ಝಂಕರಿಸು, ೨. (ಋತು) = ಸತ್ಯ

**ಅಟ್ಟತಾಳ**

ನಿನ್ನವರೊಳು ಇಡು ಬನ್ನ ಬಡಲಾರೆನೊ
ಇನ್ನು ವಿಷಯ ಬಾಧೆಯನ್ನು ಬಿಡಿಸಿ ದೇವ
ಕುನ್ನಿಯಂದದಿ ದುರುಳರನ್ನು ಆಶ್ರೈಸಲು
ಅನ್ನವ ಕೊಡುವರೇನೊ ನಿನ್ನ ಹೊರತು ಬೇರೆ
ಧನ್ಯವಾದ ಬುಧರನ್ನು ಪೊಂದಿಸಿ ವೇಗ
ಘನ್ನ ಭವರೋಗವನ್ನು ಮಾಣಿಸಿ ಕಾಯೊ
ಹೆಣ್ಣು ಹೊನ್ನು ಮಣ್ಣಾಶೆಯಂಬೊದು ಎನ್ನ
ಸುಣ್ಣದ ಕಲ್ಲಿನಂತೆ ಸುಡುವುದೊ ಪ್ರತಿದಿನ
ಚನ್ನ ಮೂರುತಿ ಸಿರಿ ವೇಣುಗೋಪಾಲನೆ
ಎನ್ನ ದೇಹದಿ ಸೇವೆಯನ್ನು ಕೈಕೊಳ್ಳೊ ಧೊರೆಯೆ ೬

**ಏಕತಾಳ**

ಶಿರ ನಿನ್ನ ಚರಣಕ್ಕೆ ಎರಗುವಂತೆ ಮಾಡೊ
ಕರ ನಿನ್ನ ಪೂಜೆ ವಿಸ್ತರವಾಗಿ ಮಾಡಲಿನ್ನು
ಚರಿಸಲಿ ಪಾದಗಳು ಪುಣ್ಯದೇಶಗಳಲಿ
ಹರಿ ನಿನ್ನ ನಾಮ ಉಚ್ಚರಿಸಲಿ ಆನನವು
ವರನಾಶಿಕ ಕರ್ನಾ ಸಿರಿ ಅರಸನೆ ನಿನ-
ವರ ಕಥೆ ನಿರ್ಮೂಲ್ಯಗಳ ಸವಿಯಲಿ ಅನುದಿನ
ಪರಮ ಪುರುಷ ಮಿಕ್ಕ ಇರುವ ಇಂದ್ರಿಯಗಳೆಲ್ಲ
ಸರಿಯದೆ ನಿನ್ನ ಸೇವೆಯನು ಪೊಂದಿದರಲಯ್ಯಾ
ಸರಸಿಜ ದಳ ನಯನ ವೇಣುಗೋಪಾಲರೇಯಾ
ಇರಳು ಹಗಲು ನಿನ್ನುಚ್ಚರಿಸುವಂತೆ ಮಾಡೊ . ೭

**ಜತೆ**

ಭಕ್ತವತ್ಸಲ ವೇಣುಗೋಪಾಲ ನಿನಗೆ
ಯುಕ್ತವಾದದು ಮಾಡೊ ಹಸ್ತ ಮುಗುದೆ ನಾನು ॥

## ೭೬

### ಧ್ರುವತಾಳ

ತಡವ್ಯಾಕೆ ತಿಳಿ ಮನವೆ ಒಡೆಯ ವಿಠಲನ ಮಹಿಮೆ
ದೃಢವಾಗಿ ಬುದ್ಧಿಯಿಂದ ಬಿಡದೆ ಸಂಚರಿಸು
ಜಡವೆಲ್ಲ (ಜಡವಲ್ಲ) ಹರಿಯ ಮಹಿಮೆ ನುಡಿಯಲಾ ಹರಿ ನಾಮಾ
ಪೊಡವಿ ಪ್ರಾಣಿಗಳ ಒಡಲೊಳಿದ್ದು ನಡೆದು ನಡೆಸುವನು
ನುಡಿದು ನುಡಿಸುವನು ಪಿಡಿದು ಪಿಡಿಸುವನು ತಡೆದು ತಡೆಸುವನು
ಜಡಜ ಸಂಭವ ಸಿರಿ ಮೊದಲಾದವರಿಗೆಲ್ಲ
ತುಡುಕಿ ಒಂದಾದರು ಎವೆ ಇಡಲು ಸ್ವಾತಂತ್ರವಿಲ್ಲ
ಒಡವರಾಧಾರಿ ವೇಣುಗೋಪಾಲ ವಿಠ್ಠಲನು
ಸಡಗರದ ಲೀಲೆ ಸಕಲ ಕಾಲದಿ ಮಾಳ್ಪ ೧

### ಮಟ್ಟತಾಳ

ಇದೆ ಜಪವೆಂದೆನ್ನು ಇದೆ ತಪವೆಂದೆನ್ನು
ಇದು ತಿಳಿದು ಸರ್ವ ಸಾಧನವೆಂದೆನ್ನು
ಅದು ಭೂತ ಚರಿತ ಅಗಾಧ ಮಹಿಮ
ಸದಮಲಾನಂದನ್ನ ಹೃದಯದೊಳಗೆ ಪಥವಿ–
ಡಿದು ಮೌಳಿಯ ಪರ್ಯಂತದಲ್ಲಿ
ಪದುಮಾಷ್ಟ ದಳದೊಳಗೆ ಚಿಂತಿಸಿ ಸತತ
ಬುಧ ಜನ ಸಂಗತಿಯ ಪಡೆದು ಪಾಪವ ಕಳೆದು
ಸುಧೆ ಉಂಡ ತೆರದಿ ಸುಮುಖದಿ ಸಂಚರಿಸು
ಮಧು ವೈರಿ ವೇಣುಗೋಪಾಲ ವಿಠ್ಠಲನ್ನ
ಬದಿ ದೂರವೆರಡು ಸ್ಥಳದಲ್ಲಿ ಧೇನಿಸುತ ೨

### ತ್ರಿವಿಡಿತಾಳ

ಕೋಪ ನೀಗುವುದು ತಾಪ ನೀಗುವುದು

ಭೂಪರ ಸೇವಿಸಿ ತಾಪಸರನು ಸರಿಸು
ಅಪವರ್ಗ ದಾರಿ ರಾಪಾಗದಂತೆ ನೀ
ಖ್ಯಾಪಿ ಖ್ಯಾಪಿಗೆ ತಿಳಿದು ಪಾಪದೂರನಾಗು
ರೂಪ ಅಪರೂಪದಲಿ ಶ್ರೀಪತಿಯ ಮೂರುತಿ
ಆಪಾದ ಶಿರಸದಿ ಅವಯವ ಸಹಿತ ಸ್ವ
ರೂಪವ ಇರನೋಡಿ ಅಲ್ಲಲ್ಲೆ ಸಿರಿ ವಾಯು
ಆ ಪುರವೈರಿ ಅಮರೇಶ ಮೊದಲಾದ
ತಾಪಸರಿಂದಲಿ ಸೇವೆಯ ಕೊಳುತಲಿ
ಶ್ರೀಪತಿ ವೇಣುಗೋಪಾಲ ವಿಠ್ಠಲನ್ನ ಚಿಂತಿಸು
ವ್ಯಾಪಾರ ಸಕಲ ಶ್ರೀಹರಿಯಾಧೀನವೆನ್ನು ೩

**ಅಟ್ಟತಾಳ**

ತನುವು ನಿನ್ನದೆನ್ನು ಮನವು ನಿನ್ನದೆನ್ನು
ವನಿತೆ ಮೊದಲಾದ ಸಕಲ ಸಂಪತ್ತು ಯಳ್ಳಿನಿತು
ಎನ್ನದಲ್ಲ ಯಾವತ್ತು ನಿನ್ನದು
ಕನಸು ಸುಷುಪ್ತಿ ಜಾಗರಾದಿಗಳಲ್ಲಿ
ಮಿನುಗುವ ಶುಭಂಗಳು ಏನೇನು ಆದರು
ಘನ ಮಹಿಮನೆ ನಿನ್ನವೆನ್ನು ಮತ್ತೆ ಎನ್ನು
ಅನಿಮಿತ್ಯ ಬಂಧು ವೇಣುಗೋಪಾಲ ವಿಠ್ಠಲನು
ದಿನ ದಿನದಲ್ಲಿ ಸುಖ ವನಧಿ ಸೇರಿಸುವನು ೪

**ಆದಿತಾಳ**

ನಾನು ನಿನ್ನಾಧೀನ ನಾನಾವಿಧ ಶ್ರೀಯಂಗಳು
ನೀನು ನೇಮಿಸಿದಂತೆ ಮಾಡುವೆನೊ ಎಂದು
ಮಾನಸದಿ ಕ್ರಿಯಗಳಿಗೆ ನೀನೆ ಪ್ರೇರಕನೊ ಸ್ವಾಮಿ
ದಾನವ ದೇವತೆಗಳ ಹೊರಗೆ ಒಳಗೆ ಇದ್ದು
ಮಾಣದೆನ್ನ ಮಾಜದೆನ್ನ ಪ್ರಾಣ ಪ್ರೇರಕ ನೀ ಎಂದು
ಮೇಣು ಚಿಂತೆಯ ಮಾಡಿ ಭವದ ಕಾನನವ ದಾಟುವದು

ವಾಣಿಯರಸನೊಡಿಯಾ ವೇಣುಗೋಪಾಲ ವಿಠ್ಠಲನು
ಆನು ನಿನ್ನಾಧೀನನೆಂಬ ಜ್ಞಾನಪೂರ್ಣನ ಮಾಡೆ ಇನ್ನು ಎನ್ನ ೫

## ಜತೆ

ಬಾಹಿರಂತರ ಭರಿತಾ ವೇಣುಗೋಪಾಲ ವಿಠ್ಠಲನ್ನ
ಸ್ನೇಹದಿಂದಲಿ ನೆನೆದು ಸುಖಿಸುವದು ॥

## ೭೭

## ಧ್ರುವತಾಳ

ಚಿಂತಿಸದಿರು ಮನವೆ ಚಿತ್ತ ಚಂಚಲನಾಗಿ
ಸಂತೋಷವನು ತಾಳು ಸತತ ತಿಳಿದು
ಅಂತುಗಾಣದ ಕರ್ಮ ಅತಿಶಯವೆಂದು ತಿಳಿದು
ಭ್ರಾಂತನಾಗಲು ಬೇಡ ಬಲು ಮೋಹದಿ
ಸಂತರ ವಚನಕೆ ಸಂಶಯವಾಗದೆ ನಿ-
ಶ್ಚಿಂತನಾಗುವದು ನಗುತ ನೀನು
ಮುಂಚಿನ ಪುಣ್ಯ ನಿನಗೆ ಮುಂಕೊಂಡು ಎದುರಲಿ
ನಿಂತಿಹದದರಿಂದ ನಿರುಪಾಧಿಕ
ಸಂತತ ಗುರುಗಳು ಸಮ್ಯಗರಾಗಿ ನಿನಗೆ
ಕಂತುಪಿತನ ಮಹಿನೆ ತಿಳಿಸುವರೊ
ಎಂತು ಯಳ್ಳಿನಿತಾದರು ಹೃದಯದೊಳಗಿದ್ದೆ ನಿ-
ಪಂಥನು ಸರಿಯಾಗು ಗುರುವಾಕ್ಯದಿ
ಜಂತು ಜಡಗಳಲಿ ಶ್ರೀಕಾಂತ ಒಳ ಹೊರಗಿದ್ದು
ತಂತು ನಡಿಸುವ ತನ್ನ ತೋರಗೊಡದೆ
ಅಂತರ್ಯಾಮಿ ಪರಾಖಿಳ ವ್ಯಾಪಾರ ಮಾಡೆ
ಎಂತು ನಿನಗೆ ಸುಖ ಯೋಚಿಸಿಕೊ
ರಂತಾಗಗೊಡದಿರು ರಹಸ್ಯವೆಂದೀ ಮಾತು

ಅಂತಃಕರುಣನು ಭವದಿ ಭಜಿಸು ಹರಿಯ
ದಂತಿವರದ ನಮ್ಮ ವೇಣುಗೋಪಾಲ ವಿಠ್ಠಲ
ಎಂತಾದರೇನು ತನ್ನ ಬಳಿಯನೀವಾ ೧

## ಮಟ್ಟತಾಳ

ಜ್ಞಾನವಂತನಾಗು ಜ್ಞಾನಿಗಳಿಗೆ ಬಾಗು
ಜ್ಞಾನ ಕರ್ಮವನೆಸಗು
ಜ್ಞಾನ ಒಳಗಿನಿಂದ ಜ್ಞಾನ ತಮವ ನೀಗು
ಜ್ಞಾನವೇ ಸಕಲ ಸಾಧನಕ್ಕೆ ಪ್ರಧಾನ
ಜ್ಞಾನವೇ ಮುಖ್ಯ ಮುಕುತಿಗೆ ಸೋಪಾನ
ಜ್ಞಾನವೇ ಭವ ಪಾಶ ಮೋಚನ ಮಾಡುವದು
ಜ್ಞಾನವೇ ಹರಿ ಮೂರ್ತಿ ಸೂಚನೆ ಮಾಡುವದು
ಜ್ಞಾನಕ್ಕಿಂತಲಿ ಮತ್ತೆ ಏನತ್ಯಧಿಕವಿಲ್ಲ
ಜ್ಞಾನಕ್ಕಿಂತಲಿ ಸುಖ ಯೇನು ತೋರುವದಿಲ್ಲ
ಜ್ಞಾನಹೀನರ ಸಂಗ ನೀನು ಮರಿಯೊ ಸು-
ಜ್ಞಾನ ಜ್ಞಾನವಂತರ ಸಂಗ ನೀನು ಪಡಿಯೊ ಮಹ
ಜ್ಞಾನವಂತರೊಡಿಯ ವೇಣುಗೋಪಾಲ ವಿಠ್ಠಲ
ನೀನೆ ನೀನೆ ಎಂದು ನಲಿನಲಿದಾಡುವದೊ ೨

## ತ್ರಿವಿಡಿತಾಳ

ಹರಿ ಇಚ್ಛೆ ಜಗದೊಳು ಹರಿಯೆ ಸಕಲ ತಾವು
ನರರಿಗೆ ತಿಳಿಯಗೊಡದೆ ಇರುತಿಪ್ಪದೊ
ಹರಿಭಕ್ತರಿದರೊಳು ಹರಿ ಪ್ರೇರಣೆಯಿಂದ
ಅರುವರು ನರಹರಿಯ ಲೀಲೆಯನ್ನು
ಪರಮ ಕರುಣದಿಂದ ಗುರುಗಳು ನಿನಗೊಂದು
ಗುರುತಿನ ವಾಕ್ಯವ ತೋರಿರಲು
ಅರಿತುಕೋ ಅದರೊಳು ಸಕಲ ಸಾಧನವುಂಟು
ಗುರುಗಳು ನುಡಿದ ವಚನ ದೃಢವಾಗಿ

ಅರಮರೆ ಮಾಡದೆ ಆದರದಿ ಭಕುತಿಯ
ಗುರು ಹಿರಿಯರಿಗೆರಗಿ ಹರಿಲೀಲೆಯಾ
ಗುರುತಿಟ್ಟು ಮನ ಸರ್ವ ಇಂದ್ರಿಯಗಳೊಳು
ಬೆರಸಿದರೆ ಮುಖ್ಯ ಸಾಧನದ ಶಿ-
ಖರ ಮುಖ್ಯ ಎಂದರಿಯೊ ಇ-
ತರ ಸಂಶಯ ಸಾಕು ಒಂದು ಹರಿಪಾದದಲ್ಲಿ ಮನವೆರಕ ಮಾಡು
ಪರಮಾಣು ಜೀವರೊಳು ನಾರಿ ಸಿರಿದೇವಿ ಸಹಿತದಿ
ಇರುತಿದ್ದು ಹರಿ ಸಕಲ ಕಾರ್ಯಗಳನ್ನು
ಹೊರ ಹೊರಗೆ ಇರುತಿಪ್ಪ ಅಧಿಷ್ಠಾನಾದಿ ಸಕಲ
ಸರಸಿಜೋದ್ಭವಾದಿಗಳ ಮನೆಯನು ಮಾಡಿ
ಹೊರಗೆ ಒಳಗೆ ತಾನೆ ಯಾವತ್ತು ವ್ಯಾಪಿಸಿ
ಹರುಷದಿಂದಲಿ ಸತಿಯಳ ವೊಡಗೂಡಿ
ಸರಿಸಮಾನರು ಒಬ್ಬರಿಲ್ಲದು ದೇವ ತನ್ನ-
ವರ ಸಂಕಲ್ಪಾನಾದಿ ಸತ್ಯ ಮಾಳ್ಪಾ
ನಿರುತ ನೀನು ಕಾಂಬ ಯಾವತ್ತು ಆಕಾರ
ಪರಮಾಣಾತ್ಮಕ ಕಾರ್ಯ ಕಾರಣದ
ಅರಿಯೊ ನೀ ಅದುಭೂತ ವ್ಯಾಪ್ತರಾಗಿರುವರು
ಹರಿ ಸಿರಿ ವಿರಿಂಚಿ ಮುಖ್ಯರೆಲ್ಲ
ಪರಮ ಪುರುಷ ಹರಿಸೇವೆ ಮಾಡುತ ಅಲ್ಲಿ
ಇರುವರು ತದ್ವರ್ಣ ತದಾಕಾರದಿ
ಭರದಿಂದ ಜಡದೊಳು ಶಬ್ದ ಪುಟ್ಟಲು ಅದು
ಸಾರುವರಹುದಹುದು ಹರಿ ಪ್ರೇರಣೆಯ
ಹರಿ ಶಬ್ದ ವಾಚ್ಯಾ ಹರಿ ನಿಯಾಮಕಾ
ಹರಿ ಶಬ್ದ ಮಾಡೆ ಸರ್ವರು ಮಾಳ್ಪರು
ಹರಿ ಸುಮ್ಮನಿರೆ ಒಂದು ಆಗದು ನುಡಿ ನಡೆ
ಹರಿಯೆ ಈ ಜಗಕೆ ಕಾರಣ ಮುಖ್ಯದಿ
ಸುರರು ಸಾಂಶರು ಹರಿಯು ಅಭಿನ್ನನೊ
ಪೂರ್ಣ ದ್ರವ್ಯವಂತೆ ಎಲ್ಲಿದ್ದರು
ಧರೆಯೊಳು ವಸ್ತ್ರಾಗ್ರಾಹದ ಸಮ್ಮೋಹಗಳೊಳು

ಬೆರಿಸಿ ವ್ಯಾಪಿಸಿದಂತ ಹರಿ ವ್ಯಾಪ್ತಿಯೋ
ಪರಮ ಅದ್ಭುತ ಮಹಿಮ ಪರಮ ಆಶ್ಚರ್ಯಚರಿತ
ಪರಬೊಮ್ಮ ಪರಮೂರ್ತಿ ಪರಮಾತ್ಮನಾ
ಅರಕ್ಷಣ ಮರಿಯದೆ ಸ್ಮರಿಸುವದು ನೀನು
ಕುರುಹ ಕಾಣುವಿ ಇದರಿಂದ ವೇಗ
ಪರಮ ಮುಖ್ಯ ಪ್ರಾಣ ಜಗಕೆ ವೇಣುಗೋಪಾಲ ವಿಠ್ಠಲ
ಅರಸಿನ ಲೀಲೆ ಅರಿತು ಸುಖಿಸುವದು ೩

## ಅಟ್ಟತಾಳ

ದಾನ ಧರ್ಮ ಪರ ಉಪಕಾರ ಯಾಗಾದಿ
ಏನೇನು ಕರ್ಮ ಸಫಲವಾಗಲು ಮತ್ತೆ
ಜ್ಞಾನಿಗಳ ಕರುಣ ಸಂದಿಸುವದು ಮಹಾ ಹರಿ ವ್ಯಾಪಾರ
ಕಾಣಿಸಿ ಸುಖ ಸಿಂಧುವೆ ಸೇರುವನು ಸುರ
ಶ್ರೇಣಿಯ ಕರುಣ ಸೇವಾರ್ಕದಿಂದ ಹಲವು
ಬಗೆ ಯೋಚಿಸಿ ಸತತ ಹೀನನಾಗದಿರು ಹರಿಧ್ಯಾನಕೆ
ದಾನವಾರಿ ವೇಣುಗೋಪಾಲ ವಿಠ್ಠಲ
ತಾನು ಒಲಿದು ನಿನ್ನ ಮಾನಸದಲ್ಲಿ ಪೊಳೆವಾ ೪

## ಆದಿತಾಳ

ಹಸಿದವನಿಗೆ ಷಡುರಸನ್ನ ದೊರಕಿದಂತೆ
ತೃಷಿಯ ಪೀಡಿತಗೆ ಪೀಯೂಷ ಮಡು ಸಿಕ್ಕಿದಂತೆ
ವಸನ ಹೀನಗೆ ವಜ್ರ ಹೊಸ ಕವಚ ದೊರೆತಂತೆ
ಬಿಸಲಿಂದಾರ್ತನ್ನ ವನಕೆ ವಸಂತವೈದಂತೆ
ಪುಸಿಯಲ್ಲ ಕೇಳು ಮನವೆ ಹಸಗೆಟ್ಟು ಪೋಪೆನಗೆ
ಬಿಸಜ ಮಿತ್ರನ ಏಕರಸ ಸಿಕ್ಕಿದದರಿಂದ
ನಸುನಗೆ ಮೊಗ ವೇಣುಗೋಪಾಲ ವಿಠ್ಠಲನ್ನ
ಕುಶಲಕ್ಕೆ ಮೆಚ್ಚಿ ಪಾದ ಬಿಸಜಕ್ಕೆ ಭೃಂಗನಾಗೊ ೫

**ಜತೆ**

ಆಧೀನ ತಿಳಿವದಕ್ಕಿಂತ ಅಧಿಕ ಸಾಧನವಿಲ್ಲ
ಒದಗಿ ಸ್ಮರಿಸು ವೇಣುಗೋಪಾಲ ವಿಠ್ಠಲನ ॥

## ೭೮

## ಸೃಷ್ಟಿಕ್ರಿಯಾ ಸುಳಾದಿ

**ಝಂಪೆತಾಳ**

ಅಷ್ಟ ಮಹಾ ಮಂತ್ರಗಳು ನಿಷ್ಠಿಯಿಂದಲಿ ಕ್ಷುತು
ತೃಷ್ಣಿಗಳ ಕಟ್ಟಿ ಸಂತತ ಮಾಡಲು
ಸ್ಪಷ್ಟವಾಗುವದೇನೊ ನಿನಗೆ ಜ್ಞಾನವು ಬಲು
ಕಷ್ಟವಲ್ಲದೆ ಬರಿದೆ ಮನುಜ ಕೇಳೊ
ದೃಷ್ಟಿಯೇನು ಮುಚ್ಚಿ ಪ್ರತಿಷ್ಠಿಯಲಿ ಅಂಗಗಳು
ಬೊಟ್ಟಿಲಿಂದಲಿ ಎಷ್ಟು ಮುಟ್ಟಲೇನು
ಬೆಟ್ಟವನು ಏರಿ ಬಿಸಲೊಳಗೆ ಬಳಲಿಸಿ ದೇಹ
ಪುಷ್ಟವನು ತೊರೆದರೆ ಇಷ್ಟವಾಹದೆ
ಅಷ್ಟ ಮದಗಳು ಮುರಿದು ನಷ್ಟ ವಿಷಯವ ಜರಿದು
ಅಷ್ಟು ಇಷ್ಟೆಂದು ಹರಿ ಕೊಟ್ಟದೆನ್ನದೆ
ಮುಟ್ಟಿ ಮನವನು ತಿಳಿಯೊ ಸೃಷ್ಟಿಯೆ ಮೊದಲಾದ
ಅಷ್ಟ ಕರ್ತು ಜಗಕೆ ವಿಷ್ಣು ಎಂದೂ
ಗಟ್ಟಿ ಭಕುತಿಯಿಂದ ವಿಠ್ಠಲನ ದಾಸರಲ್ಲಿ
ಇಟ್ಟ ಚಿತ್ತಗೆ ದುರಿತ ಮುಟ್ಟುವವೆ
ಸೃಷ್ಟೀಶ ನಮ್ಮ ಸಿರಿ ವೇಣುಗೋಪಾಲ ವರ
ಕೊಟ್ಟ ಬಳಿಕ ಕೆಡದು ಅನಂತ ಕಲ್ಪಕ್ಕು ೧

## ಮಟ್ಟತಾಳ

ಸಿರಿದೇವಿ ತುತಿಸಲು ಕೇಳಿ ಆತುಮ ಸೃಷ್ಟಿಯನು ಮಾಡಿದ
ತರುವಾಯ ಮೊತ್ತಾದಿ ದೇವರಿಗೆ ಇತ್ತು ಸೂಕ್ಷ್ಮ ದೇಹ ತೆತ್ತು
ವರಗಳ ತೆಗೆದು ವಿಸ್ತಾರ ಮಾಡಿ ಸ-
ರ್ವೋತ್ತಮ ಸಿರಿಹರಿ ಸೃಜಿಸಿದ ಬ್ರಹ್ಮಾಂಡ
ಹತ್ತು ನಾಲಕು ಲೋಕ ಸಪ್ತಸಾಗರ ಪ-
ರ್ವತ್ತವೆ ಮೊದಲಾದ ಜಡ ಸೃಷ್ಟಿಯನು ಮಾಡಿ
ತೆತ್ತಿಸರ ಸಕಲ ಸ್ಥಳಗಳ ಸೇರಿಸೆ
ಇತ್ತ ಸಕಲ ಜನಕೆ ಸ್ಥೂಲ ದೇಹವನಿತ್ತು
ತತ್ತ ಸ್ಥಾನದಲಿ ತಾನು ವ್ಯಾಪಿಸಿ ಸಕಲ
ಕರ್ತೃತ್ವ ಹರಿಯಾಗಿ ಸೃಜಿಸುವ ಸರ್ವರಿಗೆ
ಮಿತ್ರನು ತಾನಾಗಿ ಮನುಜನೊಳಗೆ ನಿಂದು
ಚಿತ್ರ ಪುತ್ರ ಗೃಹಾಮೋದ ಕ್ರಿಯಾ ಪೊತ್ತು
ಪತ್ನಿಗೆ ಸರ್ಪ ದ್ವಾರದಿ ಕಾರಣನೋ
ಸತ್ಯ ಸಂಕಲ್ಪ ಸಿರಿವೇಣು ಗೋಪಾಲನ್ನ
ಸತ್ಯ ಸೃಷ್ಟಿಯ ವಿವರಗಳನು ತಿಳಿದವ ಬಲು ಧನ್ಯಾ ೨

## ರೂಪಕತಾಳ

ಸಿರಿ ವಿರಿಂಚಿ ಮೊದಲಾದ ತೃಣಾಂತ ಈ
ಗಿರಿ ವನಧಿ ಲೋಕಗಳು ವನಜಜಾಂಡವ
ಹರಿ ತಾನು ವ್ಯಾಪಿಸಿ ಒಬ್ಬರಿಂದ ಒಬ್ಬರ ಪಾಲಿಸುವ
ನರ ನಾಡಿನೊಳಗಿದ್ದು ಕುಟುಂಬ ರಕ್ಷಿಸುವ
ಧರೆ ಪತಿಗಳೊಳಗಿದ್ದು ಪೋಷಿಸುವ
ನರ ತಿರಿಯಾದಿ ನಾನಾ ಜೀವರಾಸಿಗೆ ಪರಿ
ಪರಿ ಪರಿಯ ಗ್ರಾಸವ ಸೃಜಿಸಿಟ್ಟು ಅವರವರ
ಅರಿತು ಕಾಲಗಳನ್ನು ಮೀರಗೊಡದೆ ದೇವನು
ಮರಿಯಾಗಿ ಸರುವರನ ಪೊರೆವನು ಭಾರಕರ್ತಾ
ಇರೋದು ಇನ್ನಿದರೊಳು ಬಲು ಪರಿ ವಿಧ

ಅರಿತ ಮಾನವನಿಗೆ ಸರಿಯಿಲ್ಲ ಧರೆಯೊಳು
ಪರಮ ಕಾರುಣಿಕ ಸಿರಿ ವೇಣುಗೋಪಾಲ ವಿ–
ಸ್ತರ ಮಹಿಮನೆಂದು ಪೊಗಳುವನೆ ಸುಗುಣಾ ೩

## ತ್ರಿವಿಡಿತಾಳ

ತನ್ನ ಇಚ್ಛೆಯಲಿಂದ ಜಗವ ಪಾಲಿಸುವ
ತನ್ನ ಇಚ್ಛೆಯಲಿಂದ ಜಗವ ಸೃಜಿಸುವ
ತನ್ನ ಇಚ್ಛೆಯಲಿಂದ ಜಗವ ಕೆಡಿಸುವ ತೆರ
ವನ್ನು ಕೇಳಿ ಸಕಲ ಸಜ್ಜನರು ಅನಂತ ಜೀವರ
ಮುನ್ನ ಕಾರಣಗಳನ್ನು ಮಾಡಿ ಸಂಹರಿಸುವನು
ಇನ್ನು ತತ್ವಗಳನ್ನು ಸೂಕ್ಷ್ಮದಿಂದ
ಬಣ್ಣಾ ಬಣ್ಣಗಳ ಐದಿಸುವ ಹರಿ
ತನ್ನ ಭಕ್ತರಾದ ಅನಂತ ತಾತ್ವಿಕರ
ಚೆನ್ನಾಗಿ ಲಯವ ಐದಿಸುವ ಕಡೆಗೆ
ಇನಿತು ಸರ್ವರನ ಐದಿಸಿ ಆಮೇಲೆ
ತನ್ನ ಸುತನ ಚರ್ಮವನ್ನೆ ತೆಗೆದು
ಸಣ್ಣರಂತೆ ಶಿರಕೆ ಸುತ್ತಿ ಕುಣಿವನು
ತನ್ನಿತೆ ಸಿರಿ ವ್ಯಾಪಾರಾ ಬಿಡಿಸುವ
ಘನ್ನ ಸಂಸಾರದೊಳಗೆ ಆಗುವ ಲಯ ಕ್ರಿಯಾ
ಅನಂತ ವಿಧಗಳಿಗೆ ಹರಿ ಕಾರಣವೆನ್ನುತ ಸುಖಿಸುವ–
ಗೆನಿತೊ ಸುಖಗಳು ಬಣ್ಣಿಸಲಳವಲ್ಲ ಒಬ್ಬರಿಂದ
ಪನ್ನಗಾದ್ರಿ ನಿವಾಸ ವೇಣುಗೋಪಾಲ ಭವ
ವನ್ನೇ ದಾಟಿಸುವನು ಈ ವಿವರವನ್ನೇ ತಿಳಿಸಿ ೪

## ಝಂಪೆತಾಳ

ಕಾಲಾ ದ್ರವ್ಯಾದಿ ಸುಖ ದುಃಖ ಜೀವೇಶ ವಿ–
ಶಾಲ ಕ್ರಿಯದ ತೊಡರು ಈಡು ವಚನ
ಶೀಲ ದುಶ್ಶೀಲ ಕುಲಾಲ ಕ್ರಿಯಾದಿಗಳು

ಶ್ರೀಲೋಲನಿತ್ತರೆ ಜ್ಞಾನವಾಹದೋ
ಆ ಲಕುಮಿಯೊಳಗೆ ತಾನಿದ್ದು ಪ್ರಳಯಾಂತ
ಕಾಲ ಜ್ಞಾನವ ನಿತ್ತಾದಾರಂಭಿಸಿ
ಬಾಲಕಗೆ ಕ್ಷುಧಿಯಾಗೆ ಬಳಲುವಾ ಮಿತಕ್ಕೆ
ಆ ಲಿಂಗದೇಹದಿ ಮನೆಮಾಡಿ ಜೀವರಿಗೆ
ಕಾಲನಾಮಕ ಹರಿ ಯುಗಪ್ರವೃತ್ತ ಮೇಲು
ಕೆಳಗಾಗದಿರು ಇದರೊಳಗೆ ಇನ್ನು ಬಹು
ಸ್ಥೂಲ ಸೂಕ್ಷ್ಮಗಳು ಉಂಟು ಮತ್ತೆ
ಆಲದೆಲಿಯ ಶಾಯಿ ವೇಣುಗೋಪಾಲ ಶುಭ
ಆಲಯವ ಸೇರುವಗೆ ಭಕ್ತರಲಿ ತಿಳಿಸುವಾ ೫

## ಧ್ರುವತಾಳ

ಸ್ಮೃತಿ ರಹಿತಾದಲಿ ಕರ್ತು ನಾನಹುದಿನ್ನು
ಸತಿ ಪುತ್ರರಿಗೆ ಮಾತ್ರ ದಯ ಮಾಡುವ
ತೃತಿಯಾಕ್ಷವುಳ್ಳ ಸರ್ವ ಜೀವರಿಗೆ
ಮತಿ ತಿರೋಭೂತಾ ಮಾಡಿ ತಿರುಗಿಸುವ
ಕ್ಷಿತಿಯೊಳು ಊಚ ನೀಚ ಜೀವರಲ್ಲಿ ಸ್ಮೃತಿಗೆ
ಖತಿ ಸುಖಗಳು ಕೂಡಾ ನಾವಲ್ಲವೋ
ತೃತಿಯಾಗಳವಲ್ಲ ದಿತಿ ಸುತರು ಮೊದಲಿಲ್ಲ
ಕೃತು ಭುಜರಲ್ಲಾವಯ್ಯ ಸ್ವಾತಂತ್ರದಿ
ಪತಿತ ಪಾವನ ವೇಣುಗೋಪಾಲರೇಯಾ-
ದ್ಭುತ ಮಹಿಮನ ಲೀಲೆ ತಿಳಿಯೊ ಭಕ್ತಿಯ ಪಡೆಯೊ ೬

## ಅಟ್ಟತಾಳ

ಸಿರಿದೇವಿ ಮೊದಲಾಗಿ ತೃಣಜೀವ ಕಡೆಯಾಗಿ ಬ-
ಹಿರಂತರದಲ್ಲಿ ಪ್ರೇರಕ ನರಹರಿ
ಸರುವರ ಮನ ಮೊದಲಾದ ಇಂದ್ರಿಯಗಳೊಳು
ಬೆರೆತುಕೊಂಡಿಹನು ಹರಿ ತಾನು ಸ್ಥಿರವಕ್ಕು

ಪರಮ ಪುರುಷ ತಾನು ವೊಳಗೆ ನಿಯಾಮಕ
ಹೊರಗೆ ಅಧಿಷ್ಠಾನದಿಂದ ಉಪದೇಶ
ವರಾವರನರಿತು ಮಾಡುತಲಿ ವಿಹರಿಸುವ ವಿ–
ಹರಿಸುವ ನರನ ತಪ್ಪೇನಯ್ಯಾ ಇದರ ಮೇಲೆ ತಿಳಿ–
ದರೆ ಒಂದು ವ್ಯಾಪಾರ ಒಬ್ಬರ ವಶವಲ್ಲ
ಹರಿ ಸ್ವಾತಂತ್ರ ಸಿದ್ಧವೆನಿಸಿಕೊಂಬ
ಗರುವ ದೈವರ ದೇವ ವೇಣುಗೋಪಾಲ ವಿ–
ಸ್ತರ ಮಾಡಿ ತೋರುವ ಮತ್ತು ವಿಚಾರಿಸೆ ೭

## ಆದಿತಾಳ

ಖಗರಾಜ ವರದನ್ನ ಜಗದೊಳು ವ್ಯಾಪ್ತನ್ನ
ಅಗಣಿತ ಬಂಧ ಕ್ರಿಯಾ ವಿಗಡ ಮಾಡುವ ತನ್ನ
ಬಗೆ ಬಗೆ ಶಕುತಿಯಿಂದ ಬಾಧೆ ಬಡಿಸುವ
ನಗುವ ನೋಡಿ ತಾನು ಹಗಲಿರುಳೆನ್ನದೆ
ಸಿಗನಯ್ಯಾ ಒಬ್ಬರಿಗೆ ಸಿಲುಕಾನು ಸಿಲುಕೆ
ಮಿಗೆಲೊಬ್ಬರಾಧೀನದವನಲ್ಲ ದನುಜಾರಿ
ನಿಗಮ ಗೋಚರ ಸಿರಿ ವೇಣುಗೋಪಾಲರೇಯಾ ಈ
ಬಗೆಯಲ್ಲಿ ಬಂಧಕ ಶಕ್ತನಹುದೊ ತಿಳಿಯಬೇಕು ೮

## ಜತೆ

ಸಿರಿ ಮೊದಲಾದ ಚೇತನ ಜಡಗಳ ಮೋಕ್ಷ
ಸಿರಿ ವೇಣುಗೋಪಾಲನಾಧೀನ ತಿಳಿದವ ಸುಖಿಯೊ ॥

೭೯

# ಶ್ರೀ ಮುಖ್ಯ ಪ್ರಾಣದೇವರ ಸ್ತೋತ್ರ

## ಧ್ರುವತಾಳ

ಮರುತಾ ನಿನ್ನ ಮಹಿಮೆ ಪರಿಪರಿಯಿಂದ ತಿಳಿದು
ಚರಿಸಿದ ಮನುಜಗೆ ದುರಿತ ಬಾಧೆಗಳ್ಯಾಕೆ
ಸರಸಿಜಾಸನ ಸಮ ಸಿರಿದೇವಿ ಗುರುವೆಂದು
ಪರತತ್ವ ಹರಿ ಎನುತ ವಂದಿಸಿ ಅಖಿಳ
ಭರಿತನಾಗಿಪ್ಪ ಜಗದಿ ಅರಸಿ ಭಾರತಿ ಸಹಿತ
ಹೊರಗಿದ್ದು ನವಾವರಣಗಳಿಗೆ ಜೀವರ ಬೀಜ
ಸರಿ ಬಂದ ವ್ಯಾಪಾರದಿ ಆಡಿಸುವೆ ಜಡ ಜೀವರನು
ಪುರಹರ ಮೊದಲಾಗಿ ಅರಿಯರು ಒಂದು ಕಾರ್ಯ
ಗುರುವೆ ನಿನ್ನ ಹೊರತು ಹೊರಗೆ ಬೊಂಬಿಗಳ
ತೋರಿ ಒಳಗೆ ತರ ತರದಿ ನೀನು
ಇರುವೆ ಸರ್ವರಿಗೆ ಆಧಾರ ರೂಪದಿ ಅತಿ
ಸ್ಥಿರ ಭಕುತಿಯಿಂದ ಹರಿಯ ಧೇನಿಸುತ
ಮಿರಗುವ ಪ್ರಭೆ ನಿನ್ನದು ಪದ ರೂಪಧ್ವನಿ ನಿನ್ನದು ದೇವ
ಬರುವ ಹೋಗುವ ವ್ಯಾಪಾರ ನಿನ್ನದು ದೇವ
ಶರಧಿ ಶಯನ ಸಿರಿ ವೇಣುಗೋಪಾಲರೇಯಾ
ಪರಮ ಹರುಷದ ಲೀಲೆ ತೋರುವ ನಿನ್ನೊಳಿದ್ದು ೧

## ಮಟ್ಟತಾಳ

ಅಖಿಳಾಗಮ ವೇದ್ಯ ಅಖಿಳಾಗಮ ಸ್ತೋತ್ಯಾ
ಅಖಿಳಾಗಮ ನಿಗಮ ವ್ಯಾಪುತ ದೇವನೆ
ಅಖಿಳದೊಳಗೆ ನಿಂದು ಸಕಲ ಕಾರ್ಯಗಳೆಲ್ಲ
ಅಕುಟಿಲ ನೀನಾಗಿ ಮಾಡಿಸಿ ಮುದದಿಂದ

ಯುಕುತಿಯಿಂದಲಿ ಜಗವ ಅತಿಶಯವನು ತಿಳಿದು
ಲಕುಮಿಪತಿಯ ನೀನು ಕಾಣುವೆ ಸರ್ವದ
ಶಕತ ಮೂರುತಿ ನಿನ್ನ ತುತಿಸಿ ಬಲ್ಲವರಾರು
ಭಕುತಿಯ ಅಭಿಮಾನಿ ಭಾರತಿಗಳವಲ್ಲಾ
ಭ್ರಕುಟಿಲಾ ವಂದಿತ ನೀನು ವೇಣುಗೋಪಾಲನ್ನ
ಪ್ರಕಟದಿ ಬಲ್ಲದ್ದು ಅರಿಯರು ಉಳಿದವರು ೨

## ತ್ರಿವಿಡಿತಾಳ

ಪೃಥಿವಿ ಶಬ್ದದಿ ಭೂತ ಮಾತ್ರ ಪರಮಾಣುಗಳಲ್ಲಿ
ಪ್ರತಿ ಪ್ರತಿ ರೂಪನಾಗಿ ಇರುತಿಪ್ಪ ಮಡದಿ ಸಹಿತ ಪ್ರಾ–
ಕೃತ ಪಿಡಿದು ಸಕಲ ವ್ಯಾಪ್ತಾ ತಾ–
ತ್ಪಿಕರಲ್ಲಿ ವ್ಯಾಪಾರ ನಿನ್ನದಯ್ಯಾ ಲೋಕ ವಂ–
ದಿತ ದೈವಾ ಶಾತಕುಂಭಾರಿಯಿಂದ ನಿರ್ಮಿತ ಬೊಮ್ಮಾಂಡ
ತಾತ ನಿನಗೆ ಎಣಿಯೆನುತಲೋಡುವದಯ್ಯಾ ಶ್ರೀ
ಕಾಂತನಾದ ಸಿರಿ ವೇಣುಗೋಪಾಲನು
ಪ್ರೀತಿಯಿಂದಲಿ ನಿನಗೆ ಒಲಿದಿಪ್ಪ ಅಧಿಕವಾಗಿ ೩

## ಅಟ್ಟತಾಳ

ಈ ರೀತಿಯಲಿ ಜಗದಾಧಾರನಾಗಿರುತಿರ್ದು
ಧಾರುಣಿಯೊಳು ಮೂರು ಅವತಾರಗಳ ಧರಿಸಿ
ಕ್ರೂರರ ಸದೆದದ್ದು ಮೂರ್ಖರ ಕಾರ್ಯವೇ
ಮೇರು ನುಂಗುವ ಒಂದು ಚೂರು ನುಂಗಲಿಬಹುದು
ಶೂರತಹವೇನೋ ಮಾರಾರಿ ವಂದ್ಯನೆ
ಆರು ಬಣ್ಣಿಪರೊ ವಿಚಾರಿಸಿ ನಿನ್ನನು
ನಾರಾಯಣ ಕೃಷ್ಣ ವೇಣುಗೋಪಾಲನಾ–
ಧಾರದಿಂದಲಿ ಸೇವೆ ಬಾರಿ ಬಾರಿ ಮಾಳ್ಪೆ ೪

### ಆದಿತಾಳ

ಒಂದು ಅವತಾರದಿ ಅಸುರ ವೃಂದವ ಘಾತಿಸಿದೆ
ನಂದತೀರ್ಥ ರೂಪದಿಂದ ಸಕಲ ದುರುಳ-
ರಂದ ವಚನಗಳ ಕಡಿದಾನಂದದಿಂದಲಿ ಮೆರದೆ
ತಂದೆಯ ಕೃತಿಗಳು ನಿನ್ನಿಂದಾದು ನೋಡಿ
ಮಂದಾರವು ಸುಖವ ಪೊಂದುವವಯ್ಯಾ ಬಹು
ಸಿಂಧು ಸಮುತ ಯೇಕಾದಿಂದ ಹಾರುವನು
ಮುಂದಿದ್ದ ಕಾವಲಿಯ ನಿಂದು ನಿಂದು ದಾಟಿದಂತೆ
ಮಂದಮತಿಗಳ ಮನಕೇನೆಂಬೆಯೋ ಎಲೊ ದೇವ
ಸುಂದರಾಂಗನೆ ಸುಖದಿಂದ ಪೊರೆಯುತ ವಾಯು
ನಂದಾ ಹನುಮ ರಾಮನಿಂದ ಆಲಿಂಗನ ಪಡೆದು
ಬಂದು ವಂದಿಸಿದೆ ಗೋಪಿ ಕಂದನ್ನ ಬಿಡದೆ ಭೀಮಾ-
ನಂದ ಮೂರುತಿ ವ್ಯಾಸನಿಂದ ತತ್ವಗಳೆಲ್ಲ
ಅಂದದಿ ಓದುವ ಅಮರೇಂದ್ರ ವಂದಿತ ಮಧ್ವ
ತಂದೆ ಎನ್ನಯ ಬಿನ್ನಪ ಬಂದು ಲಾಲಿಸುವದು
ಪೊಂದಿ ಭೂಪತಿಯ ಪೂಜೊಂದು ಬಿಡದಂತೆ
ಇಂದು ಬೇಡುವೆ ಮನದಿಂದ ವಂದನೆ ಮಾಡಿ
ಕುಂದದೆ ಎನ್ನೊಳಿದ್ದು ಮಂದಿರದೊಳು ನಿನ್ನ
ಅಂದವಾದ ರೂಪ ಇಂದು ತೋರುವದೆನಗೆ
ಸಿಂಧುಶಯನ ಸಿರಿ ವೇಣುಗೋಪಾಲನು
ನಿಂದು ನಿನ್ನೊಳು ಲೀಲೆ ಒಂದೊಂದು ಮಾಳ್ಪ ಚಿತ್ರಾ ೫

### ಜತೆ

ಪವನ ನಿನ್ನಯ ಪಾದ ಪೊಂದಿದ ಮನುಜನು
ಜವನ ಪುರಕೆ ಸಲ್ಲಾ ವೇಣುಗೋಪಾಲ ಬಲ್ಲಾ* ॥

---

* ಕ್ರಮ ಸಂಖ್ಯೆ ೨೯ : ಈ ಸುಳಾದಿ ಶ್ರೀಮಂತ್ರಾಲಯ ಶ್ರೀಗಳವರದೆಂದು 'ಪರಿಮಳ' ಮಾಸಿಕ ಮೈಸೂರಲ್ಲಿ ತಿಳಿಯದೇ ಹಾಕಿರುವರೆಂದು ತೋರುತ್ತದೆ. ವೇಣುಗೋಪಾಲ ವಿಠಲ ರಚಿತವೆಂದು ಹೇಳೇ ಚಿಪ್ಪರಗಿ ನಮ್ಮ ಪುಸ್ತಕದಲ್ಲಿ ಬರೆದ ಕೆಲ ಸುಳಾದಿಗಳು ವಿಠಲ ಇಲ್ಲದೆ ವೇಣುಗೋಪಾಲನೆಂದು ಅಂಕಿತ ಇತ್ತಿರುವದು.

೮೦

## ಶ್ರೀ ಪ್ರಾಣೇಶದೇವರ ಸುಳಾದಿ

### ಧ್ರುವತಾಳ

ಪರಮ ಮುಖ್ಯಪ್ರಾಣನೆ ಪರಿಶುದ್ಧ ಚರಿತನೆ
ಪರಿಪೂರ್ಣ ಭಕ್ತಿಯುಳ್ಳಪಾರ ಮಹಿಮನೆ
ವರಣಿಪರಾರು ನಿನ್ನ ವದನದಿಂದಲಿ ಗುರುವೆ
ನರಹರಿಯ ನವವಿಧ ದ್ವೇಷಿ ಹಂತಾ
ಥರವಲ್ಲ ಥರವಲ್ಲ ತರುಣಿ ಭಾರತಿ ಮಿಕ್ಕ
ಸುರರಿಗೆ ಸುಲಭವಲ್ಲ ಸುಖ ಪೂರ್ಣನೆ
ಶರಧಿಯ ಉದಕ ನಭ ಭರಿತವಾದು ಗಣಣೆ
ತೋರೆ ಮಳಲು ಮಹಾ ಮಳೆಯ ಬಿಂದು
ಕರಣಾದಿ ವಿಸ್ತರಿಸಿ ಎಣಿಸಿ ಗುಣಿಪರಾರು
ವರ ದೇವ (ವೇದ) ವೇದ್ಯಾ ಸರ್ವ ಜಡ ಚೇತನಾ
ಇರುವ ಪುಟ್ಟುವ ಮುಂದೆ ಸರಸಿ ಜಭವ ಮಿಕ್ಕ
ಸುರರು ಸುಗುಣ ಒಂದು ಅಧಿಕರೆನಿಸಿ
ಕರುಣಿಸಿ ಭೂಮಿಯೊಳು ವರದೇಹವನು ಇತ್ತು
ಹರಿ ನಿನ್ನ ಮತದೊಳು ತಂದಿಟ್ಟರೊ
ಮರಿಯಾದೆ ಮತ್ತೆ ಎನ್ನ ಮನದೊಳು ಪೊಕ್ಕು ಮತ್ತೆ
ಗುರುಗಳ ಪಾದ ಭಕುತಿ ಎರಕ ಮಾಡಿ–
ದರು ಮತ್ತೆ ಅದರೊಳು ಗುರುಗಳು
ಕರುಣಿಸೆನ್ನ ಉದರದೊಳು ತಿಳುಹಿ ಸ್ತೋತ್ರ ನುಡಿಸಿದಂತೆ
ಬರಿವೆನಯ್ಯಾ ನಾನು ಒಂದರಿತವನಲ್ಲ
ಸರುವ ತಂತ್ರ ನೀನೆ ಕಾರಣನೊ
ಗಿರಿಜೇಶಾದಿಗಳೆಲ್ಲ ಕರಮುಗಿದು ಕೊಂಡಾಡುತ
ಭರದ ಭಕುತಿಯೊಳು ಲೋಲ್ಯಾಡಲು ಈ
ನರನೇನು ಎಂದು ದೂರ ನೋಡಲಾಗದು ಇನ್ನು

ದುರವಿಯಿಂದ ರಿಕ್ತನಿಗೆ ಪೂಜೆಯುಂಟು
ಪರಿಪಾಲಿಸಿ ಎನ್ನನು ಕರೆವದು ವಚನವ
ನೆರೆ ನಂಬಿದವ ನಿನ್ನ ದಾಸರನು
ದುರುಳ ಭಂಜನ ವೇಣುಗೋಪಾಲ ವಿಠ್ಠಲಂಗವ-
ಸರದಾಳು ನೀನು ಕೊಡುವೆ ತ್ರಿವಿಧ ಜೀವರಿಗೆ ೧

## ಮಟ್ಟತಾಳ

ಪ್ರತಿ ಪ್ರತಿ ಭೂಮಿಗಳು ಪ್ರತಿ ಪ್ರತಿ ವನಧಿಗಳು
ಪ್ರತಿ ಪ್ರತಿ ಲೋಕಗಳು ಪ್ರತಿ ಪ್ರತಿ ಸ್ಥಾನಗಳು
ಪ್ರತಿ ಪ್ರತಿ ಪರ್ವತ ಪ್ರತಿ ಪ್ರತಿ ಆವರಣ
ಪ್ರತಿ ಪ್ರತಿ ವೇದ ಪ್ರತಿ ಪ್ರತಿ ಕಾಲಾ
ಪ್ರತಿ ಪ್ರತಿ ದೇಶ ಪ್ರತಿ ಪ್ರತಿ ನಭ
ಪ್ರತಿ ಪ್ರತಿ ಜೀವರಿಗೆ ಪ್ರತಿ ಪ್ರತಿ ದೇಹಗಳು
ಪ್ರತಿ ಪ್ರತಿಗಳಲ್ಲಿ ಸತತ ನಿನ್ನಯ ರೂಪ
ತತು ತತು ಆಕಾರ ತತು ವರ್ನಾ
ತತು ನಾಮದಲ್ಲಿ ಒಳಗೆ ಹೊರಗೆ ಅಂಶ
ಪ್ರತತನಾಗಿ ಇದ್ದು ಪರಮ ಗುಣಗಳಲ್ಲಿ
ಸತಿಯ ಸಹಿತ ಸರ್ವಾಕಾರಾ ವ್ಯಾಪ್ತನಾಗಿ
ರತಿಪತಿ ಜನಕನ ನುತಿಸಿ ಪೂಜಿಸಿ ಭ-
ಕುತಿ ಭರಿತ ವೇದೋಕುತ ಮತ್ಯಾನು ಗುಣಗಳನ್ನ
ವಿತತದಿ ಕೊಂಡಾಡಿದಿ ವಿಶ್ವದೊಳಗೆ ಜೀವ
ಗತನಾದ ಹರಿಯ ಗುಣಗಳ ಮಹಿಮೆಗಳ
ಅತಿಶಯದಲಿ ತಿಳಿದು ಅನಂತ ತ್ರಿರೂಪ
ತತು ತತು ಸ್ಥಾನದಲಿ ನಿನ್ನ ಪೂಜಿಪೆ ಸತ್ಯಾ
ಮಿತ ಮಹಿಮಾ ಮೂಲ ಸ್ಥಾನದಿ ಬಿಂಬನ್ನ
ಕೃತಿ ಧ್ಯಾನ ಮಾಳ್ಪೆ ಸರ್ವ ಸಂಧಾನದಿ ಕ್ಲಿ-
ಪುತ ಕಾಲದಲಿ ಕಾಂಬಿನೆ ಪ್ರವಾಹವತು
ಇತರ ರೂಪತ್ರಯವ ಅಲ್ಲಲ್ಲೆ ನುತಿಗೈವೆ
ಪೃಥಿವಿ ಮೊದಲಾದಾವರಣದಿಂದಲಿ ಯು-

ಕುತವಾದ ಬೊಮ್ಮಾಂಡವ ಮತ್ತೆ ಉಂಗುಟದಿಂದ
ಗತಿ ತಪ್ಪದಂತೆ ಗಮನಾಗಮನಗಳನುಯ್ದೈದಿ
ಸ್ಥಿತಿವಾಗುವದೆ ಏನೇನು ಮಾಡಿದರದು
ಕೃತಿ ವೇಣುಗೋಪಾಲ ವಿಠಲನ್ನಾ
ಶ್ರಿತನಾಗಿ ಸ್ವಲ್ಪ ಕೃತಿ ತೋರುವ ಜಗಕೆ ೨

**ರೂಪಕತಾಳ**

ಮಿನಗುವ ಮೂರಾದ ಪರಿಚ್ಛೇದಗಳಲ್ಲಿ
ಘನ ವ್ಯಾಪಾರದ ಸಿರಿ ಭೂದುರ್ಗಾರಮಣನ್ನ
ಅನುದಿನ ಪೂಜಿಸುತ ಅಲ್ಲಿಂದ ಸೂಕ್ಷ್ಮ
ತನು ಮೊದಲಾದ ಈ ಸ್ಥೂಲ ದೇಹಗಳಲ್ಲಿ
ಅನಿಮಿಷರು ಇರುವರು ವಿನುತ ಸುತ ಮೊದಲಾದ
ದನುಜರು ಅಲ್ಲಲ್ಲಿ ಪೊಂದಿಕೊಂಡಿಪ್ಪರು
ಮನನ ಮಾಡುತ ದ್ವೇಷ ತಾರತಮ್ಯದಿಂದ
ದನುಜೇಂದ್ರಗೆ ನೀನೆ ಪ್ರೇರಕನೊ ಅಸುರ
ಗಣಕೆ ಸುರರೆಲ್ಲರು ಪ್ರೇರಕರೊ ನಿನ್ನಿಂದ
ತೃಣ ಜೀವ ಕಡಿಯಾಗಿ ವಾಣಿ ಮೊದಲಾದ
ತೃಣ ತುಲ್ಯರಯ್ಯಾ ನೀ ಚೇಷ್ಟೆ ಮಾಡಿಸದಿರಲು
ವನಜಜಾಂಡದೊಡಿಯ ಸಿರಿ ವೇಣುಗೋಪಾಲ ವಿಠಲ
ಅನುಕೂಲವಾಗಿ ನಿನ್ನೊಳು ಪೊಂದಿವೊಲಿದಿಪ್ಪಾ ೩

**ಝಂಪೆತಾಳ**

ನಿನ್ನಿಚ್ಛೆಯಾದರೆ ಹರಿ ಇಚ್ಛೆಯಾದಂತೆ
ನಿನ್ನ ಬಲವಾಗೆ ಹರಿಯ ಬಲವಾದಂತೆ
ನಿನ್ನ ದಯವಾಗಲು ಹರಿಯ ದಯವಾದಂತೆ
ನಿನ್ನ ಒಲಿಸಲು ಹರಿಯ ಒಲಿಸಿದಂತೆ
ನಿನ್ನ ಪೊಗಳಲಾಗಿ ಹರಿಯ ಪೊಗಳಿದಂತೆ
ನಿನ್ನ ಗಾಯನ ಹರಿಯ ಗಾಯನದಂತೆ
ನಿನ್ನ ಪೂಜೆಯ ಮಾಡೆ ಹರಿಯ ಪೂಜಿಸಿದಂತೆ

ನಿನ್ನ ಪೊಂದಿರಲು ಹರಿಯ ಪೊಂದಿದಂತೆ
ನಿನ್ನಾಜ್ಞ ಮೀರಿ ನಡೆದವರುಂಟೆ ಜಗದೊಳಗೆ
ನಿನ್ನ ಚಾರಿತ್ರೆಗಳಿಗೀಡುಂಟೆ ಜಗದೊಳಗೆ
ನಿನ್ನ ಪೋಲುವರಾರು ಘನ್ನದಯ ಸುರತರುವೆ
ಅನಂತ ಚರಿತ ಗುಣಪೂರ್ಣ ಗುರುವೆ
ಚನ್ನ ಮಾರುತಿ ವೇಣುಗೋಪಾಲ ವಿಠ್ಠಲ
ನಿನ್ನಾಧೀನದಿ ಜಗದ ವ್ಯಾಪಾರಗೈಸುವಾ ೪

## ತ್ರಿವಿಡಿತಾಳ

ಆವಾವಾ ಲೋಕದೊಳಗೆ ನಿನಗೆ ಪ್ರತಿಭಟರಿಲ್ಲ
ಆವಾವಾ ಲೋಕಗಳು ನೀನು ಅರಿಯದವಲ್ಲ
ಆವಾವ ಜೀವರಿಗೆ ಆಗುವ ಗತಿಗಳು
ದೇವ ನಿನ್ನಿಂದಲೆ ತಾ ಒಂದು ಮಾಳ್ಪದಿಲ್ಲಾ
ಈ ವನಜಜಾಂಡವು ಹಿಂದೆ ಮುಂದಾಗುವ
ಆ ವನಜಾಂಡದಲಿ ಆಗುವದೆಲ್ಲ
ಜೀವರ ಗತಿ ಜಡ ಭಾವ ವಿಶೇಷಗಳು
ಸಾವಧಾನದಿ ನಿನ್ನ ಚಿತ್ತದಲಿ ತಿಳಿವೆಯ್ಯಾ
ಈ ವಿಧವಾದ ನಿನ್ನಯ ಶಕುತಿಗೆ ಮತ್ತೆ
ಆವನಯ್ಯಾ ಈಡು ಈ ಜಗದಿ
ಪೂವಿಲ್ಲನಯ್ಯಾ ಸಿರಿ ವೇಣುಗೋಪಾಲ ವಿಠ್ಠಲ
ಧಾವಂತವಿಲ್ಲದೆ ನಿನ್ನ ಸಲಹುವ ಅಧಿಕಾ ೫

## ಅಟ್ಟತಾಳ

ಅಪರಮಿತ ಅಂಶ ಅಪರಮಿತ ಬಲ
ಅಪರಮಿತ ಜ್ಞಾನ ಅಪರಮಿತ ತೇಜ
ಅಪರಮಿತ ಧೈರ್ಯ ಅಪರಮಿತ ತನು ವಿನೋ-
ದಿಪಾ ಅಹಿಪಾದಿ ವ್ಯಾಪಕ ದೇವಾರಿಗಳ ಮಲ್ಲ
ಶಪಥ ಪೂರ್ವಕದಿಂದ

ಚಪಲ ಸಿರಿವರ ವೇಣುಗೋಪಾಲ ವಿಠಲನ್ನ
ಅಪನಿಯನಾಗಿ ಧೇನಿಪೆ ಸರ್ವಕಾಲಾ ೬

**ಆದಿತಾಳ**

ಈ ರೀತಿ ಮಹಿಮನು ಧಾರುಣಿಯೊಳಗಿನ್ನು
ಮೂರಾವತಾರದಿ ತೋರಿದೆ ಕೃತ್ಯಗಳನು
ಬಾರಿ ಬಾರಿಗೆ ಹರಿಯ ಸೇವಿ ಎನಿಸಿ ಬಹು
ಮೀರಿದ ಭಕ್ತನೆಂದು ಕೀರುತಿ ಪಡೆದೆ ಅಯ್ಯಾ
ಓರಂತೆ ಹಗಲು ಇರುಳು ನೀನು ಹೊತ್ತು
ಮೀರದೆ ಒಂದು ಕ್ಷಣ ಪಾರ ಜೀವರೊಳಗೆ
ಮಾರುತ ಮಂತ್ರವನ್ನು ಒಬ್ಬೊಬ್ಬರಲ್ಲಿ ನಿಂದು
ಮೂರೇಳು ಸಾವಿರ ಆರು ನೂರುವ ಮಾಡಿ
ಆರಾಧಿಸುತ್ತ ಹರಿಯಾಕಾರವ ಕಾಣಲದು
ಚೋರ ಭಕುತಿ ಎಂದವತಾರ ಮಾಡಿದೆ ಧೊರಿಯೆ
ಕ್ರೂರ ರಸ ಒಂದು ಎಲ್ಲಿಹದೆನಬೇಕು
ಪ್ರೇರಣೆ ನಿನ್ನ ಹೊರತು ತೋರು ಅವರೊಳಗಿನ್ನು
ಸಾರ ಹೃದಯರ ಸಂಸಾರ ವೃಕ್ಷದ ಮೂಲ
ಬೇರರಸಿ ಕೀಳಲು ಆಕಾರ ಧರಿಸಿದೆ ನಿನ್ನ
ವಾರೆ ನೋಟದಿ ನೀನು ಎನ್ನ ನೋಡಿದರೆ
ಆರು ಉಳದವರು ಉದ್ಧಾರವಾಗಲು ಮತ್ತೆ
ಅರಿತೀ ಸಂಗತಿ ವ್ಯಕ್ತನಾದೆನು ಎನ್ನ
ತೋರು ನೀನಿಲ್ಲದ ಪರಮಾಣು ಪ್ರದೇಶ ಒಂದು
ಕಾರಣ ಒಂದು ಎನಗೆ ಕೂಗಿಸುವನು ಜೀಯ್ಯಾ
ಕಾರುಣ್ಯ ದ್ವೇಷಾ ಭಕ್ತಿ ಲವಲವಿಕೆ ಮೂರು ಪರಿ
ಈ ರೀತಿ ಅಲ್ಲದಿನ್ನು ಬೇರೆ ಒಂದಿಲ್ಲ ನಿನಗೆ
ತೋರಿದ ಬಗೆಯನ್ನು ಸಾರಿದೆ ಬಿನ್ನಪದಿ
ಕಾರುಣ್ಯ ನಿಧಿ ವೇಣುಗೋಪಾಲ ವಿಠ್ಠಲಂಗೆ
ಸಾರಥಿಯಾಗಿ ಜಗ ವ್ಯಾಪಾರಗೈಸುವೆ ಮುಖ್ಯ ೭

## ಜತೆ

ನಿನ್ನ ಬಿನ್ನಪದಂತೆ ಮಾಡುವ ಕ್ರಿಯಗಳನು
ಇನ್ನು ಜೀವರೊಳಿದ್ದ ವೇಣುಗೋಪಾಲ ವಿಠ್ಠಲಾ ॥

### ೮೧

## ಶ್ರೀ ಪುರಂದರದಾಸರ ಸ್ತೋತ್ರ

## ಧ್ರುವತಾಳ

ತಂದೆ ಪುರಂದರದಾಸರ ಮಹಿಮೆಗಳು
ಒಂದೊಂದು ನೋಡಲು ವಿಚಿತ್ರ ತೋರುತಲಿವೆ
ಛಂದ ಛಂದ ಗುಣ ಮಂದಮತಿಗಳ ಮನ್ಮನಕೆ
ಅಂದು ವಾವೆ ವಿಷಯ ಹೊಂದಿಕೊಂಡಿಪ್ಪರಿಗೆ
ಒಂದೆ ಮನಸಿನಲ್ಲಿ ಪೊಂದಿ ಪಾದಾರವಿಂದ
ದ್ವಂದ್ವವ ಭಜಿಸಲು ಬೆಂದು ಪೋದವು ಪಾಪಾ
ಅಂದದಿ ಇನನು ಉದಯಿಸೆ ನಿಂದಿರುವದೆ ತಮ
ಸುಂದರಂಗದ ಬೆಳಗಿನಿಂದ ಅಘವೋಡುವದು
ಹಿಂದೆ ಬಹು ಜನುಮಾ ಪಿಡಿದು ಮಂದರಧರನ ಪೂಜೆ
ಯಿಂದ ಸಾಧುಗಳಿಗೆ ವಂದನೆ ಮೊದಲಾದ
ಕುಂದದ ಸೇವೆಗಳಿಂದ ಸತತ ಅವರ
ಮಂದಿರದೊಳಗಿದ್ದು ನಂದಾಬಡುವಗಲ್ಲದೆ
ಮುಂದುವರೆಯದೆ ದುರುಳರಿಂದ ಉಪಜೀವಿಯಾದಾ
ಅಂಥ ಬಲ್ಲನೆ ಇವರಿಂದಾಗುವ ಚರಿತೆಯನ್ನು
ಸಿಂಧುಶಯನ ಸಿರಿ ವೇಣುಗೋಪಾಲ ಇವರ
ಮುಂದೆ ಕುಣಿದಾಡಿದನು ವಂದರ ಘಳಿಗಿ ಬಿಡದೆ ೧

**ಮಟ್ಟತಾಳ**

ಯಾತ್ರೆಗಳು ಎಲ್ಲಾನೇಕವಾಗಿ ಮಾಡಿ
ತೀರ್ಥಗಳು ಎಲ್ಲಾ ಖ್ಯಾಪಿ ಖ್ಯಾಪಿಗೆ ಮಿಂದು
ಪಾತ್ರರಾದ ಬುಧರ ಪ್ರೀತಿ ಸಂಪಾದಿಸಿ
ಸ್ತೋತ್ರಗಳು ಎಲ್ಲಾ ವಾರ್ತಿಯಿಂದಲಿ ಮಾಡಿ
ಗಾತ್ರವ ಬಳಲಿಸಿ ಸಾರ್ಥಕ ತಪದಿಂದ
ಮಾತೃ ಪಿತೃಗಳ ಮಾತು ಲಾಲಿಸಿ ಮುದದಿ
ನೇತ್ರದಿಂದ್ರಿಯ ಹರಿಯ ಮೂರ್ತಿಯಲ್ಲಿಟ್ಟು
ಸ್ತೋತ್ರಗಳೆಲ್ಲಾ ಜರಿದು ಆರ್ತಿಯ ಪರಿಹರಿಸಿ
ಕೀರ್ತಿವಂತ ನಮ್ಮ ವೇಣುಗೋಪಾಲ ವಿ–
ಚಿತ್ರಗಳ ತೋರುವ ತನ್ನ ಭಕ್ತರ ಮಹಿಮೆಗಳ ೨

**ತ್ರಿವಿಡಿತಾಳ**

ದೇಶವಾ ತಿರುಗಲು ಲೇಸು ಬಪ್ಪುದು ಯೇನು ?
ಕಾಸಿ ಪಟ್ಟಣದಲ್ಲಿ ವಾಸವಾಗಿದ್ದರೇನು ?
ಸೂಸಿ ಉದಕ ವಾರಣಾಸಿಯಿಂದಲಿ ತಂದು ಸೇ–
ತು ಶಿವಗೆ ಅಭಿಷೇಕ ಮಾಡಿದರೇನು ?
ಈಶಾ ವೊಲಿವೊನಲ್ಲ ಶಾಶ್ವತ ತಿಳಿವೊದು
ಲೇಸಾಗಿ ನಿರುತ ದ್ವಾದಶನಾಮ ಸಿರಿಮುದ್ರೆ
ಪೂಸಿ ಗಂಧದಿ ಅಂಗಭೂಷಣ ಮಾಡಿಕೊಂಡು
ಮೋಸಗೊಳಿಸಿ ನರರ ಆಶ್ರೈಸಿ ಕೊಡುವದೇನು
ಆಶಯ ಬಿಟ್ಟು ಜಗದೀಶನ್ನ ದಾಸರ ಭ–
ಜಿಸಿದವನ ಜನುಮಾ ಕಾಶಿಗಿಂತಧಿಕವೆನ್ನು
ದೋಷ ದೂರರಾಗಿ ಚರಿಸುವರಾ ಗುಣ
ಆಸೂ ತಿಳಿಯದಿರೆ ಲೇಶವಂದೆರಡಾದರು
ಮೀಸಲ ಮನದಿಂದ ಉಣಿಸಿದವಗೆ ಇತರ
ದೋಷವು ಬರಲುಂಟೇ ಶ್ರೀಶವೊಲಿವ ಮತ್ತೆ
ಶೇಷಶಯನ ನಮ್ಮ ವೇಣುಗೋಪಾಲ ತನ್ನ
ದಾಸರ ಮೂಲದಿಂದುಪದೇಶ ಮಾಡುವ ಜ್ಞಾನ ೩

## ಅಟ್ಟತಾಳ

ಇಂದಿರಾದೇವಿಯ ರಮಣನ್ನ ರೂಪವ
ಮುಂದೆ ಕುಣಿಸುವರು ಛಂದದಿಂದಲಿ ಸರ್ವ
ನಂದಿವಾಹನ ಮೊದಲಾದ ಅಮರ ವೃಂದ
ಬಂದು ಆಕಾಶದಿ ನಿಂದು ನೋಡುತಲಿರೆ
ನಂದನ್ನ ಕಂದನಾಡುವ ತಾಳಗತಿಯಿಂದ
ಅಂದ ಬಣ್ಣಿಪರಾರು ಯೆಂದು ಅಮರಗಣ-
ದಿಂದ ಜಯ ಜಯವೆಂದಾನಂದ ಭರಿತರಾಗಿ
ಇಂದ್ರಾನುಜ ನಮ್ಮ ವೇಣುಗೋಪಾಲನ್ನ
ಪೊಂದುವ ನರನಾದರೊಂದಿಸುವ ಇವರ ೪

## ಆದಿತಾಳ

ಪರಿ ಪರಿಯಲಿನ್ನು ಸಿರಿ ಅರಸನ್ನ ಭಜಿಸಿ
ಪಿರಿದಾಗಿ ಸರ್ವರಿಂದ ಅರುಹಿ ಉದ್ಧರಿಸುವ
ಕರುಣದಿಂದಲಿವರ ಕಲಿಯುಗದಲ್ಲಿ ಹರಿಯಾ
ಚರಿತೆಯ ಕವನವ ಬಿತ್ತರಿಸಿ ಪೇಳಿದರಾಗಿ
ಪರಮ ಗುರುಗಳೆಂದು ಅರುವಾರು ಸುಜನರು
ನಿರುತ ಸಂಸಾರದೊಳಿದ್ದು ದುರಿತ ಉಂಬುವದ್ಯಾಕೆ
ಪರಮ ರಹಸ್ಯ ತತ್ವ ಸುರಿವವು ಕವನವು
ಅರಿತು ಬದುಕಬೇಕು ನರಜನ್ಮ ಬಂದುದಕ್ಕೆ
ಧರಾಧರ ನಮ್ಮ ವೇಣುಗೋಪಾಲನ್ನ
ಚರಣವಿಡಿದ ಪುರಂದರದಾಸರ ನಂಬಿರೋ ೫

## ಜತೆ

ಪುರಂದರದಾಸರ ಚರಿತೆ ಗುಣಿಸಿದರೆ
ಸಿರಿ ವೇಣುಗೋಪಾಲ ಪೊರೆವ ನಿತ್ಯದಲ್ಲಿ ॥

೮೨

## ಶ್ರೀವಿಜಯದಾಸರ ಸುಳಾದಿ

### ಧ್ರುವತಾಳ

ಏಸೇಸು ಜನುಮಗಳು ಸೂಸಿ ಬಂದರೆ ಏನು
ಕಾಸಾವೀಸಗಳನ್ನು ಬಡೆನೋ ಬಡೆನೋ
ಶ್ರೀಶನಂಘ್ರಿಯ ಸತತ ಸೇವಿಪ ವಿಜಯಾಖ್ಯ
ದಾಸರ ಕರುಣ ವಿಶೇಷವಾಯಿತು ಎನಗೆ
ಆಶಿಯೆ ಮೊದಲಾದ ಅಖಿಳ ಬಂಧಾಂಬುಧಿಯು
ಈಸುವೆ ನಾನು ಇತರ ಕ್ಲೇಶ ಬಡೆನೋ
ಲೇಶವಾದರು ಸಿಲ್ಕಿದಾಚೆಗೆ ಪೋಪೆ ಅಲ್ಲಿ
ತೋಷ ಬಡುವೆ ಹರಿಯ ದಾಸರೊಡನೆ
ಈ ಶರೀರದ ಸುಖ ಲೇಸಾಗಿ ತಿಳಿಯೆ ಮ–
ಹೀಷಿಯ ಕೂಡಿದಹಿ ಸಮೀಪ ತೆರನಂತೆ
ಲೇಸು ತೋರುತಲಿದೆ ಮನವೆ ನೀ ಕೇಳು ಮತ್ತೆ
ಘಾಸೆಯಲ್ಲಡೆ ಒಂದು ಕಾಸಿನ ಲಾಭವಿಲ್ಲ
ದೋಷ ವಿದೂರ ನಮ್ಮ ವೇಣುಗೋಪಾಲನಂಘ್ರಿ
ಶಾಶ್ವತ ನೆನವಿಲಿ ನೀ ಸೇರು ಭಕ್ತರೊಳಗೆ ೧

### ಮಟ್ಟತಾಳ

ದೇಶ ಆಳುವುದಿಲ್ಲ ಕೋಶ ಘಳಿಸಿ ಇಲ್ಲ
ದಾಸಿ ದಾಸರ ಪೋಷಣೆ ಮಾಡುವದಿಲ್ಲ
ಸಾಸಿರವನು ವಂಚಿಸದೆ ಸದನವಿಲ್ಲ
ಸೂಸಿದ ಸುಖವಿಲ್ಲ ಶೇಷ ಪಾಶಗಳಿಲ್ಲಾ
ಈಸುವದ್ಯಾತಕೆ ವಿಷಯಗಳೊಳು ಬಿದ್ದು
ಭೂಸುರ ಜನ್ಮವು ದುರ್ಲಭವೋ

ನಾಶರಹಿತ ನಮ್ಮ ವೇಣುಗೋಪಾಲನ್ನ
ದಾಸರ ಪಾದದಲಿ ವಾಸವಾಗು ಬೇಗ ೨

## ತ್ರಿವಿಡಿತಾಳ

ಜನನಿ ಅನುಜಾಗ್ರಜರು ಜನುಮ ಜನುಮದಿ ನಿನಗೆ
ಘನವಾಗಿ ಅತ್ತೆಲ್ಲಿ ಇದ್ದಿಲ್ಲವೇ
ಮನವೇ ಸತಿ ನಿನಗೆ ಅನಿಮಿತ್ಯಳೆಂದು
ಕನಸಿನಲ್ಯಾದರು ಕನಿಕರಿಸದಿರು
ತನು ಸಂಬಂಧಿಗಳಿವರು ನೆನೆದುಕೊ ನಿನ್ನೊಳಗೆ
ಅನುದಿನ ಕೇಳಿ ಕೇಳಿ ದಣಿದೆಯಲ್ಲ
ಹನುಮ ವಂದಿತ ನಮ್ಮ ವೇಣುಗೋಪಾಲನ್ನ
ಅನುಸರಿಸಿ ಇರುತಿಹರ ಸೇರು ಅನುಮಾನ ಸಲ್ಲ ೩

## ಅಟ್ಟತಾಳ

ಸಾಸಿರ ದೇಶವು ಸಾಸಿರ ಕಾಲವು
ಸಾಸಿರ ಪಾತ್ರರು ಈಸು ಒಂದಿನ ಕೂಡೆ
ಆಶೆ ಬಿಡದೆ ಪೂಜೆ ಏಸು ಮಾಡಿದರೇನು
ಮೀಸಲ ಮನದಿಂದ ಶ್ರೀಶಗರ್ಪಿಸದಲೆ
ಕಾಶಿಯೆ ಮೊದಲಾದ ದೇಶ ತಿರುಗಿವನ
ವಾಸಿಯಾದರೇನು ಲೇಶವೊಲಿಯ ಹರಿ
ವಾಸುದೇವ ನಮ್ಮ ವೇಣುಗೋಪಾಲನ್ನ
ದಾಸರ ತೋಂಡರ ದಾಸನಾಗದವ ೪

## ಆದಿತಾಳ

ಭಕ್ತಿ ಜ್ಞಾನ ವೈರಾಗ್ಯಾಸಕ್ತನಾಗಿ ಇರುತ ಪರಮಾ
ಭಕ್ತರಾದ ಜನರಿಂದ ವ್ಯಕ್ತಿ ಉಕ್ತಿ ಭುಕ್ತನಾಗಿ
ಶುಕ್ತಿ ರಜತ ತೋರಿದಂತೆ ಉಕ್ತಿ ನಾನು ಎಂಬುದೆಂದು
ಶಕ್ತಿಯಿಂದ ನೆನೆದು ಸರ್ವಾಸಕ್ತಿಯನ್ನು ಕಡಿಯಬೇಕು

ಮುಕ್ತ ವಂದ್ಯ ಚರಣ ವೇಣುಗೋಪಾಲನ್ನ
ಭಕ್ತ ಸಂಗ ಸೇರು ಈ ದುರಕ್ತವನ್ನು ಜ್ಯಾರು ಮನವೆ ೫

**ಜತೆ**

ಭಕುತರೊಳಿರುವಂಥ ಸುಖವಿಲ್ಲಾ ಸುಜನಂಗೆ
ಲಕುಮಿವಲ್ಲಭ ವೇಣುಗೋಪಾಲವೊಲಿದಂಗೆ ॥

### ೮೩

## ಆತ್ಮನಿವೇದನೆಯ ಸುಳಾದಿ

**ಧ್ರುವತಾಳ**

ನಿರ್ಮಳ ಮನಮಾಡೊ ನಿಶ್ಚಯವಾಗಿ ಎನ್ನ
ಕರ್ಮಗಳಿಗೆ ಇನ್ನು ಕಡೆ ಯಾವದೊ ವಿಷಯ
ಊರ್ಮಿಯೊಳಗೆ ಬಿದ್ದು ಉಣತಿಹೆನಯ್ಯಾ ಗತಿಯ
ಮರ್ಮವ ತಿಳಿಯದೆ ಮೋಹದಿಂದ
ಪರ್ಮಿಳಕಾಗಿ ವೇಗ ಪೋದ ಮಧುಪದಂದಾ
ದುರ್ಮತಿಯಿಂದ ಕೆಟ್ಟೆ ದನುಜಾರಿಯೆ
ಪೇರ್ಮೆಯ ನೋಡಿ ಜನರು ಪರಿಪರಿಯಿಂದ ತಿಳಿದು
ವರ್ಮದಂತೆ ಬಾಹ್ಯ ವೃತ್ತಿಯಿಂದ ಮೋಹಿಪರು
ಶರ್ಮಾಖ್ಯಾ ಸದಾ ಕ್ರಿಯಾಚರಿಸುತಲಿನ್ನು ಸತತ
ಧರ್ಮವಂತರ ಸೇವಾದವನ ಮಾಡೊ
ಕೂರ್ಮ ಮೂರುತಿ ಸಿರಿ ವೇಣುಗೋಪಾಲನೆ ಅ
ಧರ್ಮ ಬುದ್ಧಿಯ ಕೊಡದೆ ಕಡೆಹಾಯಿಸೊ ಜೀಯಾ ೧

## ಮಟ್ಟತಾಳ

ಸರವ ಇಂದ್ರಿಯಗಳೆಲ್ಲ ಸರಿಯದೆ ವಿಷಯದ
ಧರೆಗಳೊಳಗೆ ಬಿದ್ದು ಸ್ಥಿರವಾಗಿ ಭುಂಜಿಸಿದರು
ಕರೆಕರೆಯ ಕಾಮ ಕ್ರೋಧಾದಿಗಳೆನ್ನ
ಅರೆಮರೆಯಗೊಳಿಸದಂತೆ ಕಾಪಾಡುವದೊ
ಸರಸಿಜಭವ ಮುಖ್ಯ ಸಕಲ ಸುರರು ನಿತ್ಯ
ನರಕ ಸೇರುವ ಕಲಿ ಮೊದಲಾದವರೆಲ್ಲ
ತೆರೆದ ಕಣ್ಣನೆ ಮುಚ್ಚುವ ತೆರನೇನು ಬಲ್ಲರೊ
ಪರಮ ಬಲಿಷ್ಠ ನೀನೆ ನೀನೆ ಈ ಜಗದೊಳು
ಶರಧಿಶಯನ ಸಿರಿ ವೇಣುಗೋಪಾಲನ್ನ
ಕರುಣದಿಂದಲಿ ನಿನ್ನ ಕುರುಹ ತೋರಿಸುವದೊ ೨

## ತ್ರಿವಿಡಿತಾಳ

ನರಹರಿ ನರಕಾರಿ ನವನೀತ ಚೋರನೆ
ಅರೆಮರೆ ಸಲ್ಲದೊ ಅಮರ ಪೂಜಿತ ದೇವ
ಬಿರಿದಿಲಿ ಜಗದೊಳು ಭರಿತನಾಗಿ ಸಕಲ
ಸರಸಿಜ ಭವಾದ್ಯರಿಗೆ ಸುಖವನೀವೆ
ಅರಸು ನೀನೆ ಸಿರಿ ಅಜಭವ ಇಂದ್ರ ಕಾಮ
ಸರಸಿಜ ಸಖ ಸೋಮ ಇತರ ದೇವ ದನುಜರಿಗೆ
ಮುರಹರನೆ ಮುಕ್ತರಿಗೆ ಮುನಿ ಸನಕಾದಿಗಳಿಗೆ
ನರತೃಣ ತಿರಿಯಾದಿ ನಾನಾ ಜಂತುಗಳಿಗೆ
ದುರುಳ ವರವ ಕೊಡುವ ಪರಿಭೂತಾದಿಗಳಿಗೆ
ತೋರೆ ವೇದಕಾಲ ಪ್ರಕೃತಿ ಅಭಿಮಾನಿಗಳಿಗೆ
ಎರಡೇಳು ಲೋಕದೊಳು ಆರೋ ಸಾಕುವರಿನ್ನು
ಮೀರಿ ನಿನ್ನನು ಬೇರೆ ಇರುವರೇನೊ
ನಾರಾಯಣನೆಂಬ ನಾಮದರ್ಥವು ನೋಡು
ಸಾರುತಿಹುದು ಸಕಲ ಶ್ರುತಿಗಳಿಂದ
ಸರಿಯದೆ ವಿಹಾರ ಪರಿಪರಿ ಮಾಡುತ್ತ

ಚರಿಸುವೆ ಜಗದೊಳು ಚದುರತನದಿಂದ
ಮರುತನೊಡಿಯ ಸಿರಿ ವೇಣುಗೋಪಾಲ ಈ
ಮರವೆ ಕರ್ಮಕೆ ಗುರಿಯಾರೊ ನಾನಾಗಲು ೩

## ಅಟ್ಟತಾಳ

ಇನಿತು ಬೊಮ್ಮಾಂಡದೊಳ್ಯಾವತ್ತು ವ್ಯಾಪಾರ
ಘನವಾಗಿ ನೀನು ಮಾಡುತ್ತಲಿರೆ ಮುದದಿಂದ
ವನಜನಾಭನೆ ಕೇಳು ವಿಧಿ ನಿಷೇಧಗಳೆಂದು
ದಿನ ದಿನ ಯಾತನೆ ಜನರಿಗ್ಯಾಕೊ
ಮನುಜರ ಕರ್ಮ ಪ್ರಬಲವೆಂದೆನಬೇಕು
ದಿನಮಣಿ ನಿಭ ನಿನ್ನ ಅಗಲಿ ಮಾಡಿದದೆಂದೊ
ದನುಜ ದೇವತಿಗಳು ಕಾರಣರೆಂಬಿಯಾ
ಮನನ ಮಾಡಿಕೊ ಹಿಂದೆ ನುಡಿದ ವಚನಗಳು
ಮನಸಿಜನಯ್ಯಾ ಮಮತೆಯಿಂದಾಗುವದೆನೆ
ಮನ ಮೊದಲಾದ ಇಂದ್ರಿಯಗಳ ಒಡಿಯ ನೀನು
ಎನಿತು ನೋಡಲು ನರಗೆ ಅಪರಾಧಗಳು ಕಾಣೆ
ದನುಜರ ರಿಪುವೆ ಇನ್ನೆನಿತು ಇಪ್ಪದು ಪೇಳೊ
ಸನಕಾದಿ ವಂದಿತ ವೇಣುಗೋಪಾಲನೆ
ನನಗಾರು ದಿಕ್ಕಿಲ್ಲಾ ನಿನಗೊಬ್ಬರೆದುರಿಲ್ಲ ೪

## ಆದಿತಾಳ

ಚಿತ್ತಜನಯ್ಯಾ ಮಹತ್ತು ಅಲ್ಲವೊ ಏಕ
ಛತ್ರಾಧಿಪತಿ ತನ್ನ ಭೃತ್ಯನ್ನ ಬಳಲಿಸುವುದು
ಹೆತ್ತ ತಾಯಿ ಹಿತವ ವತ್ತಿ ಗರಳವ ಸಣ್ಣ
ಬತ್ತಿಗೆ ಎರಿಯಲು ಮತ್ತೆ ಪೇಳುವರಾರೊ
ಹತ್ತಿಲಿಯಿದ್ದು ಸಕಲ ಕೃತ್ಯ ಅಕೃತ್ಯ ಕ್ಷಣ
ಹೊತ್ತು ಬಿಡದೆ ಮಾಳ್ಪ ತತ್ತಳವೇನೊ ಇದು
ಉತ್ತಮ ಗುಣವಲ್ಲ ಸತ್ವರ ಸಲಹೊ ಏಕ

ಕರ್ತು ನೀನೆ ಜಗಕೆ ಕಾಯೊ ಅನುಮಾನವ್ಯಾಕೆ
ಮಿಥ್ಯಾ (ಸಟೆಯಾಡುವ) ಚಾರಿ ನಿನಗೆ ಸತ್ಯವೊ ಸಾಧನವೆನಗೆ
ಹೊತ್ತು ಹೊತ್ತಿಗೆ ಎನ್ನ ಚಿತ್ತದೊಳಿದ್ದು ಮಾಡೊ
ಅತ್ಯಾವಿಯೋಗಿ ಸಿರಿ ವೇಣುಗೋಪಾಲ ನಿನ್ನ
ಭೃತ್ಯರೊಳಿಟ್ಟೆನ್ನ ಭಕ್ತಿ ಭರಿತನ್ನ ಮಾಡೊ ೫

**ಜತೆ**

ಸತ್ಯ ಸಂಕಲ್ಪ ಸಿರಿ ವೇಣುಗೋಪಾಲ ವಿ-
ರಕ್ತಿ ಪೂರ್ವಕ ಶಕಲ ಭಕ್ತನೆಂದೆನಿಸುವದೆನ್ನ ॥

## ೮೪

ಕಪಟ ನಾಟಕ ಸೂತ್ರ ಅಖಿಳಗುಣಪೂರ್ಣನೆ
ಶಕಟ ಭಂಜನ ದೇವ ಅಕುಟಿಲಾತ್ಮ
ಪ್ರಕಟ ಜಗದೊಳು ವ್ಯಾಪ್ತ ವಿಕಟ ರಕ್ಕಸ ಮರ್ದ ಗಿ–
ಟಿ ಕಿರಿದು ಪಲ್ಲನು ಕೀರಿದವನೆ
ಭ್ರಕುಟಿ ಪಿತನೊಡೆಯ ಸಿರಿ ವೇಣುಗೋಪಾಲ ವಿಠಲ
ಮುಕುಟ ಚೋರನ ಬಾಗಿಲನು ಕಾಯ್ದ ಮಹಾಮಹಿಮಾ.

## ೮೫

ಜೀವಿಗಳಿಗೆ ಸಂಸಾರವೆಂಬೋದೆ ಸತ್ಯ ಠಾವಿ ಠಾವಿನಲಿ ವಿಚಾರಿಸಲು
ಕಾವಳ ಮದಮೋಹ ಮಮತೆಯಿಂದಲಿವಕ್ಕು
ಭಾವಿ ಜನನಾಗಳಿಗೆ ಕಾರಣವೊ
ಬೇವುತಲಿರಬೇಕು ಬಹು ವಿಧದಲಿ ಸತತ
ಆವಾದ ಕಾಲಕ್ಕು ಅಗಲದಯ್ಯ
ಕೋವಿದರು ಕೇಳಿ ಇದನು ದಹಿಸುವಂಥ
ದಾವಾಗ್ನಿ ಉಂಟು ದಾವಾವನಿಗಾದರೂ
ಶ್ರೀ ವಲ್ಲಭನ ದಿವ್ಯ ಕಥೆಯನು ಸವಿ ಸವಿದು ದುಃಖ
ಜೀವಾದಿ ಜಡಕೆ ಕರ್ತೃ ವೇಣುಗೋಪಾಲ ವಿಠಲ
ತಾವಲ್ಲ ನಾನಲ್ಲ ಸರ್ವೇಶ ನೀನೆನಬೇಕು.

## ೮೬

ಕೆಡದಿರು ಕ್ಲೇಶದಿಂದಲಿ ಮನವೆ ನೀ ಸತತ
ಬಡದಿರು ಭವದೊಳಗೆ ಬಿದ್ದು ಕಷ್ಟಾ

ತೊಡದಿರು ತೀವ್ರದಲಿ ಕೃದ್ಧಾದಿಗಳ ತ್ವರಿತ
ಇಡು ದೂರದಲ್ಲಿ ದುಷ್ಟ ವ್ಯಾಪಾರವ
ಒಡಿಯಾ ನಿನಗಾರು ಕೇಡು ನುಡಿಯ
ನುಡಿವನಾರು ಒಡನೆ ಕೊಂಡಿಯ ಮಾತು ಪೇಳ್ವನಾರು
ಒಡೆಯ ಜಗಕೆಲ್ಲ ಶ್ರೀ ವೇಣುಗೋಪಾಲ ವಿಠಲ–
ನಡಿಗಳಲಿ ಮನವಿಟ್ಟು ಬಿಡು ಸರ್ವ ಮೋಹಗಳ.

## ೮೭

ನಿನ್ನ ನಾಮದ ಸುರ ತರುವಿನ ನೆರಳಲ್ಲಿ
ಇನ್ನು ಇರುತಿಹನೆಂದು ಮಹ ರಾಶಿ
ನಿನ್ನ ಪಾದಾಂಬುಜವ ಸ್ಮರಿಸುವ ಸುಖಕಿಂತ
ಚುನ್ನ ವಿಷಯಂಗಳ ಭೋಗ ಲೇಶೆ
ಮುನ್ನೊಬ್ಬ ನರಗೆ ಬಾವನ್ನಗಳೆರಡು
ಮನ್ನಿಸಿ ಮೋದಗಳನೀವುತಿರಲು
ತನ್ನ ಇಚ್ಛೆಯಿಂದ ಕಂಟಕ ತರುವಿನ ರಿಂಬಯಸಿ
ಖಿನ್ನನಾಗಿಹ ತೆರನೊ ಎನ್ನಾಶೆಯೂ
ಕನ್ಯ ನೃಪರನ್ನೆ ಗಜವನ್ನೆ ಕಾಯ್ದ ದೇವ
ಸನ್ನದ್ಧನಹುದೊ ಭಕ್ತರ ಪಾಲಿಸಾ
ಉನ್ನತೋನ್ನತ ಮಹಿಮಾ ವೇಣುಗೋಪಾಲ ವಿಠಲ
ನಿನ್ನನೇ ನಂಬೆ ನರನೆನ್ನಲಾರೆನೊ ಅವನ.

## ೮೮

ನೀನಿತ್ತದೆನಗಾವದಾದರು ನಿಜ ಸುಖವು
ನೀನಿತ್ತ ಬವಣೆ ಎನಗಾನಂದದನುಭವವೊ
ನೀನಿಟ್ಟ ಪರಿಯೊಳಗೆ ಆನಿರುವೆನಲ್ಲದೆ

ಹೀನ ಲೇಸುಗಳೆರಡು ಎಣಿಸೆನಯ್ಯಾ
ದೀನ ಮಾನವರು ಮಾಡುವದೇನೊ ಎಲೊ ರಂಗ
ಸ್ಥಾಣು ಆದನೆಂದು ಹರ ಗರ್ವದೀ
ವೇಣುಗೋಪಾಲ ವಿಠಲ ನಿನ್ನ ಬಲ್ಲ ಬಳಿಕ
ಏನಾದರೇನು ಭವಖತಿ ತಿಮಿರ ಭಾನು.

## ೮೯

ಮರೆಯದಿರು ಮರೆಯದಿರು ಮಾರಮಣನೇ ಪ

ಗುರು ಸತ್ಯಬೋಧಾರ್ಯ ವರದ ರಘುರಾಮಾ ಅ.ಪ.

ವನ ವನಂಗಳ ತಿರುಗಿ । ಹಣ್ಣು ಹಂಪಲ ಮೆದ್ದು
ದಣುವಾದ ಪಾಡು ನಿನಗರಿಕಿಲ್ಲವೇ ॥
ದಿನ ದಿನದಿ ಚಿತ್ರ ವಿಚಿತ್ರ ಭೋಜ್ಯಗಳನ್ನು
ಕ್ಷಣ ಬಿಡದೆ ಕೈಕೊಂಬ । ಘನ ಗರ್ವದಿಂದೆನ್ನ ೧

ನಾರ ವಸ್ತ್ರವನುಟ್ಟು । ತಲೆ ಜಡೆ ಗಟ್ಟಿದುದು
ತೋರದೇನೊ ನಿನ್ನ ಮನಸಿಗಿಂದೂ ॥
ಮೇರೆಯಿಲ್ಲದ ಪದಕ । ವಜ್ರ ಮಣಿ ಮಕುಟಗಳ
ಭಾರವನು ನೀ ವಹಿಸಿ । ಬಹು ಬಿಂಕವನೆ ತಾಳೀ ೨

ಅರ್ಭಕನ ತೆರನಂತೆ । ದರ್ಭೆ ಹಾಸಿಕೆ ಮೇಲೆ
ಗುಬ್ಬಿಯಂದದಿ ಮಲಗಿದುದು ಮರತೆಯಾ ॥
ಲಭ್ಯವಾದಾ ಹೇಮ ತೊಟ್ಟಿಲೊಳು ನೀ ಮಲಗಿ
ಉಬ್ಬಿ ಓಲಗಗೊಂಬ ಉತ್ಸಾಹದಿಂದೆನ್ನ ೩

ಹೆಂಡತಿಯ ಕಳಕೊಂಡು । ಕಂಡ ಕಂಡವರಿಗೇ
ಅಂಡಲಿದ ಮಾತುಗಳು ಅನಲೇತಕೇ ॥
ಮಂಡಿತಾದಾಭರಣ । ಮತ್ತೆ ಎಡದಲಿ ಸತಿಯು
ಕಂಡು ಸುಖ ಬಡುವಂಥ । ಕಳವಳಿಕೆಯಿಂದೆನ್ನ ೪

ಈಗಲೀ ಸತ್ಯಬೋಧರ ಬಳಿಯಲಿರಲಾಗಿ
ನೀಗಿ ಹೋಯಿತೆ ನಿನ್ನ ಪಡಿಪಾಟಲೂ ॥
ಆಗೀಗಲೆನ್ನದೇ ಕ್ಷಣ ಬಿಡದೆ ಕೈಕೊಂಡು ವೈ
ಭೋಗ ಬಡುವುದೂ ಮೊದಲಿಗಿದ್ದಿಲ್ಲ ೫

ನಮ್ಮ ಗುರುಗಳು ನಿಮಗೆ । ಈ ಪರೀಯುಪಚಾರ
ಘಮ್ಮನೇ ಮಾಡಲೂ ಘನತೆಯಿಂದಾ ॥
ನಮ್ಮ ಸಾಕದೆ ಇನಿತು ದೂರ ಮಾಳ್ಪುದು ನಿನಗೆ
ಧರ್ಮವಲ್ಲವೊ ಸ್ವಾಮಿ ದಯದದಿಂದ ನೋಡೆಮ್ಮ ೬

ಸಾಕಾರ ರೂಪ ಸರ್ವೋತ್ತಮನೆ ವೈಕುಂಠ
ಬೇಕಾಗಲಿಲ್ಲ ಹೊಸ ಪರಿ ಭಾಗ್ಯವೂ ॥
ಯಾಕೆ ಭಕುತರ ಮಾತು ನಿರಾಕರಿಸಿ ಬಿಡುವುದೂ
ಶ್ರೀಕಾಂತ ಎರಗುವೆ ವ್ಯಾಸ ವಿಠಲ ರೇಯಾ ೭

## ೬೦

ತೂಗೀ ಲಾಲನೆ ಲಾಲಿಸಿದೆಯಾ ರಾಮ । ತೊಟ್ಟಿಲೊಳ್ಮಲಗಿಹ
ನಾಗಾರಿ ವಾಹನ ನರಜನ ಪ್ರೇಮಾ । ಹರಿ ಸಾರ್ವಭೌಮ ಪ

ಯೋಗಿ ಮಧ್ವಮತದಾಗಮ ವಂದಿತ
ಭಾಗವತಾಗ್ರಣಿ ಶ್ರೀಗುರುಗಳ ಕೈ ಅ.ಪ.

ಪ್ರಳಯ ಕಾಲದಲಿ ಹರಿ ನೀನಂದು । ಶ್ರೀ ಭೂ ದುರ್ಗಾತ್ಮಕ
ಜಲದಾಲದೆಲೆಯಲಿ ತೊಟ್ಟಿಲಲಂದೂ । ಕತ್ತಲೆಯೊಳಗಂದೂ
ಎಲ್ಲಾ ಜೀವರ ಪೊಕ್ಕಳ ಎಡಬಲ ತಂದೂ । ದೀನ ಜನರ ಬಂಧೂ ॥
ಥಳಥಳ ಪೊಳೆಯುವ ಮಣಿಯ ತೊಟ್ಟಿಲೊಳು
ಲಲನೆ ಸಹಿತ ಎಡಬಲ ವೈಭೋಗದಿ ೧

ಗೋಕುಲದೊಳೊ ಗೋಪಿಯರಿಂದ ತೂಗಿಸಿಕೊಂಡು
ಸಾಕಾಗಲಿಲ್ಲೇ ಎಲೊ ಮುಕುಂದ । ಕೌಸಲ್ಯಾದೇವಿಯು
ಬೇಕೆಂದು ಮುದ್ದಿಸಿ ಮೋಹದಲಿಂದಾ । ಆದ ಕಾರಣದಿಂದಾ ॥
ಏಕ ಮನಸಿನಲಿ ಈ ಪರಮುನಿಪಗೆ
ಬೇಕೆಂದೊಲಿದು ಪರಾಕನು ಕೊಳ್ಳುತ ೨

ಶ್ರುತಿ ಗೀತೆಯಿಂದ ಸುಂದರವಾದ । ಅಂಭ್ರಣಿ ಸೂಕ್ತದಲಿ
ಸ್ತುತಿಸೀದುದೆಲ್ಲವು ಅತ್ಯಗಾಧಾ । ಅದಕಿಂತ ಇವರಲಿ
ಅತಿಶಯವೇನೊ ಪೇಳಲಿ ಮೋದ । ಸತ್ಯಬೋಧಾರ್ಯರ ॥
ಮತಿಗೆ ನೀ ಮರುಳಾದೆ ಮಧುಸೂದನನೆ
ಪತಿತ ಪಾವನನೆ ವ್ಯಾಸ ವಿಠಲ ನೀನೇ ೩

## ೯೧

ಸತ್ಯ ಸಂಕಲ್ಪ ಸ್ವಾತಂತ್ರ ಸರ್ವೇಶ ಸರ್ವೋತ್ತಮನೆ ಸಾರ್ವಭೌಮಾ ಪ

ಭೃತ್ಯರಿಗೆ ಬಂದ ಪರಿಪರಿ ಭಯಗಳನೆ ಕಳೆದು
ನಿತ್ಯದಲಿ ಕಾಯ್ವ ಸ್ವಾಮೀ ಪ್ರೇಮೀ ಅ.ಪ.

ಆವ ಜನುಮದ ಫಲವೊ । ಆವ ಕ್ರಿಯಗಳಿಂದ
ಆವ ಸಾಧನದ ಬಗೆಯೋ ॥
ಆವ್ರದಿಂದಾವುದಕೆ ಘಟನೆಯನು ಮಾಳ್ಪೆಯೊ
ಆವುದೊ ನಿನ್ನಾಟವೋ ॥
ಆವ ಪರಿಯಿಂದಲ್ಲಿ ಜೀವಿಗಳ ಸಲಹುವಿಯೊ
ಆವ ನಿನ್ನಾಧೀನವೋ ।
ದೇವ ದೇವೇಶ ನಿನ್ನ । ಭಾವ ಬಲ್ಲವರಾರೊ
ಭಾವಜನ ಪಿತ ಕೃಪಾಳೊ । ಕೇಳೋ ೧

ತ್ರಿಪದ ತೈಜಸ ಪ್ರಾಜ್ಞ ವಿಶ್ವರೂಪಗಳಿಂದ
ಸ್ವಪ್ನ ಕಾಲದಲಿ ನೀನೂ ॥
ಸುಪರ್ವಾಣ ದೈತ್ಯರ ಸೃಜಿಸಿ ಮನೆಯನು ಮಾಡಿ
ಅಪರಿಮಿತ ಕಾರ್ಯಗಳನೂ ।
ಸುಫಲ ದುಷ್ಕರ್ಮಗಳ ತೋರಿಸೀ ಜೀವಕ್ಕೆ
ಕ್ಲುಪುತವಾಗಿದ್ದವೆಲ್ಲಾ ।
ಕೃಪೆಯಿಂದ ತೋರಿ ಬದಾಪತ್ತುಗಳ ಕಳೆವ
ಅಪರಿಮಿತ ಸಾಗರಾ । ಶೂರಾ ೨

ಎನ್ನಂಥ ಪಾಪಿಷ್ಠರಿನ್ನಿಲ್ಲ ಧರೆಯೊಳಗೆ
ನಿನ್ನಂಥ ಕರುಣಿಯಿಲ್ಲಾ ॥
ಚೆನ್ನಗುರು ವಿಜಯರಾಯರ ಪೊಂದಿದವನೆಂದೂ
ಮನ್ನಿಸಿ ಸಲಹಬೇಕೋ ।
ಘನ್ನ ಸಂಸಾರದೊಳು ಬವಣೆ ಬಂದಟ್ಟಿದರು
ನಿನ್ನ ಸ್ಮೃತಿಯೊಂದು ಬರಲೀ ।
ಸನ್ನುತಾಂಗಿಯ ರಮಣ ವ್ಯಾಸವಿಠಲ ಮಧ್ವ
ಮುನಿಗೊಲಿದೆ ಉಡುಪಿವಾಸಾ । ಶ್ರೀಶಾ ೩

## ೬೨

ಮಧ್ವಾಂತರ್ಗತ ಶ್ರೀನಿವಾಸಾ । ಕಾಯೊ
ಸಿದ್ಧ ಮೂರುತಿ ವೆಂಕಟೇಶಾ ಪ

ಇದ್ಧರೆಯೊಳು ನಿನ್ನ । ಹೊದ್ದಿದವರ ಪಾಪ
ಬದ್ಧವಾಗದು ಅನ್ಯೋಪದ್ರವೆ ಮೊದಲಿಲ್ಲ ಅ.ಪ.

ಸಾಕಾರ ಸರ್ವಾಧಾರೀ । ಸ್ವಾಮಿ
ಲೋಕನಾಯಕನೆ ಉದಾರೀ ॥
ಭೂಕಾಂತ ಭವ ಭಯಹರೀ । ಜಗ

ದೇಕನೆ ಪರ ಉಪಕಾರೀ ।
ನಾ ಕರ ಮುಗಿವೆ ಕೃಪಾಕರ ಮೂರ್ತಿ ಇ ।
ನ್ಯಾಕೆ ನಿರ್ದಯ ಮಾಡಿ ನೀಕರಿಸುವಿ ಎನ್ನ ॥
ಸಾಕು ನಿನಗೆ ಪರಾಕು ಪೇಳುವ । ದ್ಯಾಕೆ ಭಕುತರ ಸಾಕಲರಿಯೆ
ಸಾಕು ಭವ ಸುಖನೇಕ ಪರಿಯಲಿ । ಬೇಕು ಪಾಲಿಸು ಏಕ ಭಕುತಿಯ ೧

ಧರೆಗೆ ವೈಕುಂಠದ ಪರಿಯೇ । ತೋರಿ
ಮರೆವಿ ಮಹಾತ್ಮ ಶ್ರೀಹರಿಯೇ ॥
ಸರಿ ನಿನಗಿದು ಹೊಸ ಪರಿಯೇ । ಭಾಗ್ಯ
ಮರಿಯಾದ ಮರಿತಿ ನೀ ಧೊರೆಯೇ ॥
ಶಿರಿಯೆ ಮಂದಿರವಾಗಿ ಪರಿಪರಿ ರೂಪದಿ
ಕರವ ಜೋಡಿಸಿ ಉಪಚರಿಯ ಮಾಡಲು ಇತ್ತ
ಸರಸಿಜೋದ್ಭವ ಗರುಡ ನರಹರ । ಸುರಪಮುಖ ದಿವಿಜರು ಪರಾಕೆನೆ
ಪರಮ ಪದ ಸಂಪದವಿದಲ್ಲದೆ । ಶಿರಿಯ ಭಾಗ್ಯದಿ ಪರವೆ ನಿನಗೇ ೨

ಮಣಿಮಯ ಖಚಿತ ಕಿರೀಟಾ । ಸಾರೆ
ಅನುವಾದ ನಾಮ ಲಲಾಟಾ ॥
ಮಿನುಗುವ ನಗೆ ವಾರೆನೋಟಾ । ದಿನ
ಮಣಿ ಕರ್ಣ ಕುಂಡಲ ಮಾಟಾ ॥
ಘನ ಶಂಖ ಚಕ್ರ ಭೂಷಣ ಶ್ರೀ ವತ್ಸಾಂಕ ಶೋ-
ಭನ ಕೌಸ್ತುಭ ಮಣಿ ಗಣ ಹಾರ ಶೃಂಗಾರ ॥
ಖಣಿಯೆ ಕಟಿಕರ ಕನಕಮಯ ಸುವಸನ ಕಾಂಚೀದಾಮ ಒಪ್ಪಲು
ಪ್ರಣತರ ಭಯಪ್ರದಕರ ಕುಂಭಿಣಿಗೆ ತೋರುವ ಅನಘ ವೆಂಕಟನೆ ೩

ನಿಗಮ ಗೋಚರ ನಿತ್ಯ ಮೋದಾ । ವಾದ
ಝುಗ ಝುಗಿಸುವ ದಿವ್ಯ ಪಾದಾ ॥
ಯುಗಳಾರಾಧನಿ ಪರರಾದಾ । ವರಿಗೆ
ಅಗಣಿತ ಸುಖವೀವ ಶ್ರೀದಾ ॥
ಗಗನ ಭೂಮಿಪ ಗತಿಪ್ರದ ದಶರಥ ಪಂಚ
ಮೊಗನಾದಿ ಭುವನದೊಳಣುಗ ಮೊದಲಾದ ॥

ಜಗದಿ ಬಹು ತಾಪಸಿಗಳ ಭಾವದಿ । ಸಿಗದೆ ಮೋಹಾದಿಗಳ ಪಾಶದಿ
ಮುಗದಿ ಕರಗಳ ಪೊಗಳುವರಿಗೆ । ಬಗೆ ಬಗೆಯ ಕಾಮಗಳ ಹರಿಸಿದ ೪

ಸ್ವಾಮಿ ಪುಷ್ಕರಣಿ ನಿವಾಸಾ । ನಾದ
ಕಾಮಿತ ಪ್ರದನೆ ಲಕ್ಷ್ಮೀಶಾ ॥
ಧೀಮಂತ ಮಣಿ ದೀನ ಪೋಷಾ । ಎನ್ನ
ಯ ಮರೆಯದಿರು ನಿನ್ನ ದಾಸಾ ॥
ಸಾಮಗಾಯನ ಲೋಲ ಸತತ ಸದ್ಗುಣ ಶೀಲ
ಸಾಮಜ ವರದ ಮಹಾ ಮಹಿಮನೆ ಸಾರ್ವ ॥
ಭೌಮ ಭವ್ಯ ತ್ರಿಧಾಮ ಸಂತರ ಪ್ರೇಮ ಪೂರಣ ಕಾಮ ದಿವಿಜ ಲ–
ಲಾಮ ಭೂಡರ ವ್ಯಾಸ ವಿಠಲ ಯಾಮ ಯಾಮಕೆ ಎನ್ನ ಪಾಲಿಸೋ ೫

## ೯೩

ವೆಂಕಟಾಚಲ ವಾಸಾ । ವೇದಾಂತ ವೇದ್ಯಾ
ತಂಕ ರಹಿತ ವಿಲಾಸಾ । ವಿಧಿ ಭವ ಸುರಾರ್ಚಿತ
ಪಂಕಜಾಂಘ್ರಿ ಸುಪೋಷಾ । ಲಕ್ಷ್ಮೀ ನಿವಾಸಾ ಪ

ಶಂಖ ಚಕ್ರ ವರಾಭಯಕರ ಶ । ಶಾಂಕ ವದನ ಕಳಂಕ ರಹಿತನೆ
ಕಿಂಕರನ ಅವಗುಣಗಳೆಣಿಸದೆ । ಪಂಕಜಜ ಪರಿಪಾಲಕನೆ ಶ್ರೀ ಅ.ಪ.

ಶ್ರೀ ರಮಣ ಶೃಂಗಾರಾ । ಶುಭ ಗುಣ ಭರಿತ ಭವ
ತಾರಕನೆ ತಾತ್ಸಾರಾ । ಮಾಡದಲೆ ತವ ಪರಿ
ಚಾರಕರ ವಿಸ್ತಾರಾ । ಸೇವೆಯನು ಪಾಲಿಸೊ
ವಾರ ವಾರಕೆ ಧೀರಾ । ದೇವಕಿ ಕುಮಾರಾ ॥
ತಾರತಮ್ಯನುಸಾರ ತತ್ವ ವಿ । ಚಾರದಿಂದಲಿ ವಿವಿಧ ಮೋಹದಿ
ಪಾರಗಾಣಿಸೊ ಪಾರ್ಥಸಾರಥಿ । ಭಾರ ನಿನ್ನದೊ ಭಕ್ತವತ್ಸಲ ॥
ಕೌರವಾಂತಕ ಕಾರುಣಿಕ ಪಂ । ಕೇರುಹೇಕ್ಷ ಪರಾವರಜ್ಞ ಮು–
ರಾರಿ ಮುಕ್ತ ವಿಹಾರ ಮುನಿ ಪರಿ । ವಾರ ಮಾಮನೊಹಾರ ಮೂರುತಿ ೧

ತಾಟಕಾಂತಕ ರಾಮಾ । ತಡಮಾಡದಲೆ ಶಶಿ
ಜೂಟನುಳುಹಿದ ಪ್ರೇಮಾ । ಭವ ಸಾಗರದೊಳು
ಪಾಟು ಬಡುವೆನೊ ಕಾಮಾ । ಕ್ರೋಧಾದಿಗಳ ಆ
ರಾಟ ಮಗ್ಗಿಸೊ ಸೋಮಾ । ಸತ್ಕುಲ ಲಲಾಮ ॥
ಹಾಟಕಾಂಬರ ಹನುಮವಂದ್ಯ ವಿ ।
ರಾಟ ಮೂರುತಿ ವಿಷ್ಣು ತುರಿಯ ಲ
ಲಾಟಕೆಸೆದನ ಮನ್ನಿಸಿದ ಮಧು । ಕೈಟಭಾರಿ ಮಹಾಮಹಿಮ ಗುಣ ॥
ಕೂಟದಿಂದಲಿ ಜಗವ ನಿರ್ಮಿಸಿ । ಹಾಟಕೋದರ ಹರ ಪ್ರಮುಖ್ಯರ
ನೀಟು ಸೂತ್ರದಿ ಈಟದಿಂದದಿ । ಚೂಟದಲಿ ಚೆಲ್ಲಾಟವಾಡಿದ ೨

ಜನನ ಮರಣ ವಿದೂರಾ । ಜಾನಕಿ ಮನೋಹರ
ಪ್ರಣತ ಜನ ಮಂದಾರಾ । ಪ್ರಾಕೃತ ರಹಿತ ಚಿ
ದ್ಘನ ಶರೀರ ಅಪಾರಾ । ಕರ್ಮಗಳಿಗೊಪ್ಪಿಸಿ
ದಣಿಸುವರೆ ಯದುವೀರಾ । ಪರ ತತ್ವ ಸಾರಾ ॥
ವನಜ ಜಾಂಡಾ ವರೂಥಖಿಳ ಸ । ಜ್ಜನ ಶಿರೋಮಣಿ ಸಾತ್ವತಾಂಪತಿ
ಮಣಿದು ಬೇಡುವರೊಡೆಯ ಮದ್ ಹೃದ್ । ವನಜ ದಿನಮಣಿ ದಿತಿಸುತಾಂತಕ ॥
ಜನುಮ ಜನ್ಮಾರ್ಜಿತ ಕಲುಷ ಕಾ । ನನವ ಖಂಡಿಸೊ ವ್ಯಾಸ ವಿಠ್ಠಲ
ಮನ ವಚನ ಕಾಯದಲಿ ನಮಿಸುವೆ । ಘನ ಮಹಿಮ ಗಜವರದ ಸುಂದರ ೩

## ೯೪

ನೆರೆ ನಂಬಿದೆ ಮದ್ ಹೃದಯ ಮಂಟಪದೊಳು
ಪರಿಶೋಭಿಸುತಿರು ಪಾಂಡುರಂಗ ॥
ಶರಣ ಜನರ ಸಂಸಾರ ಮಹಾಭಯ
ಹರಣ ಕರುಣ ಸಿರಿ ಪಾಂಡುರಂಗ ಪ

ಪರದೇವನೆ ನಿನ್ನ ಲೀಲಾ ಸ್ಮೃತಿಯನು
ನಿರುತ ಎನಗೆ ಕೊಡು ಪಾಂಡುರಂಗ ॥

ಪರರಾಪೇಕ್ಷೆಯ ಬಿಡಿಸಿ ನಿರಂತರ
ಪರಗತಿ ಪಥ ತೋರೊ ಪಾಂಡುರಂಗ ೧

ನೆರದಿಹ ಬಹು ಜನರೊಳಿದ್ದರು ಎನ ಮನ
ಸ್ಥಿರವಿಡು ನಿನ್ನಲಿ ಪಾಂಡುರಂಗ ॥
ಪರಿಪರಿ ಕೆಲಸವು ನಿನ್ನ ಮಹಾಪೂಜೆ
ನಿರುತ ಎನಗೆ ಕೊಡು ಪಾಂಡುರಂಗ ೨

ಸುಖವಾಗಲಿ ಬಹು ದುಃಖವಾಗಲಿ
ಸಖ ನೀನಾಗಿರು ಪಾಂಡುರಂಗ ॥
ನಿಖಿಲಾಂತರ್ಗತ ವ್ಯಾಸ ವಿಠಲ ತ್ವ–
ನ್ಮುಖ ಪಂಕಜ ತೋರೊ ಪಾಂಡುರಂಗ ೩

## ೯೫

ಗಿರಿರಾಜ ಚಿತ್ತವುದಾರ ಜೀಯಾ ।
ನಾ ನಿನ್ನ ಪಾದ
ಕ್ಕೆರಗಿ ಯಾಚಿಸುತಲಿ ಮುಗಿವೆನು ಕೈಯಾ ।
ನೆರೆ ನಂಬಿದವರನು
ಎರವು ಮಾಡಲು ನಿನಗೊಳಿತೇನಯ್ಯಾ ।
ಪಿಡಿ ಬೇಗ ಕೈಯಾ ಪ

ಕರುಣೆಗಳರಸನೆ ಕಾಮಿತ ಫಲದನೆ
ಕರಿರಾಜನ ಭೀಕರ ಹರ ವಂಕಟ ಅ.ಪ.

ಅಪಾರ ಮಹಿಮಾ ಆಪದ್ಬಂಧೂ । ಆಪನ್ನರ ಪಾಲಿಪ
ವ್ಯಾಪಾರ ನಿನಗಲ್ಲದೆ ಮತ್ತೊಂದೂ । ನಾ ಕಾಣೆನೊ ಜಗದಿ
ಭೂಪಾನೆ ಭೂಮಾ ಗುಣ ಗಣ ಸಿಂಧೂ । ಸ್ವಾಮಿಯೆ ಸಿರಿಗೆಂದೂ ॥
ಪಾಪದ ಪಂಕವು ಲೇಪವಾಗದಂ । ತೀ ಪರಿಪಾಲಿಸೊ ಶ್ರೀಪತಿ ಅಂಜನ ೧

ತರು ಜಾತಿ ಮೃಗಪಕ್ಷಿಗಳಾಕಾರ । ಮೊದಲಾದ ರೂಪದಿ
ಸುರರೂ ಕಿನ್ನರರೂ ತಮ್ಮ ಪರುವಾರ । ಒಡಗೂಡಿ ನಿನ್ನಾ
ಶರಣರ ಚರಣಾರಾಧನೆಗೆ ವಿಸ್ತಾರ । ಈ ಬಗೆ ಶೃಂಗಾರಾ ॥
ದೊರೆತನ ಠೀವಿಗೆ ಧರಣಿ ಮಂಡಲದಿ । ಸರಿಗಾಣೆನೊ ಹೇ ತಿರುಪತಿ ವೆಂಕಟ ೨

ಹದಿನಾಲ್ಕು ಲೋಕದ ಭಾಗ್ಯವನೆಲ್ಲಾ । ಅಮರರಿಗೆ ಕೊಟ್ಟ
ವಿಧವೆಲ್ಲಾ ಪ್ರತ್ಯಕ್ಷವು ಪುಸಿಯಲ್ಲಾ । ನಾನವರನು ನೋಡೆ
ಅಧಮಾಧಮನು ಸರಿ ಬಲ್ಲೆಲ್ಲಾ । ಎನ್ನ ಯೋಗ್ಯ ತದಾ ॥
ಹದುಳವೆ ನೀವುದು ಹದಗೆಡಿಸದಲೆ । ವದಗಿ ಪಾಲಿಸು ವಸುಮತಿಧರ ಫಣಿ ೩

ಕಲಿಯುಗದೊಳಗೀ ಪರ್ವತದಲ್ಲಿ । ಸರಿಗಾಣೆನೊ ಎಂದು
ನೆಲೆಸೀದೆ ನೀನೆ ಈ ಸ್ಥಳದಲ್ಲಿ । ವೈಕುಂಠಕಿಂತ
ನೆಲೆಯಾ ವೆಗ್ಗಳವೆಂದು ನೀ ಬಲ್ಲಿ । ಅದ ಕಾರಣದಲ್ಲಿ ॥
ಜಲಜ ಭವಾದ್ಯರು ಒಲಿದೊಲಿಯುತ । ತಲೆದೂಗುವರ್‍ಯೆ ಭಳಿರೆ ಕಾಂಚನ ೪

ಸುವರ್ಣ ಮುಖರಿ ತೀರವಾಸ । ಆ ಬ್ರಹ್ಮೋತ್ಸವ
ನವರಾತ್ರಿಯಲ್ಲಿ ನೋಡಲು ಶ್ರೀಶ । ಸಂ ಪದವಿಯನಿತ್ತು
ಕಾವನು ಕಲುಷದ ಭಯ ಬರಲೀಸ । ಶ್ರೀ ಶ್ರೀನಿವಾಸ ॥
ಶ್ರೀವರ ಭೂಧರ ವ್ಯಾಸವಿಠಲ* ಪ । ರಾವರೇಶ ಶ್ರೀ ದೇವನೆ ದೇವಾ ೫

## ೯೬

ಹ್ಯಾಂಗೆ ನಿಮ್ಮ ಚರಣಾ । ಕಾಂಬೆನೊ
ಯೋಗಿ ಜನರ ಶರಣಾ ಪ

---

* ಬೆಂಗಳೂರು ಗೋಪಾಲದಾಸರ ಪುಸ್ತಕ ಮತ್ತು ಬೆಳಗಾವಿ ಸಂಸ್ಕೃತ ಗ್ರಂಥದ ಪ್ರಕಾರ ವ್ಯಾಸ ವಿಠಲಾಂಕಿತವಾಗಿದೆ. ವರದೇಂದ್ರ ಸಾಹಿತ್ಯ ಗ್ರಂಥದ ಪ್ರಕಾರ ವಿಜಯ ದಾಸರದ್ದಾಗಿದೆ. ಈ ವಿಚಾರದಲ್ಲಿ ಸಂಶೋಧನೆಯಾಗಬೇಕು.

ನಾಗಶಯನ ಭವಸಾಗರ ಮಮತೆಯ
ನೀಗಿ ನಿರುತ ಅನುರಾಗದಿಂದ ಪೊರೆ ಅ.ಪ.

ವ್ಯರ್ಥವಾಯಿತಲ್ಲಾ । ಜನ್ಮವು । ಸಾರ್ಥಕಾಗಲಿಲ್ಲಾ
ಮುಕ್ತಿ ಬಯಸಲಿಲ್ಲಾ । ಜ್ಞಾನ ವಿ । ರಕ್ತಿಯು ಮೊದಲಿಲ್ಲ
ಎತ್ತ ತಿಳಿಯದೇ ಸುತ್ತಿ ಭವದೊಳು
ನೃತ್ತ ನಡತೆಯಲಿ ಹೊತ್ತು ಕಳೆದ ಪೊರೆ ೧

ಮಾಯ ಬಿಡದು ಹರಿಯೇ । ಮುಂದೆ ಉ
ಪಾಯವೇನು ದೊರೆಯೇ ॥
ಧೇಯ ನಿಮ್ಮನು ಮರೆಯೇ । ಅನ್ಯ ಸ
ಹಾಯವು ನಾನರಿಯೇ ॥
ಕಾಯಜ ಪಿತ ಕಮಲಾಯತ ಲೋಚನ
ಮಾಯವ ಬಿಡಿಸಯ್ಯ ನ್ಯಾಯದಿಂದ ಹರಿ ೨

ಸಾಕು ಭವದ ಸಂಗಾ । ಗರ್ಭದೊ
ಳ್ಹಾಕದಿರೆಲೊ ರಂಗಾ ॥
ಶ್ರೀಕರ ಉತ್ತುಂಗ । ಕರುಣಿಸ
ಬೇಕು ಕೃಪಾ ಪಾಂಗಾ ॥
ಧಿಕ್ಕರಿಸುವದಿನ್ಯಾಕೆ ಪೇಳುವೆ ಕರು
ಣಾಕರ ಎನ ವಾಕು ಪಾಲಿಸೊ ಹರೆ ೩

ಎಲ್ಲಿ ನೋಡಲು ನಿನ್ನಾ । ಸರಿ
ಇಲ್ಲ ಕೇಳು ಚೆನ್ನಾ ॥
ಫುಲ್ಲನಾಭನೆ ಎನ್ನಾ । ಕಾಯಿದು
ಎಲ್ಲಿ ನೋಡಲು ದಯ ಸಲ್ಲಿಸಿ ಎನ್ನಯ
ಸೊಲ್ಲು ಲಾಲಿಪುದು ಮಲ್ಲಮರ್ದನ ಕೃಷ್ಣ ೪

ವ್ಯಾಸವಿಠಲರಾಯಾ । ಮನದಭಿ
ಲಾಷೆ ಸಲ್ಲಿಸಯ್ಯಾ ॥

ದಾಸನೆಂದು ಕಯ್ಯಾ । ಪಿಡಿದು
ಪೋಷಿಸುವುದು ಪ್ರೀಯಾ ॥
ಶ್ರೀಶನೆಂದು ನಿನ್ನ ಸೇರಿದೆನೋ ಪರ
ದೇಶಿಯೆಂದು ಉದಾಸೀನ ಮಾಡದೆ ೫

೯೭

ಸಂಸಾರವನು ಮಾಡಿ ಸಕಲ ಜನರೂ ಪ

ಕಂಸಾರಿ ಶ್ರೀಕೃಷ್ಣ ಕೈಪಿಡಿದು ಸಲಹುವನು ಅ.ಪ.

ಬುದ್ಧಿಯೆಂದೆಂಬ ಕನ್ನಿಕೆಯ ಮದುವೆಯ ಮಾಡಿ
ಸದ್ಧರ್ಮದಭಿಮಾನದಿಂದ ಬೆಳಸೀ ॥
ಶುದ್ಧ ಭಕ್ತಿಗಳೆಂಬ ಮಕ್ಕಳನು ಪಡೆದು ಬಹು
ಅದ್ಭುತ ಭವಾಬ್ಧಿಯನು ದಾಟಿರಯ್ಯಾ ೧

ಚಾರು ಸುಜ್ಞಾನವೆಂಬುವ ಮುದ್ದು ಮಗನ್ಪಡೆದು
ವೈರಾಗ್ಯವೆಂಬ ಭಾಗ್ಯವನೆ ಬೇಡೀ ॥
ಸಾರ ಹರಿನಾಮಗಳ ರಸ ಪದಾರ್ಥಗಳುಣಿಸಿ
ಕಾರುಣ್ಯದಲಿ ಬೆಳೆಸಿರಯ್ಯ ಮಕ್ಕಳನೂ ೨

ಯಮ ನಿಯಮ ಅಷ್ಟಾಂಗ ಅಣಿಮಾದಿಗಳು
ಕ್ಷಮೆ ದಮಾದಿಗಳೆಂಬ ಬಂಧು ಬಳಗಾ ॥
ಮಮತೆ ಪೆರ್ಚಿಸಿಕೊಂಡು ಬೀಗತನ ಮೊದಲಾದ
ಅಮರಿಕೆಯ ಸಂಬಂಧವನೆ ಮಾಡಿರಯ್ಯಾ ೩

ಶೀಲ ಸನಕಾದಿಗಳು ಮುನಿ ದೇವತಾದಿಗಳು
ತಾಳಿ ತಮ್ಮೊಳಗೆ ಸಮ ವಿಷಯರಾಗಿ ॥

ಆಲಂಪಟಗಳ್ಹಚ್ಚಿಕೊಂಡು ಭವನಿಧಿ ದಾಟಿ
ಸಾಲೋಕ್ಯ ಮೊದಲಾದ ಮುಕ್ತಿಗೈದಿದರೂ ೪

ಹೊರಗಿದ್ದ ಪದವಿ ಸತಿ ಸುತರು ಭಾಗ್ಯವೆ ನಿಮಗೆ
ಹರಿಯಿತ್ತ ಕಾಲಕ್ಕು ಹೃದಯದೊಳಗೇ ॥
ಮರೆಯಲಾಗದು ಹಿಂದೆ ಸಂಸಾರದಾ ಬಾಧೆ
ದುರಿತಾರಿ ವ್ಯಾಸ ವಿಠ್ಠಲ ಬ್ಯಾಗ ಒಲಿವಾ ೫

## ೯೮

ಏನಾದರಾಗಲಿ ಹರಿ ನಿನ್ನ ಸ್ಮರಣೆ ಮಾತ್ರ ಒಂದಿರಲಿ ಪ

ಆಚಾರಿಯೆನಲಿ ಬಹು ದು । ರಾಚಾರಿಯೆನಲಿ ಜನರೆಲ್ಲ
ನೀಚನೆಂದೆನಲಿ ಅನದಿರಲಿ ೧

ಜ್ಞಾನಿ ಎಂದೆನಲಿ ದುರ್ಮಾರ್ಗ । ನಾನೆನಲಿ ಜನರೆಲ್ಲ ಬಹು
ಮಾನವಂತನೆನಲಿ ಅನದಿರಲಿ ೨

ಪಾಪಿಯಾಗಿರಲಿ ಬಹು ಸಂ । ತಾಪಿಯಾಗಿರಲಿ ಜನರೆಲ್ಲ
ಪಾಪಿಯೆಂದೆನಲಿ ಅನದಿರಲಿ ೩

ರಾಗವೇ ಬರಲಿ ಬಹು ವೈ । ಭೋಗವೇ ಬರಲಿ ವಿಷಯ
ನಿಯೋಗವೇ ಬರಲಿ ಬರದಿರಲಿ ೪

ಒಲಿದರೆ ನೀ ವ್ಯಾಸವಿಠಲ ಜನ । ರೆಲ್ಲ ಮತ್ತಳಿಯುತಿರಲಿ
ಇರದಿರಲಿ ಏನಾದರಾಗಲಿ ಹರಿಯೆ ೫

೯೯

ಇಂದು ರಂಗಾನಟ್ಟೋಳಿಗೆ । ಇರಲಾರೆವಮ್ಮಾ ನಾವು
ಬಂದುಪಾಯವ ಕಾಣೆವೆ । ವನಿತೆ ಗೋಪ್ಯಮ್ಮಾ ಕೇಳೆ ಪ

ಹಿರಿಯರಾದವರಿಗೆ । ಭರದಿ ಪೇಳೇವೆಂದರೆ
ಸರಸಿಜ ಸಂಭವನಿಗೆ ಹಿರಿಯನೀತ ಕಾಣಮ್ಮ ೧

ಮಾಯಗಳ ಮಾಡಿ ನಾವೂ । ಹೊಯಿಲೆಬ್ಬಿಸೇವೆಂದರೆ
ಮಾಯಾದೇವಿಗೆ ಸಿಗದೆ । ಮಾಯಾವ ತೋರುವನಮ್ಮ ೨

ಗುಮ್ಮನ ತೋರಿದರೀಗಾ । ಒಮ್ಮೊಮ್ಮೊ ಲೆಕ್ಕಿಸನಮ್ಮ
ಅಮ್ಮಮ್ಮ ಶ್ರೀ ನಾರಸಿಂಹ । ಅದ್ಭುತಾದ ದೈವ ಕಾಣಮ್ಮ ೩

ಅರಿವಿ ಸರ್ಪಾನ ಮಾಡಿ । ಭರದಿ ಅಂಜಿಸೇವೆಂದರೆ
ಖರೆಯವಾಗಿದ್ದ ದೊಡ್ಡಾ । ಉರಗಶಾಯಿ ಕಾಣಮ್ಮ ೪

ಅರಸರಿಗ್ಹೇಳಿದರೂ । ಬರಿದಾಗುವುದೇ ನಿಜ
ಧರೆ ಗಗನ ಪಾತಾಳದ । ಅರಸನಲ್ಲವೇನಮ್ಮ ೫

ಕಾಸು ವೀಸಾ ಕೈಯ್ಯಾಳಿಟ್ಟೊ । ಕೂಸಿಗೆ ಬುದ್ಧಿ ಹೇಳುವೆ
ಕೋಶ ಭಾಗ್ಯದಭಿಮಾನಿ । ಶ್ರೀಶನೇ ಈಶ ಕಾಣಮ್ಮ ೬

ಪಾಪದ ಭೀತಿ ತೊರದು । ಭೂಪ ರಂಗ ಅಂಜಾನಮ್ಮ
ಪಾಪ ರಹಿತರಾದವರ । ತಪಸಿಗಳೊಡೆಯಾನಮ್ಮ ೭

ಮ್ಯಾಣದ ಚೇಳು ತೋರುವೆ । ಜಾಣ ರಂಗ ಅಂಜಾನಮ್ಮ
ಮೇಣು ಮೂವತ್ತಾರು ಲಕ್ಷ । ತಾಂ ಶಿಂಶುಮಾರಾನಮ್ಮ ೮

ಅನ್ನ ವಸನಗಳಿತ್ತು । ಮನ್ನಿಸೆವೆಂದಾರೆ ಪುಸಿ
ಕನ್ಯೆ ದ್ರೌಪದಿ ದುಮ್ಮಾನ । ಮುನ್ನೆ ಇದಕ್ಕೇ ಸಾಕ್ಷಿಯಲ್ಲೆ ೯

ಅಣ್ಣ ತಮ್ಮಾ ಬಂಧೂ ಬಳಗ । ಜನರುಂಟೇನೆ ಹೇಳೇವೆ
ಅನಾದಿ ಕಾಲದಿಂದಾ । ಘನ್ನ ತಾನೇ ಏಕಮೇವ ೧೦

ಚಿಣ್ಣ ನೀ ಅಣ್ಣಾ ಬಾಯೆಂದು । ಮನ್ನಿಸೇವೆಂದಾರೆ ಪುಸಿ
ಅನಂತ ವೇದಗಳಿವನ । ಬಣ್ಣಿಸಿ ಹಿಂದಾಗಲಿಲ್ಲೆ ೧೧

ಊರು ಕೇರಿಗಳಾ ಬಿಟ್ಟು । ದೂರ ಬಾರ ಹೋದೇವೇನೆ
ಸಾರ ವ್ಯಾಪ್ತನಾಗಿ ಇಪ್ಪಾ । ಯಾರಿಗೆ ದೂರುವೆನಮ್ಮಾ ೧೨

ಕದ್ದು ಕದ್ದೋಡುವಾ ನಮ್ಮ । ಲಿದ್ದು ಪಿಡಿಯಾಲೊಶವಲ್ಲೆ
ರುದ್ದರನ್ನಾ ಓಡೀಸಿದಾ । ಮುದ್ದು ರಂಗಾನಿವನಮ್ಮ ೧೩

ಹಗ್ಗದಿ ಕಟ್ಟೀದರಾಗ । ಬಗ್ಗನಮ್ಮಾ ನಿನ್ನ ಮಗ
ಅಗ್ಗಳೀಕೆ ಖಳರ ಉಕ್ಕು । ತಗ್ಗಿಸಿ ಬಂದಿಹಾನಮ್ಮ ೧೪

ಇಂದು ನಿನ್ನಾ ಕಂದನಾಟಾ । ಚಂದಾವೆಂದೂ ವಂದಿಸುವೆವೆ
ತಂದೆ ವ್ಯಾಸಾ ವಿಠಲೆ*ಮಗೆ । ಬಾಂಧವಾನಾದನು ಕಾಣೆ ೧೫

## ೧೦೦

ತಿಳಿಯದೋ ನಿನ್ನಾಟ ತಿರುಪತಿಯ ವೆಂಕಟ ಪ

---

*ವರದೇಂದ್ರ ಸಾಹಿತ್ಯ ಪ್ರಕಟಣೆ ೧–೨ ಶಕೆ ೧೮೬೬ ರ ಪ್ರಕಾರ ತಂದೆ ವ್ಯಾಸವಿಠಲ ಎಂಬ ಅಂಕಿತದವರು ಯಾರೂ ಇಲ್ಲ. ಆದ್ದರಿಂದ ವ್ಯಾಸವಿಠಲರದ್ದೇ ಇರಬಹುದೆಂದು ಕೊಟ್ಟಿದೆ.

ಪೊಳೆವ ನೀರೊಳು ಗೆಲುವ ಮೋರೆಯ
ನೆಲವ ನೋಡುವ ಸುಳಿವ ಕಂಬದಿ ।
ಇಳೆಯನಳೆಯುವ ಭಳಿರೆ ಭಾರ್ಗವ
ಖಳನ ಭೇದಿಸಿ ಕೊಳಲ ಧ್ವನಿಗೆ ॥
ನಳಿನಮುಖಿಯರ ನಾಚಿಸುವ ಬಲು ಹಯ
ದಳದ ಬಹು ಹವಣಿಗಾರನೆ ಅ.ಪ.

ಆರು ಬಲ್ಲರು ನಿಮ್ಮ – ಶ್ರೀ ಲಕುಮಿ ಮನಸಿಗೆ
ತೋರುದಿಹ ಪರಬೊಮ್ಮ _ ಉಳಿದವರು ಬಲ್ಲರೆ
ನೀರಜಾಸನ ಬೊಮ್ಮ _ ಇದು ನಿನ್ನ ಮರ್ಮ ॥
ನೀರೊಳಗೆ ಮನೆ ಭಾರ ಬೆನ್ನಿಲಿ
ಕೋರೆ ದಾಡೆಯ ನಾರಸಿಂಹನೆ ।
ಧರೆಯ ಬೇಡಿದ ಧೀರ ಪುರುಷನೆ
ವಾರಿ ಬಂಧನ ಮಾರಜನಕನೆ ॥
ನಾರಿಯರ ವ್ರತವಳಿದು ಕುದುರೆಯ
ನೇರಿ ಮೆರೆಯುವ ಸುಂದರಾಂಗನೆ ೧

ಸಕಲ ಮಾಯವಿದೇನು _ ವ್ಯಕನ ವಾಯು
ಸಖನ ಸಲಹಿದೆ ನೀನು _ ಭಕುತಿಯಿಂದಲಿ
ತುತಿಪರಿಗೆ ಸುರಧೇನು _ ಸುರ ಕಾಮಧೇನು ॥
ನಿಖಿಳ ವೇದೋದ್ಧಾರ ಗಿರಿಧರ
ಅಖಿಳ ಭೂಮಿಯ ತಂದ ನರಹರಿ ।
ಯುಕುತಿಯಲಿ ನೆಲನಳೆದ ಭಾರ್ಗವ
ಮುಕುತಿಗೋಸುಗ ಫಲವ ಸವಿದನೆ ॥
ರುಕುಮನನುಜೆಯ ರಮಣ ಬೌದ್ಧನೆ
ಲಕುಮಿ ರಮಣನೆ ಕಲ್ಕಿರೂಪಿಯೆ ೨

ನಿನ್ನ ರೂಪಿನ ಲೀಲಾ – ನೋಡುವ ಜನಕೆ
ಕಣ್ಣು ಸಾಸಿರವಿಲ್ಲಾ _ ನಾ ಪಾಡಿ ಪೊಗಳಲು
ಪನ್ನಗಾಧಿಪನಲ್ಲ _ ನೀನರಿಯದಿಲ್ಲ ॥

ಕಣ್ಣು ಮುಚ್ಚದೆ ಬೆನ್ನು ತೋರಿದಿ
ಮಣ್ಣು ಕೆದರುವೆ ಚಿಣ್ಣಗೊಲಿದನೆ ।
ಸಣ್ಣ ವಾಮನ ಅಣ್ಣ ರಾಮನೆ ॥
ಪುಣ್ಯ ಪುರುಷನೆ ಬನ್ನ ಬಡುಕನೆ ॥
ಹೆಣ್ಣುಗಳ ವ್ರತ ಕೆಡಿಸಿ ತೇಜಿಯ
ಬೆನ್ನನೇರಿದ ವ್ಯಾಸ ವಿಠ್ಠಲ* ೩

## ೧೦೧

ಇಂದಿರಾ ಪಾಲಿಸು ಎನ್ನ ಇಂದಿರಾ ಪ

ಇಂದಿರಾ ದೇವಿಯೆ ನಿನ್ನ । ಪಾದ
ಪೊಂದಿದೆ ಸಲಹಬೇಕೆನ್ನಾ । ಆಹ
ಕಂದರ್ಪ ಇಂದ್ರ ಫಣೀಂದ್ರ ಗರುಡ ಕಂದು
ಕಂಧರ ಬ್ರಹ್ಮಾದಿ ವಂದ್ಯಳೆ ಪಾಲಿಸು ಅ.ಪ.

ಶ್ರೀಮಾಯೆ ಜಯ ಕೃತಿ ಶಾಂತಿ । ದುರ್ಗೆ
ಭೂಮಿ ಶ್ರೀದೇವಿ ಜಯಂತಿ । ಲಕ್ಷ್ಮೀ
ರಮೆ ದಕ್ಷಿಣೆ ಗುಣವಂತಿ । ಸತ್ಯ
ಭಾಮೆ ರುಕ್ಮಿಣಿ ಮಹಾಕಾಂತಿ । ಆಹ
ಈ ಮಹಾನಂತ ರೂಪ ನಾಮಗಳುಳ್ಳ
ಕೋಮಲ ಗಾತ್ರಿಯೆ ಕಾಮಜನನಿ ಕಾಯೆ ೧

ಶ್ರೀಭಾಗ ಮಹಾ ಪ್ರಳಯದಲ್ಲಿ । ಪದ್ಮ
ನಾಭಾಗೆ ಬಹು ಭಕ್ತಿಯಲ್ಲಿ । ದಿವ್ಯ

* ಭಜನ ಕೌಸ್ತುಭ ಭಾಗ ೨ ಸಂಗ್ರಹ ಮತ್ತು ಪ್ರಕಾಶನ : ಎಸ್. ಶ್ರೀನಿವಾಸ ಮೂರ್ತಿ, ಬೆಂಗಳೂರು ೧೯೯೪, ೬೦ ರೂ.

ಆಭರಣಗಳಾಕಾರದಲ್ಲಿ । ಮಿಕ್ಕ
ವೈಭವನೇಕ ರೂಪಾದಲ್ಲಿ । ಆಹ
ಸ್ವಾಭಿಮಾನದಿ ಬಹು ಶೋಭನ ಪೂಜೆಯ
ಲಾಭಗಳೈದಿದ ಶೋಭನವಂತಳೆ ೨

ದೇಶಕಾಲಾದಿಗಳಲ್ಲಿ । ಜೀವ
ರಾಶಿ ವೇದಾಕ್ಷರದಲ್ಲಿ । ಇದ್ದು
ವಾಸುದೇವನ ಬಳಿಯಲ್ಲಿ । ಸರಿ
ಸೂಸಿ ವ್ಯಾಪ್ತಿ ಸಮದಲ್ಲಿ । ಆಹ
ಲೇಸಾಗಿ ಒಪ್ಪುತ್ತ ಈಶ ಕೋಟಿಯೊಳು
ವಾಸಾಳೆ ಎನ್ನಭಿಲಾಷೆ ಸಲ್ಲಿಸಬೇಕು ೩

ಅನಾದಿಯಿಂದಲಿ ಬಂದ । ಮೋಹಾ
ಜ್ಞಾನ ಕಾಮ ಕರ್ಮದಿಂದ । ಕೇತು
ನಾನಾ ಜನ್ಮದಿ ಬಹು ನೊಂದ । ದೆಲ್ಲ
ಏನ ಪೇಳಲಿ ಭವ ಬಂಧಾ । ಆಹ
ನೀನೆ ಕಳೆದು ದಿವ್ಯ ಜ್ಞಾನ ಭಕುತಿಯಿತ್ತು
ಪ್ರಾಣಪತಿಯ ಪಾದವನ್ನು ತೋರಿಸಬೇಕು ೪

ನಿತ್ಯ ಭಾಗ್ಯವು ನಿನಗೊಂದೆ । ಅಲ್ಲ
ರತ್ನಾಕರನು ನಿನ ತಂದೆ । ತಾಯಿ
ರತ್ನಗರ್ಭಳು ಕೇಳು ಮುಂದೆ । ಪತಿ
ಗತ್ಯಂತ ಪ್ರಿಯಳಾದೆ ಅಂದೆ । ಆಹ
ಸತ್ಯಬೋಧರು ಮಾಳ್ಪ ಅತ್ಯಂತ ಪೂಜೆಯಿಂ
ಯುಕ್ತೆ ಶಿರಿಯೆ ನಿನಗೆತ್ತ ಕತ್ತಲು ಕಾಣೆ ೫

ಲೋಕ ಜನನಿಯು ಎಂದು ನಿನ್ನಾ । ಕೀರ್ತಿ
ಸಾಕಲ್ಯವಾಗಿದೆ ಘನ್ನಾ । ಎನ್ನ
ಸಾಕಲಾರದೆ ಬಿಡಲಿನ್ನಾ । ಮುಂದೆ
ಯಾಕೆ ಭಜಿಸುವುದು ನಿನ್ನಾ । ಆಹ

ಸಾಕಾರವಾಗಿನ್ನು ಬೇಕಾದ ವರಗಳ
ನೀ ಕರುಣಿಸಿ ಎನ್ನ ಜೋಕೆ ಮಾಡಲಿ ಬೇಕು ೬

ಆವ ಜನ್ಮದ ಪುಣ್ಯಫಲದಿ । ನಿನ್ನ
ಸೇವೆ ದೊರಕಿತೊ ಈ ಕ್ಷಣದಿ । ಎನ
ಗೀವ ಭವ್ಯ ಕೇಳು ಮನದಿ । ಆಹ
ಶ್ರೀ ವ್ಯಾಸ ವಿಠಲನ್ನ ಸೇವಿಪ ಯತಿಗಳ ಸ
ಹವಾಸವನೆ ಇತ್ತು ಭಾವ ಶುದ್ಧನ ಮಾಡು ೭

## ೧೦೨

ಸೂತ್ರನಾಮಕ । ಸುಂದರನೇಕ । ಸೂತ್ರನಾಮಕ ಪ

ಸೂತ್ರನಾಮಕ ಸತ್ಪಾತ್ರ ಗರಡ ಶಿಖಿ
ನೇತ್ರ ವಿನುತ ಶುಭಗಾತ್ರ ಪವಿತ್ರ ಅ.ಪ.

ರಾಮಪದ ಭೃಂಗಾ । ರಾವಣ ಮದಭಂಗ । ಗಜಸಿಂಗಾ
ತಾಮಸ ಕುಲಕೆ ನೀ ಧೂಮಕೇತು ಬುಧ
ಸೌಮನಸಾಗ್ರಣಿ ಕಾಮಿತ ಫಲದಾ ೧

ಪಾಂಡುನಂದನಾ । ಪಾಲಿಸು ಯನ್ನಾ । ಖಂಡ ಪಾವನಾ
ಅಂಡಜಾಧಿಪನ ಕಂಡು ಭಜಿಸಿ ದೋ–
ರ್ದಂಡ ಖಳ ಕುಲ ಚಂಡ ಪ್ರಚಂಡಾ ೨

ಜ್ಞಾನದಾಯಕಾ । ಆನಂದತೀರ್ಥ । ದೀನ ಪೋಷಕ
ಭಾನುಕೋಟಿ ತೇಜ ವ್ಯಾಸ ವಿಠಲನ
ಧ್ಯಾನದೊಳಿಹ ಮಮ ಮಾನಸ ಹಂಸಾ ೩

## ೧೦೩

## ಟೀಕಾಚಾರ್ಯರ ಸ್ತೋತ್ರ

ದಯದಿ ಪಾಲಿಸೋ ಜಯತೀರಥ ರಾಯಾ ।
ಅಕ್ಷೋಭ್ಯರ ತನಯಾ ಪ

ಅತ್ಯಂತ್ಹರುಷದಿ ಎತ್ತಾಗಿರುತಿರಲೂ ಶ್ರೀ ।
ಆನಂದ ತೀರಥರೂ
ನಿತ್ಯ ಪಠಿಸುವ್ಹೋ ಪುಸ್ತಕ ಹೊರುತಿರಲೂ ।
ಗುರುರಾಯರು ಪೇಳಿದ
ತತ್ವ ಗ್ರಂಥವನೆ ಕಿವಿಯಲಿ ಕೇಳುತಲೀ ।
ತಲೆಯನು ತೂಗುತಲೀ
ಮತ್ತೆ ಪುಟ್ಟಿದ್ಯೋ ಮಂಗಳವೇಡೆಯಲೀ ।
ಅತಿ ಮತಿವಂತರಲೀ ೧

ದೇಶಪಾಂಡೆರಾ ಕೂಸಾಗಿ ಜನಿಸೀ ।
ಘನ ರಾವುತನೆನಿಸೀ
ದೇಶ ದೇಶದೋಳ್ ಸೈನ್ಯವನೇ ಚರಿಸೀ ।
ಹಣವನ್ನೇ ಗಳಿಸೀ
ವಾಸುಕಿಯೆಂಬೋ ಗುರುತನೆ ತಪ್ಪಿಸೀ ।
ನದಿಗೇ ನೀರಡಿಸೀ
ಶ್ರೀಶನಾಜ್ಞೆಯೊಳಿವರನೆ ಕರೆತರಿಸೀ ।
ಶಿಖೆ ಸೂತ್ರವ ತೆಗೆಸೀ ೨

ಹಿಂಡು ಹಿಂಡು ಜನ ಅಂಡಲಿಯುತ ಬದೂ ।
ಅಕ್ಷೋಭ್ಯ ತೀರಥರಾ
ಕಂಡು ಭೇಟಿಯಾ ಮಾಡುತಲೇ ನಿಂದೂ ।
ಧೋಂಡೋ ರಘುನಾಥನ

ಹೆಂಡತಿ ಗಂಡನ ಕೂಡಿಸಬೇಕೆಂದೂ ।
ಸುಮ್ಮನೆ ಕರೆತಂದೂ – ಪ್ರ
ಚಂಡ ಸರ್ಪನಾ ರೂಪವ ತಾಳ್ದಂದೂ
ಭಯವ ಪಟ್ಟರಂದೂ ೩

ಮಧ್ವ ಶಾಸ್ತ್ರಗಳನುದ್ಧರಿಸುತಲದನಾ ।
ಟೀಕೆಯನೇ ಮಾಡೀ
ವಿದ್ವಜ್ಜನರಿಗೆ ತಿದ್ದಿಯೆ ಪೇಳುತಲೀ ।
ನಾನಾ ಬಗೆಯಿಂದಲಿ
ಪದ್ಧತಿ ತಿಳಿಸಿದ ಗುರುರಾಯರು ನೀವು ।
ಯತಿವರ ಸುರಧೇನು
ಅದ್ವೈತರ ಗುರು ವಿದ್ಯಾರಣ್ಯರ ।
ಗೆದ್ದ ಸಿಂಹ ನೀನೂ ೪

ಆಷಾಢ ಬಹುಳ ಪಂಚಮಿಯೂ
ಬರುತಾ ಕಳೆಬರವನೆ ಬಿಡುತಾ
ವ್ಯಾಸ ವಿಠ್ಠಲನ ಪಾದದಲೇ ನಿರುತಾ ।
ಮಳಖೇಡದೊಳು
ವಾಸಿಪನೆಂಬೋ ಬಲು ಪ್ರಖ್ಯಾತಾ ।
ನಿಜಗುಣ ಗಣನೀತಾ
ಬ್ಯಾಸರದಲೆ ಕೊಂಡಾಡಿದರೆ ನಿತ್ಯಾ ।
ಇಷ್ಟಾರ್ಥವನಿತ್ತಾ ೫

## ೧೦೪

ಜಯಮಂಗಳಂ ನಿತ್ಯ ಶುಭಮಂಗಳಂ ಪ

ಮಂಗಳಂ ಹಯವದನ ಪದಕಂಜ ಮಧಪನಿಗೆ
ಮಂಗಳಂ ವಾಗ್ವಜ್ರಧಾರನಿಗೇ ॥

ಮಂಗಳಂ ವಾಗೀಶ ಕರಕಂಜ ಜಾತನಿಗೆ
ಮಂಗಳಂ ಗುರು ವಾದಿರಾಜರಿಗೆ ಅ.ಪ.

ಮಂಜುಳಾಕಾರನಿಗೆ ಮಹಿತ ಗುಣವಂತನಿಗೆ
ಕಂಜದಳ ನೇತ್ರನಿಗೆ ಕಾಮಾರಿಗೆ ॥
ಅಂಜನಿಯ ಸುತ ಮತಕೆ ಅನಿಕೂಲವಾದವಗೆ
ರಂಜಿಸಿ ರಾಯರಾಳಿದ ಯತಿಗೇ ೧

ಪರಿಪರಿ ಚರಿತನಿಗೆ ಪರಿಪೂರ್ಣ ಚಿತ್ಸುಖಗೆ
ಪರಮಹಂಸಾರ್ಯರಿಗೆ ಪದವೀವಗೆ ॥
ಶರಣ ಜನ ಪಾಲಕಗೆ ಸುಧರ್ಮದಿ ನಿರತಂಗೆ
ಉರಗ ಭೂಷಣನಿಂದ ಪೂಜ್ಯನಿಗೆ ೨

ವಿದ್ಯ ಆಧಾರನಿಗೆ ದಿತಿಜಾದ್ರಿ ವಜ್ರನಿಗೆ
ಅದ್ವೈತ ಮತಹರಗೆ ಆಶ್ಚರ್ಯಗೇ ॥
ಊರ್ಧ್ವ ಪುಂಡ್ರಾಂಕಿತಗೆ ಉತಕೃಷ್ಟ ತೇಜನಿಗೆ
ಮುದ್ದು ವ್ಯಾಸ ವಿಠಲನ್ನ ಪೂಜಿಪನಿಗೆ ೩

## ೧೦೫

## ವಿಜಯರಾಯರ ಕವಚ

ಸ್ಮರಿಸಿ ಬದುಕಿರೋ । ದಿವ್ಯ । ಚರಣಕೆರಗಿರೋ
ದುರಿತ ತರಿದು ಪೊರೆವ ವಿಜಯ ಗುರುಗಳೆಂಬರಾ ಪ

ದಾಸರಾಯನ । ದಯವ ಸೂಸಿ ಪಡೆದನ
ದೋಷರಹಿತನ । ಸಂ । ತೋಷ ಭರಿತನ ೧

ಜ್ಞಾನವಂತನಾ । ಬಲು ನಿ । ದಾನ ಶಾಂತನಾ
ಮಾನ್ಯವಂತನಾ । ಬಲು ವ । ದಾನ್ಯ ದಾತನಾ ೨

ಹರಿಯ ಭಜಿಸುವಾ । ನರ । ಹರಿಯ ಯಜಿಸುವಾ
ದುರಿತ ತ್ಯಜಿಸುವಾ । ಮನಕೆ । ಹರುಷ ಸುರಿಸುವಾ ೩

ಮೋದ ಭರಿತನಾ । ಪಂಚ । ಭೇದವರಿತನಾ
ಸಾಧು ಚರಿತನಾ । ಮನೋ । ವಿಷಾದ ರಹಿತನಾ ೪

ಇವರ ನಂಬಿದಾ । ಜನಕೇ । ಭವವಿದೆಂಬುದಾ
ಹವಣವಾವುದೂ । ನ । ಮ್ಮವರ ಮತವಿದೂ ೫

ಪಾಪಕೋಟಿಯ । ರಾಶಿ । ಲೇಪವಾಗದೂ
ತಾಪ ಕಳೆವನೋ । ಬಲು ದ । ಯಾಪಯೋನಿಧಿ ೬

ಕವನ ರೂಪದೀ । ಹರಿಯ । ಸ್ತವನ ಮಾಡಿದಾ
ಭುವನ ಬೇಡಿದಾ । ಮಾ । ಧವನ ಕೂಡಿದಾ ೭

ರಂಗನೆಂದನಾ । ಭವವು । ಹಿಂಗಿತೆಂದನಾ
ಮಂಗಳಾಂಗನಾ । ಅಂತ । ರಂಗವರಿತನಾ ೮

ಕಾಶಿನಗರದಲ್ಲಿದ್ದ ವ್ಯಾಸದೇವನಾ
ಸೂಸಿ ಭಜಿಸಿದಾ । ಉ । ಲ್ಲಾಸ ಭರಿತನಾ ೯

ಚಿಂತೆ ಬ್ಯಾಡಿರೋ । ನಿ । ಶ್ಚಿಂತರಾಗಿರೋ
ಶಾಂತ ಗುರುಗಳಾ । ಪಾದ । ವಿಂತು ನಂಬಿರೋ ೧೦

ಖೇದವಾಗದೋ । ನಿಮಗೆ । ಮೋದವಾಹುದೋ
ಸಾಧು ಗುರುಗಳಾ । ದಿವ್ಯ । ಪಾದ ನಂಬಿರೋ ೧೧

ತಾಪ ತಡೆವನೋ । ಬಂದ । ಪಾಪ ಕಡಿವನೋ
ಶ್ರೀಪತಿಯ ಪಾದದಾ । ಸ । ಮೀಪವಿಡುವನೋ ೧೨

ಗಂಗೆ ಮಿಂದರೇ । ಮಲವು । ಹಿಂಗಿತಲ್ಲದೇ
ರಂಗನೊಲಿಯನೋ । ಇವರ । ಸಂಗ ದೊರೆಯದೇ ೧೩

ವೇದ ಓದಲೂ । ಬಹು ವಿ । ವಾದ ಮಾಡಲೂ
ಹಾದಿಯಾಗದೂ । ಬುಧರ । ಪಾದ ನಂಬದೇ ೧೪

ಲೆಖ್ಖವಿಲ್ಲದಾ । ದೇಶ । ತುಕ್ಕಿ ಬಂದರೂ
ದುಃಖವಲ್ಲದೇ । ಲೇಶ । ಭಕ್ತಿ ದೊರೆಯದೂ ೧೫

ದಾನ ಮಾಡಲೂ । ದಿವ್ಯ । ಗಾನ ಪಾಡಲು
ಜ್ಞಾನ ದೊರೆಯದೂ । ಇವರ । ಧೀನವಾಗದೇ ೧೬

ನಿಷ್ಠೆ ಯಾತಕೇ । ಕಂಡ । ಕಷ್ಟವ್ಯಾತಕೇ
ದಿಟ್ಟ ಗುರುಗಳ । ಪಾದ । ಮುಟ್ಟಿ ಭಜಿಸಿರೋ ೧೭

ಪೂಜೆ ಮಾಡಲೂ । ಕಂಡ । ಗೋಜು ಬೆಳಿಸಲೂ
ಬೀಜ ಮಾತಿನಾ । ಫಲ ಸ । ಹಾಜ ದೊರೆಯದೂ ೧೮

ಜ್ಞಾನವಂತನಾ । ದಯಾ ನಿ । ದಾನ ಪಡೆದರೇ
ಏನು ಬಯಸಿದಾ । ಭಾಗ್ಯ । ಸಾನುಕೂಲವೂ ೧೯

ಸುರರು ಎಲ್ಲರೂ । ಇವರ । ಕರವ ಪಿಡಿವರೂ
ತರಳರಂದದಿ । ಹಿಂದೆ । ತಿರುಗುತಿಪ್ಪರೂ ೨೦

ಗ್ರಹಗಳೆಲ್ಲವೂ । ಇವರ್ಗೆ । ಸಹಾಯವಾಗುತಾ
ಅಹೋ ರಾತ್ರಿಲಿ । ಸುಖದ । ನಿವಹ ಕೊಡುವವೂ ೨೧

ವ್ಯಾಧಿ ಬಾರದೂ । ದೇಹ । ಬಾಧೆ ತಟ್ಟದೂ
ಆದಿದೇವನಾ । ಸು ಪ್ರ । ಸಾದವಾಹದೂ ೨೨

ಪತಿತ ಪಾಮರಾ । ಮಂದ । ಮತಿಯು ನಾ ಬಲು
ಸ್ತುತಿಸಲಾಪನೇ । ಇವರ । ಅತಿಶಯಂಗಳಾ ೨೩

ಕರುಣದಿಂದಲಿ । ಎಮ್ಮ । ಸೊರೆವನಲ್ಲದೇ
ದುರಿತ ಕೋಟೆಯ । ರಾಶಿ । ತರಿವ ದಯದಲೀ ೨೪

ಮಂದಮತಿಗಳೂ । ಇವರ । ಅಂದವರಿಯದೇ
ನಿಂದ್ಯ ಮಾಡಲೂ । ಭವದ । ಬಂಧ ತಪ್ಪದೂ ೨೫

ಉದಯ ಕಾಲದೀ । ಈ । ಪದವ ಪಠಿಸಲೂ
ಮದಡನಾದರೂ । ಜ್ಞಾನ । ಉದಯವಾಹುದೂ ೨೬

ಇಂದಿರಾಪತಿ । ಇವರ । ಮುಂದೆ ಕುಣಿವನೂ
ಅಂದ ವಚನವಾ । ನಿಜಕೆ । ತಂದು ಕೊಡುವನೂ ೨೭

ಸಟೆಯಿದಲ್ಲವೋ । ವ್ಯಾಸ । ವಿಠಲ ಬಲ್ಲನೋ
ಪಠಿಸಬಹುದಿದೂ । ಕೇಳಿ । ಕುಟಿಲ ರಹಿತರೂ ೨೮

## ೧೦೬

ದಯ ಮಾಡೊ ಪ್ರೀಯಾ ದಾಸರ ಶುಭೋ–
ದಯ ವಿಜಯರಾಯ ಸಾ ।
ಹಯವಾಗಿ ಒದಗುವೋ
ಭಯ ನಿವಾರಣ ಮಾಡಿ ಪ

ಪ್ರಬಲವಾಗಿಹ ಮೋಹ ನಿಬಿಡವಾದದರಿಂದ
ಅಭಯದಾಯಕ ನಿನ್ನ ಶುಭವಾದ ಪಾದಕ್ಕೆ
ಅಭಿವಂದಿಸದಲೆ ಅಲ್ಪರ ಸೇರಿ
ಅಬಲನಾಗುತಲೆ ಪಾಪದ ವನಧಿ
ಗಭೀರ ನೋಡದಲೆ ಬಾಳಿದೆ ಯನ್ನ
ಅಭಿಮಾನದೊಡೆಯನೆ ಅಗಡು ಮಾಡದಲೆ ೧

ನೆರೆ ನಂಬಿದವರಿಗೆ ದುರಿತ ರಾಶಿಯ ಕಳೆದು
ಪರಿ ಪರಿ ವರಗಳ ಗರೆವ ಕಾರಣ ನಿನ್ನ
ಬಿರಿದು ನಾ ಬಲ್ಲೆ ಎನ್ನಯ ಭಾರ
ಸರಿ ನಿನ್ನದಲ್ಲೆ ಲೌಕೀಕದ
ಪರಿ ಮತ್ತೊಂದೊಲ್ಲೆ ಇಹಪರದಲ್ಲೆ
ಪರಮ ಸೌಖ್ಯಕೆ ನಿನ್ನ ಸ್ಮರಣೆ ವಂದಲ್ಲೆ ೨

ಪಾಮರ ಜನರಿಗೆ ಸುಮಾರ್ಗಗೋಸುಗ
ಶ್ರೀಮನೋಹರ ನಿನ್ನ ಪ್ರೇಮದಿಂದಲಿ ಸೃಜಿಸಿ
ಭೂಮಿಯೊಳಿಡಲೂ ಹರಿಯ ದಿವ್ಯ
ನಾಮ ನಾ ಬಿಡಲು ದುರ್ವಿಷಯವ
ಕಾಮಿಸಿ ಕೆಡಲೂ । ಸುಮ್ಮನಿರದೆ
ಯಾಮ ಯಾಮಕೆ ನಿನಗೆ ನಾ ಮೊರೆಯಿಡಲೂ ೩

ಜಗದಂತರ್ಯಾಮಿಯ ಹಗಲು ಇರುಳು ಬಿಡದೆ
ಸುಗುಣ ಮಾರ್ಗದಲಿದ್ದು ಬಿಗಿಯಾದ ಕವನಕ್ಕೆ
ಬಗೆ ತೋರಿದವನೆ ಹರಿಯ ಕ್ಷಣ
ಅಗಲದಿದ್ದವನೆ ಕಾಮದ ಬಲಿಗೆ
ಸಿಗದೆ ನಡೆವವನೆ ಅನುನಯದಿ ಕರವ
ಮುಗಿದು ಬೇಡುವರಲ್ಲಿ ಮುದದಿಂದ ನಲಿವನೆ ೪

ಎನ್ನೊಬ್ಬಗಲ್ಲ ಈ ಬಿನ್ನಪ ಕರುಣಾಳೆ
ನಿನ್ನ ಪೊಂದಿದವರ ಮನ್ನಿಸಿ ಸಲಹಯ್ಯಾ

ಬೆನ್ನು ಬಿಡದಲೆ ವ್ಯಾಸ ವಿಠ–
ಲನ್ನ ಪಾಡುತಲೆ ಕಾಲವ ಕಳೆವ
ಸನ್ಮಾರ್ಗವನೆ ತೋರೋ ತಡಮಾಡದಲೆ ೫

## ೧೦೭

## ವೇಣುಗೋಪಾಲದಾಸರ ಸ್ತೋತ್ರ

ಕರೆದು ಕೈ ಪಿಡಿಯೊ ಎನ್ನ ವೇಣುದಾಸ
ದೊರೆಯೆ ಪತಿತ ಪಾವನ್ನ ಪ

ಕರೆದು ಕೈ ಪಿಡಿಯೊ ನೀ ಕರಬಿಡದೆ ನಿನ್ನ
ಚರಣವೆ ಗತಿಯೆಂದು ಮರೆ ಬಿದ್ದ ಮನುಜನ್ನ ಅ.ಪ.

ವಿಜಯರಾಯರ ಪಾದವ ಆದರದಿಂದ
ಭಜಿಸಿ ಸಂತತ ಮೋದವಾ
ನಿಜವಾಗಿ ಹೃದಯ ಪಂಕಜದೊಳಾಗಲು ಭವ
ವ್ರಜದೊಳು ಮುಣಗಿಪ್ಪ ಸುಜನ ಶಿರೋಮಣಿ
ತ್ರಿಜಗ ವಂದಿತ ಗಜವರದ ಪಂ–
ಕಜಪಿತ ಪಿನಾಕ ಜನರ ಕೂಡಾ ಸಾ–
ಹಜ ಭಕುತಿಯಲಿ ಯಜಿಸಿ ಮೋಹ
ವೃಜನ ದಾಟಿ ದ್ವಿಜವರಾಗ್ರಣಿ ೧

ಸಂತರ ಸಲಹುವನೇ ಸಂಗಡಲೇ ನಿ–
ಶ್ಚಿಂತರ ಮಾಡುವುದೇ
ಎಂತು ಪೇಳಲು ಎನಗಂತು ತೋರದು ದುಷ್ಟ
ಭ್ರಾಂತಿಯಿಂದಲಿ ಮಾಳ್ಪ ಕಂತುಗಳಿಗೆ ಲೇಶ
ಅಂತ ಕಾಲಕ್ಕೆ ಚಿಂತಾಕಾಲಯಾ
ಪಂಥ ಸಾರುವದಿಂತು ಸರಿ ಜಗ–

# ಸಂಪ್ರದಾಯದ ಹಾಡು

## ೧೦೮

### ವೆಂಕಟೇಶನ ಉರುಟಣೆಯ ಹಾಡು

ಜಯ ಜಯ ವೆಂಕಟರಮಣ । ಜಯತು ಪನ್ನಂಗ ಶಯನಾ
ಜಯತು ಭಾರ್ಗವಿ ರಮಣಾ । ಜಗದಾಭಿ ರಮಣಾ ಪ

ಲೋಕನಾಯಕ ಸ್ವಾಮಿ । ವೈಕುಂಠಾದಿಂದ ಬಂದೂ
ಏಕಾಂತವಾನಾಡಿದಾ । ಲಕ್ಷ್ಮೀಯರೊಡನೆ ೧

ಧರೆಗೆ ವೈಕುಂಠಾದ । ಚರ್ಯವ ತೋರುವೆನೆಂದು
ಶಿರಿ ಮಹಾಲಕ್ಷ್ಮೀಯೊಡನೆ । ಸಂಧಿಸಿದಾನೂ ೨

ಸ್ವಾಮಿ ಕಾಸಾರದಲೀ । ಧಾಮಾವ ರಚಿಸೂವೆ
ಆ ಮಹಾ ವೈಕುಂಠಾವ । ಅಗಲೀ ಬಂದೂ ೩

ವತ್ಸರ ಕಾಲದಲೊಂದು । ಉತ್ಸವ ಮಾಡುವೆನೆಂದು
ಇಚ್ಛೆ ಮಾಡಿದನೂ ವೆಂಕಟ ಇಂದಿರೆಗೂಡಿ ೪

ನವರಾತ್ರಿ ದಿವಸದಲೀ । ವಿವಾಹ ಲಗ್ನವ ರಚಿಸೀ
ಅವನಿಯೊಳು ಡಂಗುರವನ್ನು ಹೊಯಿಸೀದ ಸ್ವಾಮೀ ೫

ಕಾಶಿ ಕರ್ನಾಟಕದ । ದೇಶಾ ದೇಶದ ಜನರು
ಶ್ರೀಶಾನುತ್ಸವಕೇ ಜನರು ಒದಗೀದರಾಗಾ ೬

ಹದಿನಾಲ್ಕು ಲೋಕಾದ । ಪದುಮಜಾದಿಗಳೆಲ್ಲಾ
ಮದುವೆಯಾ ದಿಬ್ಬಣದಾ । ಜನರು ಬಂದರಾಗಾ ೭

ಗರುಡಾ ಕಂಬದ ಸುತ್ತಾ । ಪರಿಪರಿ ವೈಭವದಿಂದ
ಗಿರಿಯಾ ವೆಂಕಟಗೇ । ಕಂಕಣ ಕಟ್ಟಿದರಾಗಾ ೮

ಆಗಮಾ ಪುರಾಣ । ರಾಗ ಮದ್ದಳೆ ತಾಳ
ಭಾಗವತರೂ ಸುತ್ತ ಮಾಡುತಿರಲೂ ೯

ತಾಳ ತಮ್ಮಟೆ ಕಾಳೆ । ಭೋರೆಂಬೋ ವಾದ್ಯಗಳೂ
ವರ ನಾರಿಯರು ಸುತ್ತಾಗ್ಹಾಡುತಿರಲೂ ೧೦

ಚಿನ್ನದ ಕರಿಮಣಿ । ರನ್ನ ಮಂಗಳಸೂತ್ರ
ಹಿರಿಯಾ ವೆಂಕಟನೂ ಲಕ್ಷ್ಮೀಗೆ ಕಟ್ಟಿದ ನಗುತಾ ೧೧

ಮುತ್ತಿನಾ ಕರಿಮಣಿ । ರತ್ನ ಮಂಗಳಸೂತ್ರಾ
ಸ್ವಾಮಿ ವೆಂಕಟ ಲಕ್ಷ್ಮೀಗೆ ಕಟ್ಟಿದ ನಗುತಾ ೧೨

ಅಂತರಾ ಮಾರ್ಗದೊಳೂ । ನಿಂತು ದೇವತೆಗಾಳು
ಸಂತೋಷದಿಂದಲಿ ಜಯ ಜಯವೆಂದು ಪಾಡಿದರಾಗ ೧೩

ಅಂಗಾನೆ ಶ್ರೀ ಭೂಮಿ । ರಂಗಾಮಂಟಪದೊಳಗೆ
ಬಂಗಾರ ಗಿರಿಯಾ ವೆಂಕಟ ಒಪ್ಪಿದ ಸ್ವಾಮೀ ೧೪

ಅತಿರಸಾ ಮನೋಹರ । ಮಿತಿಯಿಲ್ಲದ ಪದಾರ್ಥಗಳೂ
ಸತಿಯರೆಲ್ಲರು ಭೂಮಕೆ ತಂದು ಬಡಿಸಿದರಾಗ ೧೫

ಬೆರದ ನಾರಿಯರೆಲ್ಲ । ಹರಿಭೂಮಾ ನಂತರದೀ
ಭರದಿ ಉರುಟಣಿಗೆ ಅಣಿ ಮಾಡಿದರಾಗಾ ೧೬

ಮಿತ್ರೆ ಲಕ್ಷ್ಮೀಗೆ ತಕ್ಕ । ಹಿರಿಯರು ಪೇಳಲು
ಛಂದದಿಂದಲಿ ಅರಿಷಿನ ಕಲಸಿ ನಿಂತಳಾಗ ೧೭

ದೊಡ್ಡ ಪನ್ನಗ ನಗವಾ । ಸೇರಿದ ಮಹರಾಯ
ದುಡ್ಡು ದುಡ್ಡಿಗೆ ಬಡ್ಡಿಯನ್ನು ದುಡಿವಾ ಲೋಭಿ ೧೮

ವಂಚಿಸಿ ಜನರನ್ನು । ಲಂಚಾ ಲಾವಣಿ ತೆಗೆದು
ಹಿಂಚಾಸಿ ವರ ಕೊಡುವಾ ಹಿತದಾ ದೇವಾ ೧೯

ಬಡವಾ ಬಲ್ಲಿದರೆಂದು । ಬಿಡದಾಲೆ ಅವರಿಂದ
ಮುಡುಪು ಹಾಕಿಸಿಕೊಂಡು (ಮುಂದಕೆ) ಬಿಡುವೋ ದೇವಾ ೨೦

ಅನ್ನವೆಲ್ಲವ ಮಾರಿ । ಹೊನ್ನು ಕಟ್ಟುವೆಯಲ್ಲೊ
ಅನ್ನದಾನವ ಮಾಡಲೊಲ್ಲಿ ಅನ್ಯಾಕಾರಿ ೨೧

ಹೊನ್ನು ಸಾಲವ ತೆಗೆದು । ಎನ್ನಾ ಕಟ್ಟಿಕೊಂಡು
ಮನೆ ಮನೆಗೆ ಭಿಕ್ಷವ ಬೇಡುವ ಮಾನವಂತಾ ೨೨

ಹೊನ್ನು ಸಾಲದು ಎಂದು । ಎನ್ನ ಸಾಕುವೆ ಹೇಗೋ
ನಿನ್ನಾ ಕೃಪಣತನಕೆ ನಾನು ಎಣೆಗಾಣೆನೋ ೨೩

ಇಪ್ಪತ್ತು ದುಡ್ಡೀಗೆ । ಸೇರು ತೀರ್ಥವ ಮಾರಿ
ದುಡ್ಡು ಕಟ್ಟಿ ಜಾಳಿಗೆ ಗಳಿಸುವ ಜಾಣ ನೀನೂ ೨೪

ಅಟ್ಟಾ ಮಡಿಕೆಯಲ್ಲಾ । ಕುಟ್ಟಿ ನಾಮವ ಮಾಡಿ
ಗಟ್ಟಿಯಾಗಿ ಗಂಟು ಗಳಿಸುವ ಘನವಂತಾ ೨೫

ದೇಶದೊಳು ನಿಮ್ಮಂಥಾ । ಆಸೆ ಉಳ್ಳವರಿಲ್ಲ
ಕಾಸು ಕಟ್ಟಿ ಕವಡೆ ಗಂಟು ದುಡಿವ ಲೋಭಿ ೨೬

ಮಡದಿ ನಾನಿರಲಿಕ್ಕೆ । ಕಡಿಮೆ ಏನಾಗೋದು
ಬಡತನ ನಿನಗೆ ಯಾತಕೆ ಬಂತೂ ಸ್ವಾಮೀ ೨೭

ನಾರೀಯಾ ನುಡಿ ಕೇಳಿ । ವಾರೆ ನೋಟದಿ ನೋಡಿ
ಮೋರೆ ತಗ್ಗಿಸಿ ವೆಂಕಟ ಮುನಿದು ನಿಂತಾ ೨೮

ಕಡುಕೋಪಾ ಮಾಡುವರೆ । ಹುಡುಗನಂತಾಡುವರೆ
ಕೊಡಲೀಯ ಪಿಡಿವಾರೆ ನಾನು ನುಡಿದಾ ನುಡಿಗೇ ೨೯

ಕಣ್ಣಾನೆ ಬಿಡಬ್ಯಾಡ । ಬೆನ್ನ ತೋರಲಿ ಬ್ಯಾಡಾ
ಇನ್ನು ಮುಖವಾ । ತಗ್ಗಿಸಬ್ಯಾಡ ಇತ್ತ ನೋಡೂ ೩೦

ಎನ್ನರಸಾ ಹೊನ್ನರಸಾ । ಚೆನ್ನಿಗ ವೆಂಕಟರಾಯಾ
ನಿನ್ನ ಪೋಲುವರ್‍ಯಾರೊ । ಜಗದೊಳು ನೀಲಗಾತ್ರಾ ೩೧

ಎನ್ನರಸಾ ಚೆನ್ನರಸಾ । ಚೆನ್ನಿಗ ವೆಂಕಟರಮಣಾ
ನಿನ್ನ ಮುದ್ದು ಮುಖವ ತೋರೊ ಅರಿಷಿಣ ಹಚ್ಚೇನು ೩೧

ಎನ್ನುತ ಅರಿಷಿಣ । ಹಚ್ಚಿ ಕುಂಕುಮವಿಟ್ಟು
ರನ್ನ ಹಾರವ ಹಾಕಿ ತಾನು ಕುಳಿತಾಳಾಗ ೩೩

ಮಂದರಧರ ತಾನೂ । ಛಂದದರಿಶಿನ ಪಿಡಿದೂ
ಇಂದಿರಾದೇವಿಯನ್ನು ಮಾತನಾಡಿಸಿದಾ ೩೪

ಎನ್ನರಸಿ ಹೊನ್ನರಸಿ । ಚೆನ್ನಿಗ ಮಾಯಾದೇವಿ
ನಿನ್ನ ಮುದ್ದು ಮೊಗವಾನೆ ತೋರು ಅರಿಷಿನ ಹಚ್ಚೇನು ೩೫

ಭಿಡೆಯಾ ನೋಡದೆ ಇಂಥಾ । ನುಡಿಗಳಾಡಿದ ಮ್ಯಾಲೆ
ನಡುಗಿ ಮೋರೆಯ ತಗ್ಗಿಸಲಿಹುದೆ ನಾಚಿಕೆ ಯಾಕೆ ೩೬

ಭಾಗ್ಯಾದ ಮೊಬ್ಬಿಲಿ । ಬಾಗಿ ನೀ ನಡೆಯಾದೇ
ಅಗ್ಗಳಿಕೆ ಮಾತುಗಳನ್ನು ಆಡಿದೆಯಲ್ಲೇ ೩೭

ಮಿಂಚಿನಂದದಿ ಬಹಳಾ । ಚಂಚಲ ಬುದ್ಧಿವಳೇ
ವಂಚಿಸೂವಳೆ ಜಗವಾ ವಾರಿಜಾಕ್ಷೀ ೩೮

ಬಂಗಾರಾ ಮುಡುಪಿಗೆ । ಎನ್ನ ಕಂಗೊಳಿಸೀಗಾ
ಹಿಂಗಾದೆ ಮಂಕು ಮಾನವರ ಮಾಡುವುದರಿದೇ ೩೯

ಮುಡಿಯ ದಂಡೆಗೆ ಮುಡಿಸಿ । ಎಡದ ಕೈಯಲಿ ಬ್ಯಾಗಾ
ತೊಡಕ ಕಂಚುಕ ವೆಂಕಟ ಬಿಗಿದಾ ನಗುತಾ ೪೦

ತಾಂಬೂಲವನೆ ಮೆದ್ದು । ಮಡದಿಯಾ ಮುಖ ಸೂಸೆ
ಇಂಬೀಲ್ಹಚ್ಚೆ ಬರೆದರಾಗ ಅತಿ ಸಂಭ್ರಮದೀ ೪೧

ತಿರುಮಲೇಶನು ತನ್ನ । ಮಡದೀಯನು ಎತ್ತಿ
ಭರದಿಂದಾ ತನ್ನರಮನೆಗಾಗಿ ತೆರಳಿದಾನು ೪೨

ದ್ವಾರದಾದಡಿಯಲ್ಲಿ । ನಾರೇರೆಲ್ಲರು ನಿಂತು
ವಾರಿಜಾಕ್ಷಿ ಪತಿಯ ಹೆಸರಾ ಹೇಳೆಂದರು ೪೩

ಕಿರುನಗೆಯಿಂದ ಲಕ್ಷ್ಮೀ । ಗಿರಿಯಾ ವೆಂಕಟನೆನಲೂ
ಹರಿಯೆ ನಿನ್ನ ರಮಣಿ ಹೆಸರಾ ಹೇಳೆಂದರೂ ೪೪

ಜಾತಿ ನಾಚಿಕೆ ತೊರೆದು । ಶ್ರೀ ತರುಣಿ ಎನುತಾಲೆ
ಪ್ರೀತಿಯಿಂದಲಿ ಸಿಂಹಾಸನದಿ ಕುಳಿತರಾಗಾ ೪೫

ಮತ್ತೆ ನಾರಿಯರೆಲ್ಲಾ । ಮುತ್ತಿನಾರತಿ ಪಿಡಿದೂ
ಸತ್ಯಾಭಾಮೆಗೆ ಜಯ ಜಯವೆಂದರಾಗ ೪೬

ವಿಭುವಿನ ಗುಣವನ್ನು ವಿಸ್ತರ ಪೇಳಿದ ಜನಕೆ
ಸಮಯದಂಥ ಭಾಗ್ಯವನಿತ್ತು ಸಲಹುವ ಸ್ವಾಮಿ ೪೭

ಮಂಗಳ ವೆಂಕಟರಾಯಾ । ಮಂಗಳ ಮಾಧವರಾಯಾ
ಮಂಗಳ ಮಾನಸಗೇಯಾ । ಮಂಗಳ ಮಾಧವರಾಯಾ ೪೮

ಧರೆಯೊಳಧಿಕನಾದ । ದೊರೆ ವ್ಯಾಸವಿಠಲಾನು
ಪರಮ ಭಕ್ತಿ ಸುಜ್ಞಾನವನು ಪಾಲಿಸೂವಾ ೪೯

## ೧೦೯

(ಸೃಷ್ಟಿ ವಿವರ, ತ್ರಿವಿಧ, ಜಡಚೇತನ ಲಕ್ಷಣ ವಿಚಾರ)

**ಧ್ರುವತಾಳ**

ತೊಲಗಿ ಪೋಗುವದಲ್ಲ ತೋಂಡನಾದ ಕಾಲಕ್ಕು
ಜಲಜ ಸಂಭವನು ಅನಾದಿಯಿಂದ
ನೆಲೆಯಾಗಿ ಮಾಡಿದ ಸಂಕಲ್ಪವೆಂದಿಗು
ತಲೆದೂಗಿದರೆ ತಪ್ಪಲರಿಯದಿದಕೋ
ಕಾಲ ಕಾಲಕ್ಕೆ ತಿಳಿಯದ ಕಠಿಣವಾದ ಮೋಹ
ಬಲೆಯೊಳು ಸಿಗಬಿದ್ದು ಭ್ರಮಣನಾಗಿ
ತಿಲ ಮಾತುರ ದುಃಖ ಅನುಭವವಲ್ಲೆಂದು
ಹಲವು ಸೌಖ್ಯಂಗಳ ಹಂಬಲಿಸಿ
ಹಲುಬಿ ಹಲುಬಿ ನಿತ್ಯ ತಳಮಳಗೊಂಡರಾಗೆ
ಫಲವಿಲ್ಲ ಫಲವಿಲ್ಲ ನಿಜವಾಹದು
ಬಲು ಮೂಢತನವುಳ್ಳ ಬಾಲಭಾವದ ಚಂ-
ಚಲ ಬುದ್ಧಿಯನ್ನೆ ಬಿಟ್ಟು ಚತುರನಾಗಿ
ತಿಳಿವ ಮಾರ್ಗವೆ ಕೇಳು ತೀವ್ರದಿಂದಲಿ ನಿ-
ರ್ಮಳ ಪರಿಚ್ಛೇದದಲ್ಲಿ ನಿಲ್ಲಿಸಿಹ ಮನವೆ
ಬಲವಂತಳಾಗಿದ್ದ ಸಿರಿ ಬೊಮ್ಮ ಜೀವ ಜಡ
ಮಿಳಿತವಾಗಿದ್ದ ಜಗವೆ ಚಿದ ಚಿದಾತ್ಮಕವೆಂದು
ಪೊಳೆಯುತ್ತಲಿದೆ ಬಲ್ಲ ಜ್ಞಾನಿಗಳಿಗೆ
ಜಲಧಾರಾ ವರ್ನ ನಮ್ಮ ವ್ಯಾಸವಿಠಲನಂಘ್ರಿ
ನಿಲಿಸಿ ನಿನ್ನೊಳು ಮುಂದೆ ತಿಳಿಯೊ ಇದರ ವಿವರ ೧

## ಮಟ್ಟತಾಳ

ದ್ವಿವಿಧಾತ್ಮಕವಾದ ಜಗವು ನಾಲ್ಕು ಬಗೆ
ವಿವರದಲ್ಲಿಪ್ಪದು ಪ್ರಾಕೃತ ಅಪ್ರಾಕೃತ ವೈಕೃತ
ತ್ರಿವಿಧವು ಅತಿಸ್ಥೂಲ ವೈಕೃತವೆಂದು ಸಂ
ಭವಿಸಿಪ್ಪ ದುಗಡಾ ಒಂದು ಮಾತುರ ಬಿಟ್ಟು
ತವಕದಿನೀಕ್ಷಿಸಲು ಒಂದಕ್ಕೆ ಒಂದಧಿಕ
ದ್ವಿವಿಧವು ಸರಿ ಎನ್ನು ಅನುಮಾನವೆ ಸಲ್ಲಾ
ಪವನನಂತರಯಾಮಿ ವ್ಯಾಸವಿಠಲ ಇಂತು
ನವ ನವ ಕೃತ್ಯವನು ಮಾಡುವನೆಂದರಿಯೊ ೨

## ತ್ರಿವಿಡಿತಾಳ

ವರ್ಣಾತ್ಮಕವಾದ ವೇದ ದೇಶ ಕಾಲ
ಪರಮಾಣು ಪುಂಜ ಪ್ರಕೃತಿಯೆ ನಾಲ್ಕು ಬಗೆ
ಕರಿಸಿಕೊಳುತಲಿವೆ ಪ್ರಾಕೃತ ನಾಮದಲಿ ಚ–
ತುರ ಪದಾರ್ಥಂಗಳು ಚಿರಕಾಲದಿ
ಪರಿಮಿತ ತೊರದು ಬ್ರಹ್ಮಾದ್ಯರಿಗೆ ಅ–
ಪರಿಚ್ಛಿನ್ನವಹದು ಆಗಮ ವಾಕ್ಯವೆ ಸಿದ್ಧಾ
ಪರಿಯ ಕೇಳಿದು ಒಂದರಂತೆ ಒಂದಲ್ಲ ಮುಂ–
ದರಿಯೊ ವಿಕಾರವು ಎಂದಿಗಾದರು
ಚಿರ ಪದಾರ್ಥಂಗಳು ಚಿನ್ಮಯ ಹರಿಯಿಂದ
ಸರಿಯಿಂತು ಜಡದ ವಿಚಾರವೆನ್ನು
ಮರಳೆ ಮನವೆ ಕೇಳು ನಿತ್ಯ ಮುಕ್ತಳು
ಭರಿತಳಾಗಿ ಹರಿಯ ಧೇನಿಸುತ್ತ
ಸ್ಥಿರವಾಗಿ ಇಪ್ಪಳು ಇವುಗಳಲಿ ಸಿದ್ಧಾ
ಅರಿಯಲಾಗದು ಇತರ ಜಡ ಚೇತನಗಳಲ್ಲಿ
ಮರಿಯಲಾಗದು ಚತುರ ಬಗೆ ತತಿ ಜಗದೊಳು
ಸರಿಯಿಂತು ಪ್ರಕೃತಿಯು ಚೇತನಾಚೇತನ
ಪರಮ ಪುರುಷ ವ್ಯಾಸವಿಠಲನಂಘ್ರಿಗೆ
ಎರಗಿ ತಿಳಿಯೊ ಪ್ರಾಕೃತದ ವಿಚಾರ ೩

## ಅಟ್ಟತಾಳ

ಸಾದಿ ಗುಣತ್ರಯ ಮಹದಾಹಂಕಾರವು
ಮೋದದಿಂದಲಿ ಮನ ಗಗನಾದಿ ಪಂಚವು
ಅದೆ ಸರಿ ಆವರ್ಣ ಭೇದದಿಂದ ಶೋಧಿಸೊ
ಬುಧರೊಳು ಪ್ರಕೃತಿ ಭಾಗಗಳೆಲ್ಲ
ಭೇದಿಸಿಪ್ಪವು ನಿತ್ಯವಹುದು ನಾಶವಿಲ್ಲ
ಸಾಧಿಸಿ ತಿಳಿ ಮುಂದೆ ಚೇತನದ ವಿಚಾರ
ವೇದಗರ್ಭನಿಂದ ಶನಿ ಪರಿಯಂತ ವಿ-
ವಾದವಿಲ್ಲದೆ ದೇವತೆಗಳಿಗಿಪ್ಪರು ಎನ್ನು
ಈ ದೇವತೆಗಳ ಅಂಶಗಳು ವಿಚಾರಗಳು
ಕ್ರೋಧ ಮೋಹಗಳಿಲ್ಲ ಅಸುರಾವೇಶವಿಲ್ಲ
ಸಾಧನಕೆ ಜ್ಞಾನ ತಿರೋಹಿತಯಿಲ್ಲ
ಆದರಿಸಿ ನೋಡ ಪ್ರಾಕೃತ ಜಡ ಚೇತ-
ನದ ಸ್ಥಿತಿಯು ಇಂತು ಇತರ ಜೀವರು ಇಲ್ಲ
ವಾದವಿಲ್ಲ ವಿಕೃತ ಇದರಂತೆ ಸಿದ್ಧ ವಿ-
ನೋದದಿಂದಲಿ ಜಡವಧಿಕ ಉಭಯದಲ್ಲಿ
ಬೋಧ ಮೂರುತಿ ನಮ್ಮ ವ್ಯಾಸವಿಠಲ ಜಗ-
ದ್ವೇದನೆಂದು ನಂಬು ಮುಕ್ತಿಲಿ ಇಂಬು ೬

## ಆದಿತಾಳ

ಕೇಳು ವೈಕೃತದೊಳಗೆ ಪಿಂತೆ ಪೇಳಿದವೆಲ್ಲ
ಸಾಲಾಗಿ ಬಂದಿವೆ ಜಡ ಚೇತನಗಳಿಲ್ಲಿಗೆ
ಶ್ರೀ ಲಕುಮಿ ದೇವಾಂಶಿಗಳು ಮೇಲೆ ತ್ರಿವಿಧ ಜಡವು
ಸ್ಥೂಲ ಜಡ ಜೀವರಲ್ಲಿ ಮಿಳಿತವಾಗಿಪ್ಪವು
ಹೇಳುವೆ ಇದರ ವಿನಹಾ ಇತರ ಮುಕ್ತಿ ಯೋಗ್ಯರು
ಖೂಳ ಜನರು ನಿತ್ಯ ಸಂಸಾರಿಗಳು ಇಂತು
ಆಲಸವಿಲ್ಲದೆ ಸಿದ್ಧವಾಯಿತು ವೈಕೃತ
ಲಾಲಿಸು ಜಡ ಚೇತನ ಇವೆ ಸಿದ್ಧ ಇನ್ನೊಂದಿಲ್ಲ

ಪಾಲಸಾಗರ ಶಾಯಿ ವ್ಯಾಸವಿಠ್ಠಲನ ಪಾದ–
ವೆಲ್ಲವಿಂತು ಭಜಿಸಿ ಕೇಳು ಯೋಚನೆ ಬಿಡು ೫

**ಜತೆ**

ನಿತ್ಯಾ ನಿತ್ಯಗಳಲ್ಲಿ ನಿಸ್ಸಾರ ಸಾರವ
ಅತ್ಯಂತದಲಿ ತಿಳಿದು ವ್ಯಾಸ ವಿಠ್ಠಲನ್ನ ಭಜಿಸು ॥

## ೧೧೦

**ಧ್ರುವತಾಳ**

ಶ್ರೀಯರಸನೆ ಶೃಂಗಾರ ಗುಣಾಂಬುಧಿ
ಮಾಯವರ್ಜಿತ ಮದನಕೋಟಿ ತೇಜ
ತೋಯಜ ನಯನ ಸರ್ವ ಜಗದಂತರ್ಯಾಮಿ ಸುರ–
ಗೇಯ ಜ್ಞಾನಾನಂದ ಕಾಯ ಕರುಣಿ
ಹೇಯೋಪಾದೇಯ ರಹಿತ ಹೆಂಗಳ ಮೊರೆಯ ಕೇಳಿ
ಕಾಯಿದ ಮಹಿಮ ಕಂಬು ಚಕ್ರಾಂಕಿತ
ಆಯಾಸ ವರ್ಜಿತ ಅಜಭವಾದಿಗಳಿಗೆ
ಸಾಯುಜ್ಯವಿತ್ತು ಸರ್ವ ಕಾಲದಲ್ಲಿ
ನ್ಯಾಯದಿಂದಲಿ ಸ್ವಸ್ವಾನಂದವನುಣಿಸುತ
ಪ್ರೀಯನೆಂದೆನಿಸುವ ಪ್ರೀತಿವಂತಾ
ಓಯೆಂದು ಕೂಗಿ ನಿನಗೆ ಮಾತು
ಉಸುರುವೆ ಎಮ್ಮ ಗುರು
ರಾಯರಂತರಿಯಾಮಿ ರಘುನಂದನ
ಹೇಯ ಕರ್ಮಗಳೆಂಬೊ ಹೆಬ್ಬುಲಿ ಬಲಿಗೆ ಸಿಲುಕಿ
ಬಾಯ ಬಿಡುವೆನೊ ಸ್ವಾಮಿ ಭಕುತರೊಡೆಯಾ
ಈಯವನಿಯೊಳಗೆ ಇದರಿಂದ ಉಳಿವ ಅನ್ಯೋ–
ಪಾಯವೆಂಬೋದು ಕಾಣೆ ನಿನ್ನ ವಿನಃ

ತಾಯಿ ತನ್ನ ಶಿಶುವು ತನಗೆ ಹರುಷವೆಂದು
ವಾಯು ಸಖಿ ತುಡಿಕೆ ನೋಡುವಳೆ
ನ್ಯಾಯವೆ ಜಗದೊಳಗೆ ಅನಂತ
ತಾಯಿಯಂದದಲಿಪ್ಪ ತಮ ವರ್ಜಿತಾ
ಕಾಯಬೇಕೆನ್ನ ಕರ್ಮ ಕೆಳೆಗ್ಯಾದಿಗೆ ಸಾ–
ಹಾಯವಾಗಿಪ್ಪ ಸತತ ನಿರ್ವಿಕಾರ
ಪೇಯಪನನುಜ ನಮ್ಮ ವ್ಯಾಸವಿಠ್ಠಲ ಮುನಿ
ಗೇಯ ಮುಕ್ತಾಶ್ರಯ ಮುಚಕುಂದ ವರದಾ ೦

## ಧ್ರುವತಾಳ

ಸಾಧನವಾವುದೊ ಸರ್ವ ಕಾಲದಲ್ಲಿ
ಭೂದೇವಿ ರಮಣ ಭೂತಿವಂತ ಕೃಷ್ಣ
ಮೇದಿನಿಯೊಳು ಪುಟ್ಟಿ ಮಿತಿಯಿಲ್ಲದ ಪಾಪ
ಹಾದಿಯ ಪಿಡಿದು ಕೆಟ್ಟೆ ಹರಿಯೆ ಕೇಳೊ
ಕ್ರೋಧ ಮೋಹ ಲೇಶ ಕೊರತೆ ಎಂಬುದು ಕಾಣೆ
ಪಾದುಕ ಬಿಟ್ಟು ನಡೆದ ಪರಿಯಂತವೊ
ಬಾಧೆ ಬಡುವೆನಯ್ಯ ಭವದೊಳು ಸಿಗಬಿದ್ದು
ಏ ದಯಾನಿಧಿಯೆ ಯದುಕುಲ ನಂದನ
ಭೂದೇವ ತತಿಗಳಿಗೆ ಭಕುತಿಯಿಂದಲಿ ಅವರ
ಪಾದಕೆ ಎರಗಿ ಪರಿ ಪರಿ ಸ್ತೋತ್ರವ
ಮೋದದಿಂದಲಿ ಮಾಡಿ ಮೋಕ್ಷ ಮಾರ್ಗವ ಬೇಡ
ದಾದೆ ಬಿಂಕವ ತಾಳಿ ಬಿರಿದಾಂಕನೆ
ಸಾಧಿಸಿಕೊಂಡೆ ನಿರಯದಲ್ಲಿ ಕಷ್ಟಪಡುವ
ಸಾಧನದ ಬಗೆಯನ್ನು ಸಂತೋಷದಿ
ಆದರದಿಂದಲಿ ಆಪ್ತ ನೀನಾಗಿ ಪೂರ್ಣ
ಬೋಧರ ಮತದಲ್ಲಿ ಪೊಂದಿಸಿರಲು
ಓದನದ ವಿದ್ಯವನ್ನು ಒಲಿಸುತ್ತ ಎನ್ನೊಳಗೆ
ಕಾದುವೆ ಜನರ ಕೂಡ ಕಠಿಣದಲ್ಲಿ
ಸಾಧು ಜನರ ವಚನ ಸರ್ವದಾ ಕೇಳಿ ಅನು

ಮೋದನ ಮಾಡದಲೆ ಮದದಿಂದಲಿ
ವೇದ ಶಾಸ್ತ್ರವನೋಡಿ ವೈಜ್ಯದಿಂದಲಿ
ಗಾದಿ ಮಜ್ಜನಗೈದೆ ಗರ್ವದಲ್ಲಿ
ಆದಿ ಮೂರುತಿ ನಮ್ಮ ವ್ಯಾಸವಿಠಲ ಪಂಚ
ಭೇದ ಮಾರ್ಗವ ಕಾಣದಾದೆ ಕರುಣಿ ೧

## ಮಟ್ಟತಾಳ

ಶಬ್ದಾದಿ ವಿಷಯ ಅಬ್ಧಿಯೊಳಗೆ ಮಹಾ
ಹಬ್ಬಿದ ಕರಣಗಳು ದೊಬ್ಬಿ ದುಃಖ ಬಡುವ
ಅಬ್ಬರವೇನೆಂಬೆ ಅನುಪಮ ಚರಿತನೆ
ಹೆಬ್ಬುಲಿ ಎಂತಿಪ್ಪ ಹೆಚ್ಚಿದಹಂಕಾರ
ದುರ್ಭಾಗ್ಯನ ಮಾಡಿ ದುಃಖದೊಳಿಡುವದು
ಕರ್ಬುರರ ಕಾಟ ಕಡಿಮೆಯೆಂಬುದೆಯಿಲ್ಲಾ
ಅರ್ಬುದ ಜನ್ಮಕ್ಕೆ ಆರನಾ ಕಾಣದಾ
ಅರ್ಭಕ ನಾನಯ್ಯ ಅನಿಮಿತ್ಯ ಬಂಧು
ಮಬ್ಬು ಕವಿಸದಿರು ಮನಸಿಜನಯ್ಯನೆ
ಶಬ್ದಗೋಚರನೆ ವ್ಯಾಸವಿಠ್ಠಲ ದು–
ಗ್ಧಾಬ್ಧಿಜ ಪತಿಯೆ ಪಾಪಭ್ರಾನಿಲನೆ ೨

## ತ್ರಿವಿಡಿತಾಳ

ದಾಮೋದರನಂತ ದಶರಥನಂದನ
ರಾಮ ರಾಜ ತೇಜ ರಾಜೀವ ನಯನ
ಮಾ ಮನೋಹರ ಮಧುಸೂದನ ನಿಜಭಕ್ತ
ಸ್ತೋಮ ಪಾಲಕ ಪಾರತಂತ್ರ ರಹಿತಾ
ವ್ಯೋಮಕೇಶನೊಡಿಯ ವ್ಯಾಪ್ತ ಮೂರ್ತಿ ಪೂರ್ಣ
ಧಾಮ ಧಾರಕ ದೈತ್ಯ ಕುಲ ನಾಶನ
ಸಾಮಜವರದ ಸಾಕಾರ ಸಾತ್ವಿಕ ಲ–
ಲಾಮ ಲಕ್ಷಣವಂತ ಲಕ್ಷ್ಮೀಕಾಂತಾ
ಕಾಮಿತ ಜನ ಚಿಂತಾಮಣಿ ರಣರಂಗ

ಭೀಮ ಭಯಂಕರ ಭೀತಿರಹಿತಾ
ಭೂಮಿ ಭಾರಕ ದೈತ್ಯಾ ರಾಮ ಕುಠಾರ ಸುಖ ದುಃ-
ಖಾಂಬುಧಿ ಸೂರ್ಯ ಕೋಟಿ ಪ್ರಕಾಶ
ನೇಮವಿಲ್ಲದೆ ನಿನ್ನ ನಾಮಗಳನಂತ
ಈ ಮಹಿಯೊಳಗುಂಟು ಈಶನೊಡಿಯ
ಯಾಮ ಯಾಮಕೆ ಎನಗೆ ಎಲ್ಲಿದ್ದ ಕಾಲಕ್ಕು
ಸ್ವಾಮಿ ಪಾಲಿಸಬೇಕು ಜಿಹ್ವಾಗ್ರದಿ
ಈ ಮಹಾ ಕಲಿಯುಗದೊಳಗಿಂಬಾವದು ಪಾಪ
ಸ್ತೋಮ ಬತ್ತಿಸಿ ಮುಂದೆ ಗತಿ ಮಾರ್ಗಕ್ಕೆ
ಶಾಮಸುಂದರ ಕಾಯಾ ವ್ಯಾಸವಿಠಲ ಕಾಯೊ
ಪಾಮರ ಮನುಜನ್ನ ಪತಿತ ಪಾವನನೆ ೩

**ಅಟ್ಟತಾಳ**

ಶತಕಲ್ಪವಾದರು ಇತರಾಲೋಚನೆಯಿಲ್ಲಾ
ಮತಿಹೀನ ಜನರಿಗೆ ಯತನದಿಂದಲಿ ನೋಡೆ
ಕ್ಷಿತಿ ಸುರ ಜನ್ಮ ವಿಹಿತವಾಗಿ ಬಂದರು
ಶ್ರುತಿ ಪುರಾಣಗಳಲ್ಲಿ ಚತುರನಾಗಿದ್ದರು
ಕ್ರತು ಮೊದಲಾದದ್ದು ವ್ರತಗಳಾಚರಿಸಲು
ಮತಿವಂತ ಜನರಿಗೆ ನತನಾಗಿ ಇದ್ದರು
ರತುನಾದಿ ಧನಗಳು ಮಿತಿಯಿಲ್ಲದಿತ್ತರು
ಸ್ವತಯೇವ ನಿತ್ಯ ಸದ್ಗತಿಗೆ ಕಾರಣನಲ್ಲ
ಶತಧೃತಿ ಪಿತ ನಿನ್ನ ಹಿತವಾದ ನಾಮ ಸಂ-
ಗತಿಯಾಗದಲೆ ಸಮ್ಮತವಾಗದೆಂದಿಗು
ಯತಿಗಳಾದರು ಮತಿಗೆ ತೋರುವದಿದೆ
ಚ್ಯುತ ವಿದೂರನೆ ನಮ್ಮ ವ್ಯಾಸವಿಠಲ ನಿನ್ನ
ಮತವಿದೆ ಮತವಿದೆ ರತಿಪತಿ ಜನಕಾ ೪

**ಆದಿತಾಳ**

ಎನ್ನ ಯೋಗ್ಯತಾ ಗುರುಗಳಲ್ಲಿ ನೆಲಸಿಪ್ಪ ಸಂ-

ಪನ್ನ ಮೂರುತಿಯೆ ಸರ್ವ ಜಗದಂತರ್ಯಾಮಿ
ನಿನ್ನ ಪಾದವೆ ಗತಿ ನಿಖಿಳ ಬಗೆಯಿಂದ
ಅನ್ಯರೊಬ್ಬರ ಕಾಣೆ ಆವಲ್ಲಿ ನೋಡಿದರು
ಎನ್ನ ಪಾಲಿಸುವರ ಯದು ಕುಲೋತ್ತಮ ಕೃಷ್ಣ
ಅನ್ಯಾಯ ನಡತೆಗಳು ಆಚರಿಸಿದೆನಯ್ಯಾ
ಅನ್ನಂತ ಬಗೆಯಿಂದ ಅತಿ ನಿರ್ಭೀತನಾಗಿ
ಎನ್ನಪರಾಧಗಳು ಎಣಿಸಿದರಾಗೆ ಹರಿಯೆ
ಇನ್ನಾವ ಗತಿ ಕಾಣೆ ಇಹಪರದಲ್ಲಿ ಸಿದ್ಧ
ಬನ್ನ ಬಡುವದೆ ಸರಿ ಬಹುಕಾಲ ನರಕದಲ್ಲಿ
ಅನಾಥ ಬಂಧುವೆ ಅತಿ ದಯಾಪರ ಮೂರ್ತಿ
ಘನ್ನ ಪತಿತ ಪಾವನ್ನ ಘನ್ನ ಭವಾಂಬುಧಿ ನಾವ
ಇನಿತು ಬಿರಿದು ಉಳ್ಳ ಇಭರಾಜ ವರದನೆ
ನಿನ್ನ ಮೊರೆ ಬಿದ್ದೆ ಎನ್ನ ಮರೆಯದಿರು
ಅನಾಥ ಬಂಧು ದೇವ ವ್ಯಾಸವಿಠಲರೇಯಾ
ನಿನ್ನ ಜ್ಞಾನವ ಕೊಟ್ಟು ನಿರ್ಭೀತನ ಮಾಡೊ ೫

**ಜತೆ**

ಯೇನಮ್ಮೋಚಯಾಮಿ ಎಂಬೊ ಇಚ್ಛೆಯು ಒಂದೆ
ಕಾಣಿಸುವದು ಸಾಧನ ವ್ಯಾಸವಿಠ್ಠಲ ಎನಗೆ ॥

೧೧೧

## ಶ್ರೀಲಕ್ಷ್ಮೀದೇವಿಯ ಸ್ತೋತ್ರ

**ಧ್ರುವತಾಳ**

ಚಿತ್ತ ಚಂಚಲಿಸದೆ ಚೆನ್ನಾಗಿ ನಿಂದೆ ಶ್ರೀ
ಸತ್ಯಬೋಧಾರ್ಯರಲ್ಲಿ ಶ್ರೀ ಲಕ್ಷ್ಮೀಯು

ಅತ್ಯಂತ ಅಜಭವ ರುದ್ರ ಇಂದ್ರಾದಿಗಳ
ಒತ್ತಿಯಾಳುವಂಥ ವಾರಿಜ ಸದನೆ
ಪೃಥಿವಿಯೊಳಗೆ ನಿನಗೆ ಪ್ರತಿ ಕಕ್ಷಿಗಳಿವರೆಂದು
ಮತ್ತೆ ನೀ ಸೋತು ನಿಂತೆ ಮಾತಾಡಮ್ಮಾ ನೈ-
ಮಿತ್ಯ ಮಹಾ ಪ್ರಳಯದಲ್ಲಿದೆ ಹರಿಯ ಪೂಜೆ
ಅತ್ಯಂತವಾಗಿ ಮಾಡಿ ಧನ್ಯಳಾದೆ ಇಲ್ಲಿ
ನಿಂತು ಮುನಿಪ ದಿನ ದಿನ ರಾತ್ರಿಯಲ್ಲಿಯೆ
ಚಿತ್ತು ಪೂಜಿಸುವಂಥ ಬೆಡಗು ನೋಡಿ
ಎತ್ತ ಮರುಳಾಗಿ ಬಂದೆ ವರದಿ ಭಯದಿ ಇರುವ ವಶವಾದ್ಯೋ
ಉತ್ತರ ಇದಕ್ಕೊಂದು ತಿಳಿಸಬೇಕು
ಹತ್ತಾವತಾರ ನಮ್ಮ ವ್ಯಾಸವಿಠಲನ್ನ ಪಾ-
ಡುತ್ತ ಸುಖಿಸುವಂಥ ಪಾವನಚರಿತಳೆ ೧

## ಮಟ್ಟತಾಳ

ಜಲಜನಾಭಗೆ ನೀನು ಸಲಿಗೆ ಬಿನ್ನೈಸಿದೆ
ಹಲವು ಬಗೆಯಿಂದ ಸ್ಥಿತಿಕಾಲದಿ ನಿನಗೆ
ಕುಳಿತಿರಲಿಂಬಿರದೆ ದೇವತೆಗಳ ಸರಿ ತಾ
ಬಲು ಬಗೆಯಲ್ಲಿ ಜಗದ ವ್ಯಾಪಾರವು ನಿನಗೆ
ನೆಲೆ ಇಲ್ಲವು ನೋಡೆ ಇದರಿಂದಲಿ ನಿನ್ನ
ಸಲೆ ಸಂಪೂಜೆ ನಿಚ್ಚಳ ಮುಗಿಯದು ಎಂದು
ಪ್ರಳಯದಿ ನೀನೆ ಸೇವೆ ಪಾಲಿಸಲಿಲ್ಲೆಂದು ಬೇಡೆ
ನೆಲೆಯಾಗಿ ನಿನಗೆ ವರವಿತ್ತನು ನೋಡಾ
ಬಲಿಮರ್ದನ ನಮ್ಮ ವ್ಯಾಸವಿಠ್ಠಲನ್ನ
ಘಳಿಗೆ ಬಿಡದೆಯಿಪ್ಪ ಬಲವಂತಳೆ ಕೇಳು ೨

## ತ್ರಿವಿಡಿತಾಳ

ಸಾಧನ ಲೋಭದಿ ಶ್ರೀ ಸತ್ಯಬೋಧರು
ಆದಿಯಿಂದ ಹೇಗೆ ಬಿನ್ನೈಸಿದರು ಭೂ ದೇವ ಜನು-
ಮದಿ ಹಗಲು ಸ್ನಾನ ಜಪ ಆದಿ ವ್ಯಾಖ್ಯಾನ ಕಾರಣದಲ್ಲಿ

ಸಾಧಿಸಿದರು ಮನಕೆ ಸಾಲದೆನಿಸಿ ಯಲ್ಲೆ
ಮೋದ ಮನಸಿಲಿ ಹರಿಯ ಪೂಜಿಪೆನೆಂದು "ಸತ್ಯ
ಬೋಧಾ ನಿದ್ರೆಯಾ ನಿದ್ರೆ ಆಹಾರ ರಾಗತಃ ಪ್ರಾಪ್ತಿ"
ಯಾದದೆ ನಿಜವೆಂದು ನೀ ಕರಿಸೆ
ಶ್ರೀದೇವಿ ನಿನ್ನ ಕೂಡ ಸೆಣಿಸಲು ಮನದೆಗಿ–
ಯದೆ ನಿಂತ್ಯೋ ಹೇಗೋ ವ್ಯಾಸವಿಠ್ಠಲನ ರಾಣಿ 3

**ಅಟ್ಟತಾಳ**

ಆ ಮಹಾ ಪ್ರಳಯದಿ ಬ್ರಹ್ಮಾದಿಗಳ ಕಾರ್ಯ
ಒಮ್ಮಿಗು ಕೊಳದಂತೆ ಹರಿ ಉದರದೊಳಿಟ್ಟು
ಈ ಮಹಾ ಮುನಿಗಳು ಹಿಮ್ಮಟ್ಟಿ ಅಂಜದೆ
ಅಮ್ಮನೊ ವೃತ್ಯಾಭಿಮಾನಿ ದೇವತೆಗಳ
ಘಮ್ಮನೆ ಕರುಣಾಭಿಮಾನಿ ದಿವಿಜರನೆಲ್ಲ
ತಮ್ಮ ಸ್ಥಾನದಲ್ಲಿ ಸುಮ್ಮನೆ ಇರಪೇಳಿ
ಘಮ್ಮನೆ ಚಿನ್ಮನಸಿನ ಕಾರ್ಯ ಪ್ರಾಚುರ್ಯ
ಆ ಮಹಾಮಹಿಮನ ಅರ್ಚಿಪರು ಅನು
ಪಮ ಮೂರುತಿ ನಮ್ಮ ವ್ಯಾಸವಿಠಲನ್ನ
ಸಮಾನವೆನಿಪಳೆ ಸಾಕು ನಿನ್ನ ಬರಿದು 4

**ಆದಿತಾಳ**

ಮತ್ತೆ ಜಲ ಭೂಮಿ ಬಗೆ ಬಗೆ ವಸ್ತುಗಳಿಂದ ಹರಿಯ
ಜತ್ತಾಗಿ ಪೂಜಿಸಿದೆನೆಂಬೊ ಗರ್ವವೆ ಬೇಡ
ಮತ್ತೆ ನಮ್ಮ ಗುರುಗಳು ವಾಸನಮಯದಿಂದ
ಮುತ್ತು ಮಾಣಿಕ ರಜತ ಹೇಮ ಚಾಮರ ನವ
ರತ್ನಖಚಿತವಾದ ಮಂಟಪ ಕುಸುಮಗಳು
ಛತ್ರ ಪರಿಮಳ ಭೋಜನಗಳು ನಿತ್ಯ ಈ ಬಗೆ ನಿರ್ಮಿಸಿ
ಇತ್ತ ಇದರ ವಿನಃ ಬಾಹ್ಯ ಪೂಜೋಪಸ್ಕಾರ ವಸ್ತ್ರಾಭರಣ
ವಿತ್ತು ನಿತ್ಯ ಎಲ್ಲ ಪರಿ ಇತ್ತಂಡವಾಗಿ ಹರಿಯಾರಾಧನೆ ಮಾಡಿದರು

ಯತ್ನವಿಂದು ಕೊಳ್ಳದು ಏನು ಮಾಡಲೆಂದು ಇವರ
ಚಿತ್ತವನುಸರಿಸಿ ತಿದ್ದಿಕೊಂಡ ಬಗೆಯೊ ದೂ-
ರತ್ತ ಪೋದರೆ ಮತ್ತಿನೇನಾಹದೆಂಬೋ ಚಿಂತ್ಯೋ
ಸತ್ಯಭೋಧರ ದಿವ್ಯ ಭಕ್ತಿಗೊಲಿದು ನಿಂದ್ಯೊ ಕೃತ್ಯ
ಮತ್ತೊಂದು ಬಿಡದೆ ಎನಗೆ ತೋರುವುದು ಪ್ರೀತಿಲಿ
ಹತ್ತಿಲಿರುವುದು ನಿಗಮ ಸಮ್ಮತವೆಂಬೊ ಬಗೆಯೊ
ಭೃತ್ಯವತ್ಸಲ ನಮ್ಮ ವ್ಯಾಸವಿಠ್ಠಲನ್ನ
ಅತ್ಯಂತ ಪ್ರಿಯಳೆ ಅನುವಾಗಿ ತಿಳಿಸಬೇಕು 3

**ಜತೆ**

ಆವ ಬಗೆಯಲಿ ನಿನ್ನ ಭಕ್ತರ ಬಿಡದಿಪ್ಪ
ಭಾವ ನಿನ್ನದೆ ನಿಜವು ವ್ಯಾಸವಿಠಲನ ರಾಣಿ ॥

## ೧೧೨

## ಬ್ರಹ್ಮದೇವರ ಸ್ತೋತ್ರ*

**ಮಟ್ಟತಾಳ**

ಅಂಬುಜ ಭವನಯ್ಯ ಕಂಬು ಚಕ್ರಪಾಣಿ
ಶಂಬರಾರಿ ಜನಕ ಶಾಮ ಸೀತಾಂಗ ಹೃದ
ಯಾಂಬರ ನಿವಾಸಾ ಹಂಬಲಿಸುವ ಜನಕೆ ಹಗಲಿರುಳು ಬಿಡದೆ
ಬೆಂಬಲವಾಗಿದ್ದು ಬೇಡಿದಾ ದಿವಾರಾತ್ರಿ ತ್ರಿ-
ಯಂಬಕ ಸಹಾಯ ತ್ರಿಗುಣ ರಹಿತ ಕಾಯಾ
ತುಂಬುರಾದಿ ವಂದ್ಯ ತುರಿಯ ನಾಮಕ ದೇವ
ಅಂಬುಚರಗೆ ಸಿಲಿಕಿ ಅಳಲಿ ಬಹುಕಾಲಾ

---

* ಮೊದಲನೆಯ ನುಡಿ ಸಿಕ್ಕಿಲ್ಲ.

ಇಂಬುಗಾಣದೆ ನಿನ್ನ ಇಚ್ಛೈಸಲು ಬಂದು
ತಂಬಲಾ ಪಾಣಿಯಲಿ ತಡವರಿಸಿದ ಕರುಣಿ
ಮುಂಬಿಸಿಲಿಗೆ ಕುಮುದ ಮುದರಿದಂತೆ ಆ
ರೆಂಬ ಕರ್ಮವು ಎನ್ನ ಅಣಗೊತ್ತಿದವೇ
ನೆಂಬೆ ವಿಶ್ವಮೂರ್ತಿ ವಿಹಂಗ ಗಮನ ವಿಭುವೆ
ನಂಬಿದವರ ಪೊರೆವ ವ್ಯಾಸವಿಠಲ ನೀ–
ನೆಂಬುವರನ ನಂಬಿದ ನೀಚನ ಮರಿಯಾದಿರು ೨

## ತ್ರಿವಿಡಿತಾಳ

ಶ್ರವಣದಲಿ ಮನಸು ಲವ ಮಾತ್ರ ಎರಗದು
ಕವಿಗಳ ಒಡನೆ ಸ್ನೇಹವ ಬಳಸದು
ರವಿ ಉದಯಸ್ತಮಾನ ದಿವಸದೊಳಗೆ ಮಾ–
ಧವನೆ ನಿನ್ನಯ ನಾಮವ ಜಿಹ್ವೆ ನುಡಿಯದು
ಸವಿಯದ ನಾನಾ ರಸವನುಂಡು ಬಹುಕಾಲ
ಸವೆದು ಪೋದವು ನಟ್ಟ ಮನವು ಇನ್ನು ತಿರಗದು
ತವ ವಿಸ್ಮೃತಿಯಲಿಂದ ಭೂ ವನದೊಳಿದ್ದ ಮಾ–
ನವರ ಚರಿಯದಲಿ ಕೋಪವೆ ತಗ್ಗದು
ಎವೆ ಇಡುವಿನಿತು ಕಾಲವಾದರು ಪೂಜಾ
ವಿವರದಲ್ಲಿಗೆ ಚಿತ್ತವು ನಿಲ್ಲದು ಭವವಿದೂರನೆ ಕೇಳು
ಕವಲ ಬುದ್ಧಿಯಲಿಂದ ನವನವ ರೂಪದ ಯುವತಿಯರ
ನಿವಹದ ಅನುಭವ ದ್ವಿವಿಧವಿಂದಿಗೇ ಕಾ–
ಯವ ನೋಡಲಿದ್ದಂತೆ ಇಲ್ಲದಂತೆ
ಧ್ರುವದಲಿ ನುಡಿವೆ ಎನ್ನವಗುಣವಿನ್ನೊಂದು
ಭವಸಾಗರವ ದಾಟಿಸುವ ಜ್ಞಾನಿಗಳ ಪ್ರೀತಿಯನೆ ತ–
ಗ್ಗುವಂತೆ ಚತುರ ತೋರುವೆ
ಇವುಗಳಿಂದಾಗುವ ಜನನ ಬಾಧಿಯ ಬಲ್ಲೆ
ಜೀವರಲ್ಲಿ ಹೀನ ಜನ್ಮವ ಬರುವದು ಬಲ್ಲೆ
ಸ್ಥಾವಿರಾಯ ವ್ಯಾನಾದಿ ನೆಗುವವು ಪುಣ್ಯಾಖ್ಯಗಿರಿಗೆ
ಪವಿಯಂಬದನುಗಾಲ ಪಠಿಸಬಲ್ಲೆ

ಪವನನಂತರ್ಯಾಮಿ ಶ್ರೀವ್ಯಾಸವಿಠಲ ಇಂಥ
ಅವಿವೇಕ ಮನುಜಂಗೆ ಆವಗತಿಯಾಗುವದೊ ೩

### ಅಟ್ಟತಾಳ

ಅನ್ಯಾಯ ನಡತಿಗಳ ಚರಿಸುತಲಿಪ್ಪ
ಮನುಜಾಧಮನಿಗೆ ಮಹಿಯೊಳಗೆ ವಿಪ್ರ
ಜನ್ಮವ ನೀನಿತ್ತದಾವ ಬಗೆಯ ಕಾಣೆ
ಇನ್ನೀಗ ಮಾಡುವ ಅನ್ಯಾಯ ನಡತಿಯು
ತಣ್ಣನ ಕಿಡಿಯಂತೆ ತತ್ಕಾಲಕಿಪ್ಪದು
ಘನ್ನ ಬವಣೆ ಮುಂದೆ ಅನುಭವವೇ ನಿಜ
ಪನ್ನಗ ಶಯನ ಶ್ರೀ ವ್ಯಾಸವಿಠ್ಠಲ ಸುಪ್ರ
ಸನ್ನ ವದನ ದೇವ ನಿನ್ನ ಪಾದವೆ ಗತಿ ೪

### ಆದಿತಾಳ

ನಿನ್ನ ದಾಸರ ಪಾದ ಚೆನ್ನಾಗಿ ಪೊಂದಿಸಿ
ನಿನ್ನವನಿವನೆಂದು ಮನುಜರಿಂದ ನುಡಿಸಿ
ನಿನ್ನ ಕೀರ್ತನೆಯ ವದನದಿಂದ ಪೇಳಿಸಿ
ಇನ್ನು ಈ ಬಗೆ ಮಾಳ್ಪರೆ ಘನ್ನದಯಾಂಬುಧೇ
ಮನ್ನ ವಾಚ ಕಾಯದಿ ಅನ್ಯಾಯ ಪೆಚ್ಚಿಸದೆ
ಎನ್ನ ಬೆಳವಿಗೆಯಂತೆ ಬೆಳಸದಂತೆ ಮಾಡಿದೆ
ಮನ್ನಣಿಸುವ ಜನರಿಂದ ಮಾಂದ್ಯವ ಮಾಡಿಸಿದೆ
ಸನ್ಯಾಯವಲ್ಲ ಧೊರಿಯೆ ನಿನ್ನ ಚಿತ್ತವೊ ಸ್ವಾಮಿ
ಸನ್ಮುನಿಗಣ ಪ್ರೀಯ ವ್ಯಾಸವಿಠ್ಠಲರೇಯಾ
ನಿನ್ನವರವನೊ ನಿನ್ನ ಸರಿ ಬಂದ ಬಗೆ ಮಾಡೊ ೫

### ಜತೆ

ವೇಣುಗೋಪಾಲ ದಾಸರ ಮನ ಮಂದಿರಾ ।
ಪ್ರಾಣ ನಿನ್ನದೊ ವ್ಯಾಸವಿಠ್ಠಲ ಗೋಪಾಲಕೃಷ್ಣ ॥

## ಉಗಾಭೋಗ

### ೧೧೩

ಅನಾದ್ಯನಂತ ಕಾಲದಲಿ ನೀ ನಿರ್ದೋಷ
ಅನಾಥ ಬಂಧುವೆ ಆಪ್ತ ಕಾಮ
ಅನವರತ ನಿನ್ನಾಧೀನದವನಯ್ಯ
ಕಾಣೆ ನಿನ್ನಗಲಿಪ್ಪ ಕಾಲವನ್ನು
ಜ್ಞಾನೇಚ್ಛ ಪ್ರಯತ್ನ ಚೇತನ ನಿಷ್ಠವೊ ॥
ತಾನಾದರಾಗಲಿ ತನ್ನಿಯಾಮಕ ನೀನು
ಈ ನೀತಿ ಸಿದ್ಧವಾಗಿದೆ ಹಾನಿ ವೃದ್ಧಿಗೆ
ನಾನೆ ಕಾರಣನಲ್ಲಾನಂದ ಮೂರ್ತಿ
ಪ್ರಾಣಾಂತರ್ಯಾಮಿ ಶ್ರೀ ವ್ಯಾಸವಿಠ್ಠಲರೇಯ
ನೀನಿಟ್ಟ ಪರಿಯಲ್ಲಿ ನಿಜವಾಗಿ ಇರುತಿಪ್ಪೆ ॥

## ೧೧೪

ಕರುಣಿಸಿ ವೃಷ್ಟಿಗರಿ ಕಮಲನಯನ
ನರರಪರಾಧಗಳ ನೋಡದಲೆ ವೇಗದಲಿ ಪ

ಅನ್ನದಿಂದಲೆ ಭೂತಗಣವು ಉದ್ಭವಿಸುವುದು
ಅನ್ನದಿಂ ತ್ರಿವಿಧ ಸಾಧನ ಪೂರ್ತಿಪದು ॥
ಅನ್ನದಿಂದಲೆ ಅಭಿವೃದ್ಧಿ ಆಹದರಿಂದ ಪ-
ರ್ಜನ್ಯದಿಂದಲಿ ಅನ್ನ ಜನಿಸುವ ಕಾರಣದಿ ೧

'ಭೀಷಾಸ್ಮಾದ್ವಹತಿ ಪವತಿ' ಎಂಬೋಕ್ತಿಯಲಿ
ಈ ಸಮಸ್ತಮರರೂ ನಿನ್ನ ಭಯದಿ ॥
ಬ್ಯಾಸರವೆ ತಮ ತಮ್ಮ ವ್ಯಾಪಾರಗಳ ಮಾಡಿ
ಪೋಷಿಸುವರು ಜಗವ ಪ್ರೀತಿಯಿಂದ ೨

ವರುಷನ್ನ (ವರುಷನನು) 'ಘೃಣ್ಣಾಮಿ ಸೃಜಾಮಿ ಚ' ಎಂದು
ಹರಿಯೇ ನಿನ್ನಿಂದಲೆ ವಿಹರಿಸಿತು ॥
ಸುರಪತಿಯ ವರುಣಾದಿ ಸುರರು ನಿಮಿತ್ಯ ಮಾತ್ರ
ಪರಮ ಗುಣಸಾಂದ್ರ ಹೇ ಕರುಣಾಬ್ಧಿ ಚಂದ್ರ ೩

ನರನೊಬ್ಬ ಪ್ರಭು ತನ್ನ ಪರಿಚಾರಿಗಳನ್ನು
ಪರಮ ಅಭಿಮಾನದಲಿ ಪರಿಪಾಲಿಪ ॥
ಸುರರ ಬ್ರಹ್ಮಾದಿಗಳ ದೊರೆಯ ನಿನಗೀ ಮಾತು
ಸರಿಹೋದರೆ ವಚನ ಸಲಿಸು ಕೃಪೆಯಿಂದ ೪

ಆವಾವ ಸಾಧನದಿ ಆವ ಸುಖವೈದುತಿರೆ
ದೇವ ನಿನ್ನಯ ಕೀರ್ತಿ ಬರುವದೆಂತೋ ॥

ದೇವ ದೇವೇಶ ಗುರು ವಿಜಯ ವಿಠಲರೇಯ
ಸಾವಧಾನದಲಿತ್ತು ಪರಿಪಾಲಿಪುದು ಬಿನ್ನಪವ ೫

## ೧೧೫

ವ್ರತವನಲ್ಲದೆ ಅನುವ್ರತ ಮಾಡಬಹುದೇ
ಶತಮುಖ ಸ್ಥಿತನಾದ ದಿವಿಜಪತಿಯ ಪ

ದಾನಶೀಲನೆನಿಸಿ ವಿಬುಧರಿಗೆ ಮೃಷ್ಟಾನ್ನ
ಪಾನಗಳುಂಬೋ ಪಂಕ್ತಿಯಲ್ಲಿ ॥
ದೀನನೊಬ್ಬನು ಬರಲು ದೋಷಿಯಾದವನೆಂದು
ಆನನವ ತಿರುಹುವನೇ ಅವನಿಯೊಳಗೇ ೧

ಅನ್ನ ಕಾರಣವಾದ ಪರ್ಜನ್ಯದಿಂದಲಿ ಸಕಲ
ಜನರನು ಪರಿತೋಷ ಬಡಿಸಿ ಕೃಪದಿ ॥
ಚೆನ್ನಿಗನೆ ಈ ಅಲ್ಪ ಪ್ರಾದೇಶಸ್ಥಿತರನ್ನು
ಬನ್ನ ಬಡಿಸುವರೇನೊ ಘನ್ನ ಮಹಿಮಾ ೨

ಭಕ್ತವತ್ಸಲನೆಂಬೊ ಬಿರುದು ನಿನಗೆ ಉಂಟೆ
ಸಖತನದಿ ಬಿನ್ನೈಪೆ ಸಾರ್ವಭೌಮ ॥
ಭಕುತ ಸುರಧೇನು ಗುರು ವಿಜಯ ವಿಠಲರೇಯ
ಉಕುತಿ ಲಾಲಿಸಿ ವೃಷ್ಟಿಗರಿವುದು ಕರುಣದಲಿ ೩

## ೧೧೬

ಫಾಲಲಿಪಿ ಪರಿಹರಿಸಿಕೊಂಬರುಂಟೆ ।
ಕಾಲನಾಮಕ ನಿನ್ನ ಕ್ಲಪ್ತದಲಿ ಬರೆದಿದ್ದ ಪ

ಸಾಲು ಸ್ಫಟಿಕದ ರತ್ನಮಯವಾದ ಮನೆ ಇರಲು
ವಿಶಾಲ ಪರ್ನದ್ದಾದರಿರಬಾರದೆ ॥
ಆಳುಗಳು ಬಹುಮಂದಿ ಇದ್ದವಗೆ
ನುಡಿದ ಮಾತಾಲಿಸುವ ನರನೊಬ್ಬನಿರಬಾರದೆ ೧

ಜ್ಞಾನದಲಿ ಹರಿರೂಪ ಬಹಿರಂತರದಿ ನೋಳ್ಪ
ಆನಂದದಲಿ ಸತತ ಇದ್ದವಗೆ ॥
ಧ್ಯಾನದಲಿ ಕ್ಷಣಮಪಿ ಕರುಹು ಕಾಣಿಸಿಕೊಂಬ
ದೀನ ಮನವಾದರೂ ಇರಬಾರದೆ ೨

ಕೋಟಿ ದ್ರವ್ಯವು ಇದ್ದು ನೀಟ ಕವಡಿ ಇಲ್ಲದೆ
ಕಾಟ ಕಾಣದೆ ಸೊರಗಿ ಮರುಗಿದಂತೆ ॥
ಹಾಟಕಾಂಬರಧಾರ ಗುರು ವಿಜಯವಿಠ್ಠಲರೇಯ
ದಾಟುವರಿಲ್ಲ ನಿನ್ನ ಪ್ರಬಲ ಶಾಸನವ ೩

## ೧೧೭

## ಶ್ರೀಮುಖ್ಯ ಪ್ರಾಣದೇವರ ಸ್ತೋತ್ರ

ನಂಬಿದೆ ನಿನ್ನಯ ಪಾದ ಮುಖ್ಯ ಪ್ರಾಣ
ನಂಬಿದೆ ನಿನ್ನಯ ಪಾದ* ಪ

ನಂಬಿದೆ ನಿನ್ನಯ ಪಾದಾಡಂಬರ ತೊಲಗಿಸಿ
ಡಿಂಬದೊಳಗೆ ಹರಿಯ ಬಿಂಬ ಮೊಳೆವಂತೆ ಮಾಡೋ ಅ.ಪ.

ಇಪ್ಪತ್ತು ಒಂದು ಸಾವಿರ ಐದೊಂದು ನೂರು
ಅಪ್ರತಿ ಹಂಸಮಂತರ

---

* ಭಜನ ಕೌಸ್ತುಭ ಭಾಗ – ೨

ತಪ್ಪದೆ ದಿನದಿನ ಒಪ್ಪದಿಂದಲಿ ಜಪಿಸಿ
ತಪ್ಪಿಸೋ ಭವವ ಸಮೀಪದ ಜೀವಗೆ ॥
ಅಪ್ಪನಂದದಿ ಪುಣ್ಯವಪ್ಪಂತೆ ಕರುಣಿಸೊ
ಕಪ್ಪು ವರ್ಣನ ಕೂಡೊಪ್ಪಿಸಿ ಪಾಲಿಸೊ ೧

ಹತ್ತೇಳು ಎರಡಾಯುತ ಸಾವಿರನಾಡಿ
ಸುತ್ತಿ ಸುತ್ತುವ ಸೂತ್ರ ಮಾರುತ
ಉತ್ತರ ಲಾಲಿಸೋ ಉತ್ಕ್ರಮಣದಲ್ಲಿ
ನೆತ್ತಿಯ ದ್ವಾರದಿಂದಲೆತ್ತ ಪೋಗಲೀಸದೆ ॥
ತತ್ತುವರೊಳು ಜೀವೋತ್ತಮನೆ ಸತ್–
ಚಿತ್ತೆನಗೆ ಕೊಡು ಉತ್ತರ ಧರಿಸೊ (ಲಾಲಿಸೋ) ೨

ಅಂತರಂಗದ ಉಸಿರ ಹೊರಗೆ ಬಿಟ್ಟು
ಅಂತರಂಗಕ್ಕೆ ಸೇದುವ
ಪಂಥದೊಳು ನೀನೆ ಕಂತು ಜನಕನಲ್ಲಿ
ಮಂತ್ರಿಯೆನಿಸಿ ಸರ್ವರಂತರ್ಯಾಮಿ ಆಗಿ ॥
ನಿಂತು ನಾನಾ ಬಗೆ ತಂತು ನಡಿಸುವ
ಹಂತಕಾರಿ ಗುಣವಂತ ಬಲಾಢ್ಯ ೩

ಪಂಚ ಪ್ರಾಣರೂಪನೆ ಸತುವ ಕಾಯ
ಪಂಚಾದ್ರಿಗಳ ಲೋಪನೆ
ಮುಂಚಿನ ಪರಮೇಷ್ಠಿ ಸಂಚಿತಾಗಾಮಿ ಓಡಿಸಿ
ಕೊಂಚ ಮಾಡೋ ಪ್ರಾರಬ್ಧ ವಂಚನೆಗೈಸದೆ ॥
ಅಂಚಂಚಿಗೆ ಪರಪಂಚವ ಓಡಿಸಿ
ಪಂಚವಕ್ತ್ರ ಹರಿಮಂಚದ ಗುರುವೆ ೪

ಯೋಗಾಸನದೊಳಿಪ್ಪ ಯಂತ್ರೋದ್ಧಾರ
ಭಾಗವತರಪ್ಪ
ಯೋಗಿಗಳೀಶ ವ್ಯಾಸಯೋಗಿಗೊಲಿದ ನ್ಯಾಸ
ಶ್ರೀ ತುಂಗಭದ್ರಾವಾಸ ಬಾಗುವೆ ಕೊಡಲೇಸ ॥

ಶ್ರೀ ಗುರು ವಿಜಯ ವಿಠಲನ ಪಾದಕೆ
ಬಾಗುವ ಭವದೂರ ಜಾಗರ ಮೂರುತಿ ೫

## ೧೧೮

ಗುರುವೆ ನಿಮ್ಮಯ ಕರುಣ ವೃಕ್ಷ ನೆಳಲೊ
ಹೊರತಾದ ಕಾರಣದಿ ಹೀನನಾದೆ ಪ

ತ್ರೈತಿಯಲಿ ತಾರಾಖ್ಯ ದ್ವಾಪರದಿ
ಉದ್ಧವ ಖ್ಯಾತಿ ದ್ರೋಣನು ಕಲಿಯುಗದಿ ನಾನಾ ॥
ಭೌತಿಕಗಳ ಧರಿಸಿ ಪ್ರಾರ್ಥಿಸಿದ ಸಜ್ಜನರ
ಆರ್ತಗಳ ಪರಿಹರಿಸಿ ಸರ್ವಾರ್ಥಗರೆವ ೧

ಸುರವಂಶಕೆ ಮುಖ್ಯ ಗುರುವೆನಿಸಿ ಮೆರೆದೆ
ಮರುತದೇವನ ದಯಕೆ ಪಾತ್ರನಾಗಿ
ಹರಿಯ ಆನಂದಾಖ್ಯ ಶರಧಿ ಮುಣುಗಿದ ಮಹಾ
ಪರಮ ಕರುಣಾನಿಧಿಯ ದೇವಮಣಿಯೆ ೨

ನೀ ಪ್ರಸನ್ನನಾಗೆ ಸಕಲ ವೈಭವದಿಂದ
ಪ್ರಪೂಜ್ಯರೆನಿಸುವರು ಅಮರ ತತಿಯು ॥
ನೀ ಪರಾಂಙ್ಮುಖನಾಗೆ ಜ್ಞಾನ ಬಲ ಸಂಪದವು
ಲೋಪ ಐದುವರಯ್ಯ ಸರ್ವ ನಿರ್ಜನರು ೩

ಆವಾವ ಕಾಲದಲಿ ನಿನ್ನ ದಯದಿಂದಲ್ಲಿ
ದೇವಾರ್ತಿಗಳನೈದು (ದಿ) ಸೌಖ್ಯಬಡುವೆ ॥
ಕಾವ ಕರುಣೆಯೆ ಎನ್ನ ಅವಗುಣಗಳೆಣಿಸದಲೆ
ಸಾವಧಾನದಲೆನ್ನ ಸಲಹಬೇಕು ೪

ಬಾಲಕನ ಅಪರಾಧ ಅನಂತವಿರಲಿನ್ನು
ಪಾಲಿಸಬೇಕಯ್ಯ ನೈಜಗುರುವೆ ॥
ಪಾಲಸಾಗರಶಾಯಿ ಗುರು ವಿಜಯ ವಿಠ್ಠಲರೇಯ
ಕಾಲಕಾಲಕೆ ಅಗಲದಂತೆ ವರವೀಯೋ ೫

## ೧೧೯

### ಧ್ರುವತಾಳ

ಆಲಿಸಿ ಕೇಳುವುದು ಆದರದಿಂದಲಿ
ಶ್ರೀ ಲಕುಮೀಶನ ಭಕುತೆರೆಲ್ಲಾ
ಕಾಲ ದೇಶ ವ್ಯಾಪ್ತಳೆನಿಪಳಿಗಾದರು
ಶೀಲ ಮೂರುತಿಯಿಂದೆ ಸುಖವೆಂಬೊದೊ
ಕೇಳಿ ಬಲ್ಲದ್ದೆ ಸರಿ ಶ್ರುತಿ ಸ್ಮೃತಿ ಮುಖದಿಂದ
ಆಲೋಚನೆ ಇದಕ್ಕಿಲ್ಲ ಎಣಿಸೆ ಗುಣಿಸೆ
ಮೂಲ ಜೀವರ ಸುಖಕೆ ಶ್ರೀಪತಿ ಆದಮೇಲೆ
ಹಲವು ಬಗೆಯಲಿ ಹರಿಯ ಸಂಪಾದಿಸು
ಇಳಿಯೊಳು ವಾಜಿಪೇಯ ಪೌಂಡ್ರಕಾದಿ ಯಜ್ಞ
ನಿರ್ಮಲವಾದ ಧ್ಯಾನ ಜಪ ಹೋಮವೊ
ಜಾಲ ನಕ್ಷತ್ರ ಸಂಖ್ಯ ಮೀರಿದ ಮಹಾದಾನಾ
ಕಾಲೋಚಿತವಾದ ಕರ್ಮ ಧ್ಯಾನ ಮೌನ
ಜ್ವಾಲವಾದ ಕ್ರೂರ ತಪ ಹೋಮ ಸುರರರ್ಚನ
ಸ್ಥೂಲ ಕರ್ಮಾಭಿಜಾತ ಪುಣ್ಯದಿಂದ
ತ್ರಿಲೋಕಾಧಿಪತಿ ಸ್ಥಾನವೈದಿದ ನಂತರ
ಇಳಿಯಬೇಕೋ ಧರಿಗೆ ಭೂಯೊ ಭೂಯೊ
ಒಲಿಯನು ಇದಕ್ಕೆ ಜಲಜಾಯತೇಕ್ಷಣ
ಒಲಿಸಬೇಕೆಂಬೋದು ಮನದಲ್ಲಿತ್ತೆ
ಪೇಳಿದ ಮಾತಿನಲ್ಲಿ ಸಂದೇಹ ಮಾಡದಲೆ
ಸುಲಭವಾದ ಪಥ ಪಿಡಿಯೊ ಬೇಗ

ನೀಲಾಂಬುದ ಶ್ಯಾಮ ಗುರು ವಿಜಯ ವಿಠ್ಠಲರೇಯ
ಪಾಲಿಸುವನು ಇದಕೆ ಶ್ರುತಿಯೇ ಸಾಕ್ಷಿ ॥

## ಮಟ್ಟತಾಳ

ಪ್ರವರ್ತಿ ನಿವೃತ್ತಿ ಅಭಿಧಾನದಿ ಕರ್ಮ
ದ್ವಿವಿಧವಾಗಿ ಉಂಟು ತಿಳಿವದು ಚೆನ್ನಾಗಿ
ಪ್ರವರ್ತಿ ಕರ್ಮವನು ಸ್ವಪ್ನದಿ ಕಾಮಿಸಿದೆ
ನಿವರ್ತಿ ಕರ್ಮದಲಿ ರತಿವುಳ್ಳವನಾಗಿ
ದೇವ ಎನ್ನೊಳಗಿದ್ದು ಕಾಲ ಕರ್ಮಾನುಸಾರ
ಆವಾವದು ಮಾಳ್ಪ ಮಾಡುವೆನದರಂತೆ
ಆವ ಮಾಡಿಸದಿರಲು ನಾನ್ಯಾತಕ ಸಲ್ಲೆ
ಕಾವ ಕೊಲ್ಲುವ ತಾನೆ ಅನ್ಯರು ಎನಗಿಲ್ಲ
ಸರ್ವಾಧಿಷ್ಠಾನದಲಿ ಹರಿಯೇ ವ್ಯಾಪಿಸಿ ಇದ್ದು
ಶರ್ವಾದಿಗಳಿಂದ ವ್ಯಾಪಾರವ ಗೈಸಿ
ನಿರ್ವಾಹಕನಾಹ ಸ್ವತಂತ್ರ ತಾನಾಗಿ
ಓರ್ವನಾದರು ಶ್ವಾಸ ಬಿಡುವ ಸೇದಿಕೊಂಬ
ಗರ್ವಗಳಿಲ್ಲವೊ ಈ ಪೃಥ್ವಿ ಮಧ್ಯ
ಈ ವಿಧದಲಿ ತಿಳಿದು ಜೀವರ ಲಕ್ಷಣ
ಸಾವಧಾನದಿ ಗುಣಿಸು ಹರಿ ಕರ್ತೃತ್ವವನು
ದೇವ ದೇವ ಬಿಂಬಿ ಜೀವನೆ ಪ್ರತಿಬಿಂಬ
ಭಾವ ಕೆಡದಂತೆ ಯೋಚಿಸು ಸರ್ವತ್ರ
ಜೀವ ಭಿನ್ನ ಗುರು ವಿಜಯ ವಿಠ್ಠಲ ರೇಯನ
ಸೇವಕರಭಿಮಾನ ಎಂದೆಂದಿಗೆ ಬಿಡನು ೧

## ತ್ರಿವಿಡಿತಾಳ

ತನುವಿನೊಳಗೆ ಹೊರಗೆ ವಿಭಕ್ತ ಅವಿಭಕ್ತ
ಅಣು ಮಹದ್ರೂಪದಿ ಹರಿವಾಸವಕ್ಕು
ವನಜಜಾಂಡಾಧಾರವಾಗಿಪ್ಪ ರೂಪವನ್ನು

ಮನುಜರ ದೇಹಾಶ್ರಯವಾಗಿಪ್ಪದೊ
ನೀನೊಲಿದು ಕೇಳುವುದು ಇದನೇವೆ ಅವಿಭಕ್ತ
ಘನರೂಪವೆಂಬೋರು ಜ್ಞಾನಿಗಳೂ
ಮುನಿಗಳ ಮತವಿದು ಸಂದೇಹ ಬಡಸಲ್ಲ
ಮನದಿ ಚಿಂತಿಸು ಈ ಶೂನ್ಯಾಭಿದನ ವ-
ದನದ ಮೇಲೆ ವದನ ಶ್ರೋತ್ರದ ಮೇಲೆ ಶ್ರೋತ್ರ ನ
ಯನದ ಮೇಲೆ ನಯನ ಈ ಕ್ರಮದಿಂದಲಿ
ತನು ಸಮಸ್ತದಲ್ಲಿ ಹರಿ ತನ್ನ ಅಂಗದಿಂದ
ಅನುಸಾರವಾಗಿ ಆಶ್ರಯವಾಗಿಪ್ಪಾ
ಕ್ಷೋಣಿಯೊಳಗೆ ಈ ರೂಪ ಅನಪೇಕ್ಷದಿಂದ
ತನುವು ನಿಲ್ಲದಯ್ಯಾ ವಿಧಿಗಾದರೂ
ಇನಿತು ಸೊಬಗು ಪರಿಜ್ಞಾನ ರಹಿತರಾಗಿ
ವನಜ ಭವಾಂಡ ದಾನವಿತ್ತರೂನು
ವನಜನಾಭನೊಮ್ಮೆ ದೃಷ್ಟಿಲಿ ನೋಡನಯ್ಯಾ
ಅನುಮಾನ ಇದಕ್ಕಿಲ್ಲ ಶ್ರುತ್ಯುಕ್ತವೊ
ವಿನಯದಿಂದಲಿ ಇದು ಗ್ರಹಿಸಿದ ನರರಿಗೆ
ಜನುಮ ಜನುಮದ ಪಾಪ ಪ್ರಶಾಂತವೊ
ಬಿನಗು ಮೈಲಿಗೆಯುಂಟೆ ಸ್ಪಷ್ಟಾಸ್ಪಷ್ಟದಿಂದ
ಅನುದಿನ ಪವಿತ್ರನು ಅಕೃತದಿಂದ
ಋಣತ್ರಯದಿಂದಲಿ ಮುಕ್ತರಾಗಿ ಸತತ
ದನುಜಾರಿ ಪುರವನ್ನೇ ಐದುವರೋ ಮಲಿನ
ಮನುಜರ ಮನಸಿಗೆ ತೋರನೊಮ್ಮೆ
ನೀನೇವೆ ಗತಿ ಎಂದು ನಂಬಿದವರ
ಮನಕೆ ಪೊಳೆವನು ಬಿಡದೆ ಮಾತರಿಶ್ವರ ದಯದಿ
ಮನುಜಾ ತಿಳಿ ಇದನೆ ಭಕುತಿಯಿಂದ
ಗುಣಗಣ ಪರಿಪೂರ್ಣ ಗುರು ವಿಜಯ ವಿಠ್ಠಲರೇಯ
ಜನನ ಮರಣಗಳಿಂದ ದೂರ ಮಾಳ್ಪ ೨

### ಅಟ್ಟತಾಳ

ಈ ರೀತಿಯಲಿ ದೇಹಧಾರಿಯ ರೂಪದ
ಸಾರಿ ಸಾರಿಗೆ ತಿಳಿದು ಪೂಜಿಸು ಗುಪ್ತದಿ
ಶಾರೀರ ಉಪಯೋಗವಾದ ವಿಷಯ ಜಾಲ
ಹರಿಗೆ ಷೋಡಶ ಉಪಚಾರವೆಂದೆನ್ನೂ
ಆರಾರು ಮಾಡುವ ವಂದನಾ ನಿಂದ್ಯೆಯು
ಶ್ರೀ ರಮಣನಿಗಿದು ಬಲು ಸ್ತೋತ್ರವೆಂದೆನ್ನು
ದಾರಾ ಪುತ್ರಾದಿ ಸಮಸ್ತ ಬಂಧುವರ್ಗ
ಪರಿಚಾರಕರೆನ್ನು ಘನ ಮಹಿಮಗೆ
ಮೆರೆವದೆಲ್ಲದು ಆರ (ಹರಿ) ಮೆರವುದದೆಯೆನ್ನೂ
ನಿರುತದಲಿ ಇದು ಮರೆಯದೆ ಮನದೊಳು
ಕರ ಚರಣಾದಿ ಯಾವದ್ದವಯವ ಚೇಷ್ಟೆಯು
ಗುರುಮುಖದಲಿ ತಿಳಿದು ಯಜ್ಞ ಕ್ರಮದಿಂದ
ನೀರಜನಾಭಗರ್ಪಿಸು ಅವದಾನ ಪೂರ್ವಕ
ಮಾರಜನಕ ಗುರು ವಿಜಯ ವಿಠ್ಠಲರೇಯ
ಕರವ ಪಿಡಿವನು ಇದನೇವೆ ಕೈಕೊಂಡು ೩

### ಆದಿತಾಳ

ಬೊಮ್ಮಾಂಡದೊಳಗಿದ್ದ ಸ್ಥೂಲವಾದ ವಸ್ತುಗಳು
ನಿಮ್ನವಾಗಿ ದೇಹದಲ್ಲಿ ಸೂಕ್ಷ್ಮವಾಗಿ ಉಂಟು ತಿಳಿ
ಈ ಮಹಾ ಲಕ್ಷಣದಿಂದಲೇ ಕ್ಷೇತ್ರವೆಂದು
ಸನ್ಮಾನ್ಯವಾಗಿಪ್ಪವೊ ಜಡಗಳ ಮಧ್ಯದಲ್ಲಿ
ಆ ಮಹಾಮಹಿಮನಾದ ಕ್ಷೇತ್ರಜ್ಞನನ್ನು ಭಜಿಸು
ಜನ್ಮವ ನೀಗುವುದು ಅವ್ಯವಧಾನದಿಂದ ವೈ
ಷಮ್ಯರಹಿತ ಗುರು ವಿಜಯ ವಿಠ್ಠಲರೇಯ

## ೧೨೦

# ಶ್ರೀಹರಿಯ ಸ್ತೋತ್ರ

### ಧ್ರುವತಾಳ

ಅರುಹು ಮರುಹುಗಳಿಗೆ ಕಾರಣ ನೀನೆ ದೇವಾ
ನಿರುಪಮ ಮಹಿಮನೆ ನಿತ್ಯ ತೃಪ್ತ
ಪರಮಾಣುಗಳಿಗೆ ಕಾಲ ಕರ್ಮಾನುಸಾರದಿಂದ
ಎರಡು ದ್ವಾರದಿಂದ ಮುಖ್ಯ ನೀನೆ
ಅರಹು ಮರಹು ಇತ್ತು ಜೀವರ್ಗೆ ಸುಖ ದುಃಖ
ಪರಿವ್ರಾತಗಳುಣಿಪ ನಿಯಮದಂತೆ
ಪರಮ ಸುಖ ಹೇತು ಅರಹು ಎನ್ನಲಿಬೇಕು
ಪರಮ ದುಃಖ ಹೇತು ಮರುಹು ಎನ್ನು ಈ
ತೆರವಾದ ಬಗೆಯಿಂದ ನಿನ್ನ ಹೊರತಾಗಿ
ಅರಹು ಮರಹು ಎನ್ನ ಆಧೀನವೋ ?
ಅರುಹು ಮರುಹು ಜೀವರಾಧೀನವೆಂದು ನುಡಿಯೆ
ಹರಿ ನಿನ್ನ ಕರ್ತೃತ್ವಕ್ಕೆ ಕೊರತೆ ಬಹದೆ
ವರಲುತಿವೆ[1] ನೋಡು ಆ ವೇದ ಶಾಸ್ತ್ರಗಳು
ಸಿರಿ ಪತಿ ನಿನ್ನ ವ್ಯತಿರಿಕ್ತವಾಗಿ
ಹೊರಗೆ ಬಿಟ್ಟ ಶ್ವಾಸ ಒಳಗೆ ಕೊಂಬುವರಿಲ್ಲ
ಸರಸಿಜ ಭವಹರ ಸುರರ ಮಧ್ಯ
ಸುರರಾದಿಗಳ ಧೊರಿಯೆ ಗುರು ವಿಜಯ ವಿಠ್ಠಲರೇಯ
ಬರಿದೆ ಯಾತಕೆ ಎನ್ನ ದೂರುವುದು ೧

### ಮಟ್ಟತಾಳ

ಹಿತಮಾಡಿ ನನಗೆ ಸಥಿ[2]ಯಲಿ ಬೋಧಿಸಿದ

---

೧. ಹೊಗಳುತಿವೆ. ೨. ಸಲುಗೆ

ಅತಿಶಯಗಳ ಸಕಲ ಮರದಿ ನೀನು ಎಂದು
ಮತಿವಂತನೆ ನೀ ಎನ್ನ ಮೋಹಿಸಿದ್ಯೋ ನಿನ್ನ
ಚತುರ ತನಕ ನಾನು ನಮೊ ನಮೊ ನಮೊ ಎಂಬೆ ಯು–
ಕುತಿವಂತರ ಮಧ್ಯ ನಿನಗಿಂದಲಿ ಜಗದಿ
ಅತಿಶಯವಿಲ್ಲವೊ ಗುರು ವಿಜಯ ವಿಠ್ಠಲ ನಿನ್ನ
ಯತಾರ್ಥವ ನಾನು ವರ್ಣಿಸಬಲ್ಲೆನೆ ೨

## ತ್ರಿವಿಡಿತಾಳ

ಒಳಗೊಂದು ಹೊರಗೊಂದು ನುಡಿವ ಜನರುಗಳನ
ನಿಲಯದ ಪ್ರೀಯನೆಂದು ನುಡಿವರಯ್ಯಾ
ಇಳಿಯೊಳಗೀ ಮಾತು ಸಾಕ್ಷಿಯಾಗಿದೆ ನೋಡು
ಮಲಿನ ರಹಿತವಾದ ಕರುಣಿ ನೀನು
ಒಳಗೊಂದು ಹೊರಗೊಂದು ನುಡಿದು ಬರಿದೆ ಎನ್ನ
ಬಳಲಿಸಿ ನೋಡುವದು ಘನತೆ ಏನೋ
ಒಳಗೆ ವ್ಯಾಪಕನಾಗಿ ಸುರರಿಂದ ಪ್ರೇರಿಸದೆ
ಕಲಿಮುಖದನುಜರ ದ್ವಾರದಿಂದ
ಬಲವತ್ತರವಾದ ಅಜ್ಞಾನ ಪ್ರಕಟಿಸಿ ನೀ
ಮಲಿನ ಸಹಿತ ಕಾಮ ಕ್ರೋಧವಿತ್ತು ನಿ–
ರ್ಮಲವಾದ ಜ್ಞಾನವನು ತಿರೋಧಾನವ ಮಾಡಿ
ಜಲಜನಾಭನೆ ನೀನು ಸುಳಿಯದಲೆ
ನೆಲೆಯಾಗಿ ನಿಂದು ಕರ್ಮಕಾಲಾನುಸಾರವಾಗಿ
ನಳಿನನಾಭನೆ ನೀನು ಇನಿತು ಮಾಡಿ
ತಿಳಿಯದ ಜನರಂತೆ ಮರದಿ ನೀನೆಂದು ಎನ್ನ
ಹಲವು ಪರಿಯಲಿ ನುಡಿದು ಹಂಗಿಸುವರೇ
ಶಿಲೆಯ ಪ್ರತಿಮೆಯಲ್ಲಿ ವರಶ್ಯಾಪದ ಕೃತ್ಯ
ಶಿಲೆಯಾಧಿಷ್ಠಾತನಾದ ದೇವಗಲ್ಲದೆ
ಶಿಲೆ ಸಹಜವನ್ನು ಎಂದಿಗಾದರು ನೋಡ
ತಿಳಿವದು ಇದರಂತೆ ಎನ್ನ ಜ್ಞಾನ
ಚಲನ ಕೃತ್ಯವ ತೋರ್ಪ ಸೂತ್ರಧಾರನ ಕೈಯ

ಚಲಿಸುವ ದಾರುಮಯ ಬೊಂಬೆಯನ್ನು
ತಿಳಿಯದ ನರನೊಬ್ಬ ಬರಿದೆ ದೂಷಿಸಲದಕೆ
ಒಳಿತು ನಡತಿ ನಡಿಯಲೊಶವೆ ಹರಿಯೆ
ಚಲನಾದಿಗಳ ತೋರ್ಪ ಪುರುಷನಿಂದಲಿ ಅದಕ
ಒಳಿತಾದ ಕೀರ್ತ್ಯಪಕೀರ್ತಿ ಬರುವದಯ್ಯಾ
ಒಳಗೆ ವ್ಯಾಪಕನಾಗಿ ದೈತ್ಯರಿಂದ ಎನಗೆ
ಮಲತ[೧] ಮರುಹು ಇತ್ತು ಯುಕುತಿಯಿಂದ
ಲೀಲೆ ಮಾಳ್ಪವನಾಗಿ ನೀನೆ ಮರತೆ ಎಂದು
ಜಲಜ ನಯನ ಎನ್ನ ದೂರುವರೇ
ನಳಿನ ಸಂಭವ ಜನಕ ಗುರು ವಿಜಯ ವಿಠ್ಠಲರೇಯ
ಮೂಲ ಕಾರಣ ನೀನೆ ಅರಹು ಮರಹುಗಳಿಗೆ ೩

## ಅಟ್ಟತಾಳ

ಲೋಕವತು ನೀನು ಲೌಕಿಕ ಮಾಳ್ಪದು ಥರವಲ್ಲ ಥರವಲ್ಲ
ಏಕಮೇವ ನಿನ್ನ ಮೋಹದ ಶಕುತಿಯೆ
ಲೋಕೇಶ ಮೊದಲಾದ ಸುರರು ಮೋಹಿಸುವರು
ಕಾಕು ನರನು ನಾನೆಂತು ದಾಟುವೆನು
ಗೋಕುಲಾಂಬುಧಿ ಚಂದ್ರ ಗುರು ವಿಜಯ ವಿಠ್ಠಲರೇಯ
ಸಾಕಾರ ರೂಪನೇ ಸತತ ಮಂಗಳ ಕಾಯಾ ೪

## ಆದಿತಾಳ

ಪಾಹಿ ಪಾಹಿ ತವ ರೂಪಕ್ಕೆ ನಮೊ ನಮೊ
ಪಾಹಿ ಪಾಹಿ ತವ ಸುಗುಣಕ್ಕೆ ನಮೊ ನಮೊ
ಪಾಹಿ ಪಾಹಿ ತವ ಕ್ರೀಯಕ್ಕೆ ನಮೊ ನಮೊ
ಪಾಹಿ ಪಾಹಿ ತವ ಮೋಹಕ್ಕೆ ನಮೊ ನಮೊ

---

೧. ಪಾಪದಿಂದ ಕೂಡಿದ ಅಜ್ಞಾನ

ಪಾಹಿ ಪಾಹಿ ತವ ಗುರು ವಿಜಯ ವಿಠ್ಠಲರೇಯ
ಪಾಹಿ ಪಾಹಿ ತವ ಸದ ಅಪರಾಧವೆಣಿಸದೆ ೫

**ಜತೆ**

ಭಕ್ತರ ವಿಷಯದಿ ಯಕ್ತಿ ಮಾಡದಲಿರೊ
ಭಕ್ತವತ್ಸಲ ಗುರು ವಿಜಯ ವಿಠ್ಠಲರೇಯ ೬

## ೧೨೧

**ಧ್ರುವತಾಳ**

ಬಲವದ್ರೂಪವಾದ ಪ್ರಾರಬ್ಧ ಕರ್ಮವನ್ನು
ನಳಿನ ಸಂಭವ ಮುಖ್ಯ ದಿವಿಜರೆಲ್ಲ
ತಲೆಬಾಗಿ ಉಂಬುವರು ವಲ್ಲೆನೆಂದರೆ ಬಿಡದು
ಬಲವುಳ್ಳ ವಸ್ತು ಮಧ್ಯ ಮಹ ಪ್ರಬಲವಯ್ಯಾ
ಆಲೋಚಿಸಿ ನೋಡಿದರೆ ಜಡರೂಪವೆನಿಸುವುದು
ಚಲಿಸುವ ಶಕುತಿ ಇಲ್ಲ ನಿನ್ನ ವ್ಯತಿರಿಕ್ತದಿ
ಬಲವಂತನಾದ ಹರಿ ತಚ್ಛಬ್ದ ವಾಚ್ಯನಾಗಿ
ಬಲಯುಕ್ತನಾಗಿ ಇದ್ದು ಬ್ರಹ್ಮೇಶನ
ಬಲವೈರಿ ಮೊದಲಾದ ಸರ್ವ ಜೀವಿಗಳ
ಬಲವೆಲ್ಲ ಹಿಂಗಿಪುದು ಕಾಲ ಕರ್ಮದಂತೆ
ಲೀಲೆ ಕೈವಲ್ಯ ರೂಪನಾದ ವಿನೋದಿ ನಿನ್ನ
ಲೀಲೆಗೆ ಕಾರಣವೆನಿಪದಯ್ಯಾ
"ಬಲವಾನ್ ಇಂದ್ರಿಯ ಗ್ರಾವೋ(ಮಾ) ವಿದ್ವಾಂಸಮಪಿಕರ್ಷತಿ"
ಕಾಲರೂಪನಾಗಿ ಇಂದ್ರಿಯ ದ್ವಾರದಿಂದ
ಮೇಲು ಕೀಳುಗಳೀವಿ ಜೀವರಿಗೆ
ಇಳಿಗೆ ಮೀರಿದ ನಿನ್ನ ನೈಜಾಲಯ ದ್ವಾರ
ಪಾಲಕರಿಗೆ ತಪ್ಪದಾಯಿತಯ್ಯಾ

ಬಲಿಷ್ಠರ ಪಾಲ ಗುರು ವಿಜಯ ವಿಠ್ಠಲ ನಿನ್ನ
ಒಲಿಮೆಯಿಂದಲಿ ತೊಲಗಿ ಪೋಪದಯ್ಯಾ ೧

## ಮಟ್ಟತಾಳ

ಪ್ರಾರಬ್ಧ ಕರ್ಮ[1]ದಲಿ ಚತುರ್ಮುಖ ದೇವನು
ಧಾರುಣಿಯಲಿ ಪೂಜೆ ತೊರೆದನು ಋಷಿಯಿಂದ
ಭಾರತಿಪತಿ ನಿನ್ನ ಸಂಕಲ್ಪವನರಿತು
ವಾನರನಾದನು ಮತ್ತೆ ಸ್ತ್ರೀಯಾದನು ಕೇಳೊ
ಶ್ರೀರಮಣ ನಿನ್ನ ಪ್ರೀತ್ಯಾಸ್ಪದನಾದ
ಆರೂಢಕೆ ಯೋಗ್ಯನೆನಿಸುವ ಸೌಪರಣಿ
ಮೀರಿದ ಬಲಯಾಗೆ ಕಾದ್ರುವೆಗಳ ಕೈಯ
ಘೋರ ಬನ್ನ ಬಟ್ಟ ಜನನಿಯ ನಿಮಿತ್ಯ
ವಾರಿಜಾಕ್ಷನ ಯೋಗ ನಿದ್ರಾಸ್ಪದ ನೆನೆಪ
ವಾರುಣಿ ಪತಿಯಾದ ಬಲರಾಮನು ದುರುಳ
ಕೌರವ ಪತಿ ಪಕ್ಷ ಮೋಹಿಸಿ ಸಜ್ಜನರಿಂದ
ಮಾರು ಮಾತನು ನುಡಿಸಿಕೊಂಡು ಸಭೆಯಲ್ಲಿ
ಮಾರಾರಿ ರೂಪನಾದ ಅಶ್ವತ್ಥಾಮನ
ಸ್ವರೂಪದಿ ದುಷ್ಟನಾದವಗೆ ಒಲಿದು
ಸುರರಾದವರಿಗೆ ಅಹಿತವನೆ ಬಗೆದು
ನೀರಜಾಕ್ಷನೆ ನಿನಗೆ ವಿಮುಖನು ಎಂದೆನಿಸಿ
ಪಾರುಗಾಣದೆಯಿದ್ದ ಶಾಪವು ಸ್ವೀಕರಿಸಿ
ಶಾರೀರ ದುರ್ಗಂಧ ನಾರುವ ದುಃಖದಲಿ
ಊರು ಸೇರದೆ ಅಡವಿ ಚರಿಸುವ ನಿನ್ನಿಂದ
ಧೀರರೆಂದೆನಿಸುವ ದಿವಿಜರಿಗಿನಿತಿರಲು
ಸುರಪತಿ ಮಿಕ್ಕಾದ ಸುರರಿಗೆ ತಪ್ಪುವದೆ
ಸರಿಯಿಲ್ಲ ಸರಿಯಿಲ್ಲ ಈ ಪ್ರತಿಬಂಧಕ್ಕೆ

---

೧. ಬ್ರಹ್ಮ ವಾಯುಗಳಿಬ್ಬರು ಸುಖ ಪ್ರಾರಬ್ಧರು

ಭಾರ ಕರ್ತನೆನಿಪ ಗುರು ವಿಜಯ ವಿಠ್ಠಲರೇಯ ನೀ
ತೋರದೆ ತೊಲಗುವದೆ ಆವಾವ ಕಾಲದಲಿ ೨

### ತ್ರಿವಿಡಿತಾಳ

ಅನುಭವ ಪೇಳುವೆನು ಆದರದಲಿ ಕೇಳು
ಘನವಾದ ಪ್ರಾರಬ್ಧ ಮನಿಯ ಮಾಡಿ ಸು-
ಮನಸರ ಶಾಪವೆಂಬೊ ಸೂಚಕದಿಂದಲ್ಲಿ
ಘನವಾದ ಸ್ಥಾನದಿಂದ ಕಡೆಗೆ ಮಾಡಿ
ಮನುಜ ಲೋಕದಲ್ಲಿ ಪುಟ್ಟಿಸಿ ಘೋರವಾದ
ಬಿನಗು ಸಂಸಾರವೆಂಬ ಪಾಶದಲ್ಲಿ
ತನುವ ಬಂಧಿಸಿ ಸತತ ಕಾಮ ಕ್ರೋಧವೆಂಬೊ ಗ-
ಹನಮಡುವಿನೊಳಗೆ ನೂಕಿದಯ್ಯಾ
ಜ್ಞಾನಾಚ್ಛಾದನ ಮಾಡಿ ಪರಿ ಪರಿ ದುಃಖದಿಂದ
ಅನುದಿನ ಬಳಲಿಸಿದ ಅನ್ಯಾಯದಿ
ಅಣು ಮಹ ವ್ಯಾಪ್ತ ಗುರು ವಿಜಯ ವಿಠ್ಠಲ ನಿನ್ನ
ಅನುಗ್ರಹ ತಪ್ಪುವದೆ ಆಪದವೋ ೩

### ಅಟ್ಟತಾಳ

ಪ್ರಕಟ ಸಂಪದದಿಂದ ಸಿದ್ಧನಾದವನಾಗಿ
ರಿಕತನೆಂದೆನಿಸಿದಿ ಅಧಿಕಧಿಕವಾಗಿ
ಪ್ರಖ್ಯಾತವಾಗಿ ಮಾನ್ಯನೆನಿಸಿ ಕುಂಭಿಣಿಯಲ್ಲಿ ಕು-
ಹಕ ಜನರ ಮಧ್ಯ ನಿಂದ್ಯವೈದದೆ ಬಲು
ಉಕುತಿಯಿಂದಲಿ ದುಷ್ಟ ಮತಗಳ ಛೇದಿಸಿ
ಲಕುಮಿ ಪತಿಯೆ ಪರನೆಂದು ಬೀರಿದ ಜಿಹ್ವೆ
ಶಕುತಿಯಿಂದಲಿ ಒಮ್ಮೆ ಹರಿಯೆ ಉಚ್ಚರಿಸುವುದು
ವಿಖನಸಾಂಡಾಧಿಪ ಗುರು ವಿಜಯ ವಿಠ್ಠಲಂಗೆ
ಭಕುತನೆನಿಸಿ ಈಗ ಬಲು ದೂರ ನಾನಾದೆ ೪

## ಆದಿತಾಳ

ಹರಿ ನಿನ್ನ ಸಂಕಲ್ಪ ಮೀರುವರಿಲ್ಲ ಜಗದಿ
ಪರಿ ಪರಿ ವಿಧದಿಂದ ಪರಿ ಅವಲೋಕಿಸಿ
ಪರಮೇಷ್ಠಿ ಮೊದಲಾದ ಸುರರೆಲ್ಲ ತಲೆಬಾಗಿ
ಕರವ ಮುಗಿದು ನಿನಗೆ ನಮೊ ನಮೊ ನಮೊ ಎಂದು
ಪರಿತೋಷ ಬಡುವರು ಕಡೆ ಮೊದಲರಿಯದೆ
ನಿರುಪಮ ಗುಣಪೂರ್ಣ ಗುರು ವಿಜಯ ವಿಠ್ಠಲ ರೇಯ
ಭಾರ ನಿನ್ನದಯ್ಯಾ ಮನಬಂದ ತೆರ ಮಾಡೋ ೫

## ಜತೆ

ಪ್ರಾರಬ್ಧ ಕರ್ಮವನ್ನು ಮೀರುವವರಿಲ್ಲ ಜಗದಿ
ನೀರಜಾಕ್ಷನೆ ಗುರು ವಿಜಯ ವಿಠ್ಠಲರೇಯಾ ॥

### ೧೨೨

## ಧ್ರುವತಾಳ

ಪರಮ ಬಲವಂತನೆಂಬೊ ಗರ್ವ ತಾಳಿದದಕೆ
ನಿರುಪಮ ನಿರ್ಬಲನಾದೆನಿಂದು
ಸಿರಿ ಅಜ ಭವರಿಗೆ ಸಿಲುಕದ ಮಹಿಮನ್ನ
ಕರವಶನಾದ ಆಪ್ತನಂಬೊ ಮದದಿ
ಸರಿಗಾಣೆನೆನುತಲಿ ಸಥೆ ಮಾಡಿದವರೆನ್ನು
ಹರಿ ನಿನ್ನ ಕುರುಹು ಒಮ್ಮೆ ಜನುಮದೊಳಗೆ
ಅರಸಿ ನೋಡಿದರೆ ಕಾಣದಿದ್ದವನಾದೆ
ತರಣೀಂದು ಕೋಟಿ ತೇಜ ಮಹಾರಾಜಾ
ನಿರುಪಮ ಸೌಭಾಗ್ಯವಂತನೆಂದಾದಕೆ
ದಾರಿದ್ರ್ಯ ದೋಷದಿಂದ ಅಧಿಕನಾದೆ

ನರರಿಂದ ವಂದ್ಯನೆಂದು ಮನದಿ ಹಗ್ಗಿದುದಕೆ
ಧರೆಯೊಳು ತೃಣ ಸಮನಾಗದಾದೆ
ವೀರರಾದವರು ಎದುರು ನಿಲ್ಲರೆಂಬೊ ನಿ–
ರ್ಭಾರವಾದ ಅಹಂಕಾರ ಮಾಡಿದುದಕೆ
ಹೊರಗೆ ಒಳಗೆ ದುರುಳ ಸಂಗದೊಳಗೆ ಸಿಲ್ಕಿ
ಪರಿಶ್ರಮದಿಂದ ಬಳಲಿದೆನೋ
ಕರುಣ ಮಾಡಿದ ಬ್ರಹ್ಮಾದಿ ಸುರರೆಲ್ಲ
ಪರಿಪೂರ್ಣರೆನಿಸುವರು ಪದವಿಯಿಂದ
ಸರಿದು ನೋಡುವಾಗ ಸ್ವಪಚರಿಂದಧಿಕವಾದ
ವರವಾದ ಕಷ್ಟತ್ವ ಐದುವರೊ
ಪರಮೇಷ್ಠಿ ನಾಮರೂಪ ಗುರು ವಿಜಯ ವಿಠ್ಠಲರೇಯ
ಸರಿಗಾಣೆನಯ್ಯಾ ನಿನ್ನ ಶಾಸನಕ್ಕೆ ೧

**ಮಟ್ಟತಾಳ**

ನಿನ್ನ ಕರುಣವೆ ಜ್ಞಾನ ನಿನ್ನ ಕರುಣವೆ ಭಕುತಿ
ನಿನ್ನ ಕರುಣ ವಿರಕುತಿ ನಿನ್ನ ಕರುಣವೆ ಧರ್ಮ
ನಿನ್ನ ಕರುಣವೆ ಧೈರ್ಯ ನಿನ್ನ ಕರುಣವೆ ಶೌರ್ಯ
ನಿನ್ನ ಕರುಣವೆ ಶುಭ ನಿನ್ನ ಕರುಣವೆ ಲಾಭ
ನಿನ್ನ ಕರುಣವೆ ಸಕಲ ಸಂಪದವೆನಿಪದು
ಪನ್ನಗತಲ್ಪ ಗುರು ವಿಜಯ ವಿಠ್ಠಲರೇಯ
ನಿನ್ನ ಕರುಣವ ತಪ್ಪಲಿದರೊಳಗೊಂದಿಲ್ಲ ೨

**ತ್ರಿವಿಡಿತಾಳ**

ನಿನ್ನ ಕರುಣವೆ ನಿಖಿಳ ನಿಧಿಯೊ ಎನಗೆ ದೇವ
ನಿನ್ನ ಕರುಣವೆ ಸಕಲ ಸಂಭ್ರಮವೋ
ನಿನ್ನ ಕರುಣವೆ ನಿರುಪಮ ಜಯವೆನಗೆ
ನಿನ್ನ ಕರುಣವೆ ಸಾರ ಸುಖವೊ ದೇವ
ನಿನ್ನ ಕರುಣವೆ ಈಹ ಸೌಖ್ಯವೆನಿಪದು
ನಿನ್ನ ಕರುಣಕೆ ಜನರು ಮನ್ನಿಪರೊ

ಪನ್ನಗಾರಿ ವಾಹ ಗುರು ವಿಜಯ ವಿಠ್ಠಲರೇಯ
ನಿನ್ನ ಕರುಣವೆ ತೊಲಗಲೆಂತು ಸುಖವೊ ೩

## ಅಟ್ಟತಾಳ

ನಿನ್ನ ಕರುಣವೆ ಸಾಧನವೆನಿಪುದು
ನಿನ್ನ ಕರುಣದಿಂದ ಸುರರು ಮನ್ನಿಸುವರು
ನಿನ್ನ ಕರುಣದಿಂದ ನರಕ ಯಾತನೆ ದೂರ
ನಿನ್ನ ಕರುಣವಿದ್ದ ಸ್ಥಳದಲ್ಲಿ ಯಮನಾಳು
ಮನ್ನಾದಿ ನಮಿಪರು ತಿರುಗಿ ನೋಡದಲೆ
ನಿನ್ನ ಕರುಣವೆ ಅಪುನರಾವರ್ತಿ
ಚಿನ್ಮಯ ಲೋಕವು ತಂದೀವದೆಂದಿಗೂ
ನಿನ್ನ ಕರುಣಕ್ಕೆ ನೀನೆ ಕ್ಷಣವಗಲದೆ ಹೃದಯ
ವನ್ನಜಾಂಡ ಮಧ್ಯದಿ ವಿರುತ ಪೊಳೆವ ದೇವ
ಚನ್ನ ಪ್ರಸನ್ನ ಶ್ರೀ ಗುರು ವಿಜಯ ವಿಠ್ಠಲರೇಯ
ನಿನ್ನ ಕರುಣವ ಜರಿಯೇ ವ್ಯತಿರೇಕವೆಲ್ಲವೂ ೪

## ಆದಿತಾಳ

ಇನಿತು ತಿಳಿಯದಲೆ ಭವದೊಳಗೆ ಬಂದು
ಬನ್ನ ಬಟ್ಟೆನು ನಾನು ಬಲು ವಿಧದಿಂದಲಿ
ಅನ್ನಾದಿ ಪ್ರಾರಬ್ಧ ಇದಕೆ ಸೂಚನೆ ಮಾಡಿ
ನಿನ್ನ ಇಚ್ಛೆಯಲಿಂದ ಕಲಿಕೃತ ಕಲ್ಮಷಾದಿ
ಜನ್ನಿತ ಮಮಕಾರ ಬಂದೊದಗಿದ ಕಾರಣಕೆ
ನಿನ್ನ ಕರುಣವಿಲ್ಲದಲೆ ಪೂರ್ವೋಕ್ತವಾದ ಗುಣಕ
ಭಿನ್ನವಾದ ವ್ಯತಿರೇಕ ಅನುಭವ ಮಾಡಿಸಿದಿ
ಅನಂತ ಜನ್ಮವಾದರು ಬರಲೇಕೆ
ನಿನ್ನ ಕರುಣ ಅಗಲದಿರಲಿ ಇನ್ನೆಂದಿಗಾದರು
ಉನ್ನತ ಮಹಿಮ ಗುರು ವಿಜಯ ವಿಠ್ಠಲರೇಯ
ಸನ್ನಾಗುವದು ಅವ್ಯವಧಾನದಿಂದ ೫

**ಜತೆ**

ನಿನ್ನ ಕರುಣವೆ ಸಕಲ ಸೌಭಾಗ್ಯ ಪದ ಪ್ರಾಪ್ತಿ
ಭಿನ್ನ ಜೀವರ ದಾತಾ ಗುರು ವಿಜಯ ವಿಠ್ಠಲರೇಯ ೬

## ೧೨೩

**ಧ್ರುವತಾಳ**

ನಿನ್ನ ಕಾಂಬುವದೆನಗೆ ನಿಖಿಳ ಸೌಭಾಗ್ಯ ಪ್ರಾಪ್ತಿ
ನಿನ್ನ ಕಾಂಬುವದೆನಗೆ ನಿತ್ಯಾನಂದ
ನಿನ್ನ ಕಾಂಬುವದೆನಗೆ ಶುಭ ದಿನವೆನಿಪದು
ನಿನ್ನ ಕಾಂಬುವದೆ ಪರಮ ಮಂಗಳವೋ
ನಿನ್ನ ಕಾಂಬುವದೆ ಘನ್ನ ಯಶಸ್ಸು ಎನಗೆ
ನಿನ್ನ ಕಾಂಬುವದೆ ನಿತ್ಯೋತ್ಸವ
ನಿನ್ನ ಕಾಂಬುವದೆ ದೇಹ ಪಟುತ್ವ ಎನಗೆ
ನಿನ್ನ ಕಾಂಬುವದೆ ನಿಶ್ಚಿಂತವೋ
ನಿನ್ನ ಕಾಂಬುವದೆ ಪರಮ ಪವಿತ್ರ ಎನಗೆ
ನಿನ್ನ ಕಾಂಬುವದೆ ಆರೋಗ್ಯವೋ
ನಿನ್ನ ಕಾಂಬುವದೆ ಗಂಗಾದಿ ಸ್ನಾನ ಎನಗೆ
ನಿನ್ನ ಕಂಡದ್ದನೇಕ ಕ್ರತು ವಿಶೇಷ
ನಿನ್ನ ಕಾಂಬುವದೆ ಷೋಡಶ ಮಹದಾನ
ನಿನ್ನ ಕಾಂಬುವದೆ ಸಕಲ ವ್ರತವೋ
ನಿನ್ನ ಕಾಂಬುವದೆ ಶೌರ್ಯ ಧೈರ್ಯ
ನಿನ್ನ ಕಾಂಬುವದೆ ಇಹಪರ ಸೌಖ್ಯವೆಲ್ಲ
ನಿನ್ನ ಕಂಡದ್ದೆ ಮುಕ್ತಿ ನಿಜವಿದು
ಅನ್ಯಥವಿದಕಿಲ್ಲ ನಿನ್ನ ಪಾದವೆ ಸಾಕ್ಷಿ
ಪನ್ನಗಶಯನ ಗುರು ವಿಜಯ ವಿಠ್ಠಲರೇಯ
ನಿನ್ನ ಕಾಂಬುವದೆ ಇಷ್ಟ ಎನಗೆ ೧

## ಮಟ್ಟತಾಳ

ನಿನ್ನ ಕಾಣದ ದಿನ ಅಶುಭ ದುರ್ದಿನ
ನಿನ್ನ ಕಾಣದ ಜ್ಞಾನ ಅಡವಿಯ ರೋದನ
ನಿನ್ನ ಕಾಣದ ಭಕ್ತಿ ರೋಗಿಷ್ಟನ ಶಕುತಿ
ನಿನ್ನ ಕಾಣದ ಸುಖ ತ್ರೈತಾಪ[1]ದ ದುಃಖ
ನಿನ್ನ ಕಾಣದ ಸ್ನಾನ ಬಧಿರ ಕೇಳುವ ಗಾನ
ನಿನ್ನ ಕಾಣದ ಜಪ ಚಂಡಾರ್ಕನ ತಾಪ
ನಿನ್ನ ಕಾಣದ ತಪ ನಿರ್ಗತ ಪ್ರತಾಪ
ನಿನ್ನ ಕಾಣದ ಆಚಾರ ಬಾಧಿಪ ಗ್ರಹಚಾರ
ನಿನ್ನ ಕಾಣದ ನರ ಕ್ರಿಮಿ ಕೀಟ ವಾನರ
ನಿನ್ನ ಕಾಣದ ಕರ್ಮ ಅರಿಯದಿಪ್ಪ ಮರ್ಮ
ನಿನ್ನ ಕಾಣದ ಪುಣ್ಯ ಗತವಾದ ಧಾನ್ಯ
ನಿನ್ನ ಕಾಣದ ಯಾತ್ರಾ ಅಂಧಕನ ನೇತ್ರಾ
ನಿನ್ನ ಕಾಣದ ಪಾತ್ರಾ ಕಾಣದಿಪ್ಪ ನೇತ್ರಾ
ನಿನ್ನ ಕಾಣದೆ ಬಂದೆ ಪರಿಪರಿ ಸಾಧನ
ಅನ್ನಂತ ಮಾಡಿದರು ಅವರಿಗಿಲ್ಲ ಸುಖ ಸ್ವರುಶ
ಚಿನ್ಮಯ ಮೂರುತಿ ಗುರು ವಿಜಯ ವಿಠ್ಠಲ ರೇಯ
ನಿನ್ನ ಕಾಂಬುವದೆಲ್ಲ ಕರ್ಮಕ್ಕೆ ಸಾಧಕ ೨

## ತ್ರಿವಿಡಿ ತಾಳ

ನಿನ್ನ ಕಂಡವ ಸಕಲ ಸಾಧನ ಮಾಡಿದವ
ನಿನ್ನ ಕಂಡವನು ನಿರ್ಮಲನು
ನಿನ್ನ ಕಂಡವಗುಂಟೆ ಕಲಿಕೃತ ಅಘವನ್ನು
ನಿನ್ನ ಕಂಡವನೆ ಜೀವನ್ಮುಕ್ತಾ
ನಿನ್ನ ಕಂಡವರಲ್ಲಿ ಸಕಲ ಸುರರು ಉಂಟು
ನಿನ್ನ ಕಾಂಬುವ ದೇಹ ಸುಕ್ಷೇತ್ರವೊ
ನಿನ್ನ ಕಾಂಬುವ ತನುವು ಪಾವನವೆನಿಪುದು

---

೧. ಆದಿಭೂತ, ಆಧ್ಯಾತ್ಮ, ಅಧಿದೈವ, ಮೂರು ತಾಪ

ನಿನ್ನ ಕಾಂಬುವದೆ ವಿಮಲ ಕೀರ್ತಿ
ನಿನ್ನ ಕಾಂಬುವ ನರಗೆ ನರಕದ ಭಯ ಉಂಟೆ ?
ನಿನ್ನ ಕಾಂಬುವದೆ ಮಾನ್ಯತೆಯೋ
ಉನ್ನತ ಮಹಿಮ ಗುರು ವಿಜಯ ವಿಠ್ಠಲ ರೇಯ
ನಿನ್ನ ಕಾಂಬುವದೇ ನಿಖಿಳ ಸುಖವೋ ೩

**ಅಟ್ಟತಾಳ**

ನಿನ್ನನು ಕಾಣದೆ ಧನ್ಯನಾಗೆನೆಂಬೋದು
ಖಿನ್ನ ಮಾತಲ್ಲದೆ ಸಮ್ಮತವಲ್ಲವು
ಉನ್ನತ ಗುಣ ನಾರಿ ಪತಿಯುಕ್ತಳಾಗಲು
ಸನ್ಮಾನ್ಯಳೆನಿಪಳು ಸಂತತ ಸುಖದಿ
ಅನಂತ ರೂಪನ್ನ ಕಾಂಬುವ ಜನರೆಲ್ಲ
ಚಿನ್ಮಯನೆನಿಸಿ ಶುಭದಿ ಶೋಭಿಸುವರು
ಪನ್ನಗಾರಿ ವಾಹನ ಗುರು ವಿಜಯ ವಿಠ್ಠಲರೇಯ
ನಿನ್ನಿಂದ ಭಕುತ ವಿಚ್ಛಿನ್ನ ದಾರಿದ್ರನೋ ೪

**ಆದಿತಾಳ**

ನಿನ್ನ ಕಾಂಬುವದೆ ಜನ್ಮಕ್ಕೆ ಸಫಲವೋ
ನಿನ್ನ ಕಾಂಬುವಗೆ ಪುನರಪಿ ಜನ್ಮವಿಲ್ಲ
ಅನಾದಿ ಪ್ರಾರಬ್ಧ ಸಂಬಂಧ ನಿಮಿತ್ಯ
ಜನ್ಮವು ಒದಗಲು ಅವಗಿಲ್ಲ ಲೇಪವು
ನಿನ್ನ ಕಾಂಬುವನ್ನ ಸುರರೆಲ್ಲ ಮನ್ನಿಪರು
ನಿನ್ನ ಕಾಂಬುವದೆ ಷಡುರಸ ಭೋಜನ
ಉನ್ನತ ಭಕ್ತನಿಗೆ ಅನ್ನವನೀವನೆನಿಪ
ಅನ್ನಮಯ ದೇವ ಗುರು ವಿಜಯ ವಿಠ್ಠಲರೇಯ
ನಿನ್ನ ಕಾಂಬುವಂತೆ ಅಭಿಮುಖನಾಗುವದು ೫

---

೧. ಬ್ರಹ್ಮದೇವರು

**ಜತೆ**

ನಿನ್ನ ಕಾಂಬುವದೆ ನಿತ್ಯೈಶ್ವರ್ಯವೊ ದೇವಾ ಪ್ರ-
ಸನ್ನನಾಗುವುದು ಗುರು ವಿಜಯ ವಿಠ್ಠಲರೇಯ ॥

## ೧೨೪

**ಧ್ರುವತಾಳ**

ಭಕ್ತರ ಭಿಡಿಯ ನಿನಗೆ ಅತ್ಯಂತವಾಗಿ ಉಂಟು
ಭಕ್ತರಾರ್ಜಿತವಾದ ಭಾಗ್ಯನಿಧೆ
ಸಕಲ ವೈಭವ ಸದ್ಗುಣ ಗಣ ನಿಧಿಯೆ
ಲಕುಮಿ ಬೊಮ್ಮಾದಿಗಳಿಗೆ ಸ್ವಾಮಿ ಎನಿಸಿ
ಏಕ ದೇಶಾಧಿಪತಿ ಉಗ್ರಸೇನನ್ನ ತುತಿಸಿ ಪ-
ರಾಕು ಪೇಳಿದಿ ನಿನ್ನ ಕೃಪೆಗೇನೆಂಬೇ
ಏಕಮೇವಾದ್ವೀತಿಯನ್ನಾಸ್ತಿ ಎನಿಸಿಕೊಂಡು
ಭೃಕುಟಿ[೧] ಸನ್ನಿಧಿಗೈದಿ ವರವ ಬೇಡಿದಿಯಂತೊ
ಪ್ರಕೃತಿ ಪ್ರಾಕಾಮ್ಯಾದಿ[೨] ಆಶ್ಚರ್ಯಪೂರ್ಣನೆನಿಸಿ
ಭಕ್ತ ಬಲಿಯದಾನ ಬೇಡಿದಯ್ಯಾ
ನೋಕನೀಯನೆ[೩] ಮೋದ ಪ್ರಮೋದ ಆನಾತ್ಮ
ಲೋಕ ಲೋಕದಿ ಜೀವರಾಶಿಗಳಿಗೆ
ಸಾರುವಿ ಅನ್ನೋದಕ ದ್ವಾರ ನಿಮಿತ್ಯ ಮಾಡಿ
ರಿಕ್ತ ಸ್ತ್ರೀಯರ ಅನ್ನ ಯಾಚಿಸಿದೆಂತೊ
ನಖ ಶಿಖ ಪರಿಪೂರ್ಣ ನಿರ್ದೋಷನೆನಿಸಿಕೊಂಡು
ಗೋಕುಲ ಸ್ತ್ರೀಯರನ್ನು ವೊಲಿಸಿದಯ್ಯಾ

---

೧. ಸಿಟ್ಟಿನಿಂದ ಗಂಟಿಕ್ಕಿದ ಹುಬ್ಬಿನವ, ಮರುದ್ರದೇವರು, ಭೂ ಭೃಂಗಿ ೨. ಇಚ್ಛಿಸಿದ ಕಾರ್ಯ ನೆರವೇರುವ ಒಂದು ಸಿದ್ಧಿ ೩. ನ ಕರ್ಮಾಣಾ ವರ್ಧತೇನೋಕನೀಯಾ, ಸಾಧನ ನಿತ್ಯ ರಹಿತ ಪೂರ್ಣ ಕಾವ್ಯ.

ವಿಖನಸಾದಿ ದೇವದಾನವ ಸಮೂಹಕ್ಕೆ
ಶಕುತಿಗಳನೆ ಯಿತ್ತು ಪೊರೆವನಾಗಿ
ಭಕ್ತ ಭೀಷ್ಮನು ನಿಜ ಸತಿಯ ವ್ಯಾಜದಿಂದ
ಭೀಕರವಾದ ಯುದ್ಧವನ್ನು ಮಾಡಲಾಗಿ ಅ–
ಶಕ್ತನಂದದಿ ಸ್ವಪ್ನ ಪರಿಯಾಗಿ ತೋರಿಸಿದಿ
ಭಕ್ತವತ್ಸಲ ನಿನ್ನ ದಯಕೆ ನಮೊ ನಮೊ
ಪ್ರಕಟ ಮೂರುತಿ ಗುರು ವಿಜಯ ವಿಠ್ಠಲರೇಯ
ಭಕ್ತರೇ ಬಲ್ಲಿದರು ನಿನ್ನ ಬಲದಿ ಸ್ವಾಮಿ ೧

### ಮಟ್ಟತಾಳ

ನಿತ್ಯ ಮುಕ್ತಳಾದ ಲಕುಮಿಗೆ ಸಿಲುಕದ
ಅತ್ಯುತ್ತಮನೆ ಪಾಂಡುತನಯರ ಮನೆಯಲ್ಲಿ
ತೆತ್ತಿಗನಂದದಲಿ ವ್ಯಾಪಾರ ಮಾಡಿ
ಹಸ್ತಿಪುರಿಗೆ ಪೋಗಿ ಸಂಧಾನವ ಮಾಡಿ
ಪಾರ್ಥಂಗೆ ವೊಲಿದು ಪರಿಪೂರ್ಣ ಕರುಣದಲಿ
ರಥ್ಯ ಕರ್ಮವನು ಪ್ರೀತಿಯಿಂದಲಿ ಮಾಡಿ
ಮಿತ್ರನೆನಿಸಿಕೊಂಡು ಧರೆಯೊಳು ಮೆರೆಸಿದಿ
ಭಕುತರ ವಿಷಯದಲಿ ಎಷ್ಟು ಕರುಣ ನಿನಗೆ
ಪುತ್ರನ ತೊಡೆಯಲ್ಲಿ ಕುಳ್ಳಿರಿಸಿಕೊಳಲು
ಉತ್ತಮಾಂಗ ಕೆಳಪಾದ ಸೋಕುವದೆಂತೆಂಬ
ಚಿತ್ತವಾಗದು ಪಿತಗೆ ಅತ್ಯೋಚಿತವಾವ ಹಿತ ಮಾಳ್ಪನಾಗಿ
ಭಕ್ತರ ಮಹಿಮೆಯನು ವಿಸ್ತಾರ ಮಾಳ್ಪ
ಮುಕ್ತರಾಶ್ರಯ ಗುರು ವಿಜಯ ವಿಠ್ಠಲರೇಯಾ
ಪೊತ್ತವನು ನೀನೆ ಸರ್ವ ಕಾಲದಿ ಎಮ್ಮ ೨

### ತ್ರಿವಿಡಿತಾಳ

ಸರಸಿಜಭವ ಹರ ಸುರರಿಗೆ ಧೊರಿ ಎನಿಸಿ
ನರನ ಸಾರಥಿ ಕರ್ಮ ಮಾಳ್ಪವನಾಗಿ
ತುರಗಗಳಿಗೆ ಎಚಿದ ಕಾರ್ಮುಕಗಳ ಕಿತ್ತಿ

ಸುರರಿಗಭಯ ಕೊಡುವ ಹಸ್ತದಿಂದ ಚ–
ಪ್ಪರಿಸಿ ಮುಷ್ಟಿಯ ಗೈಸಿ ಜಲತೃಣದಿಂದಲ್ಲಿ
ಹರುಷದಿಂದಲಿ ತಂದು ರಥಕೆ ಬಿಗಿದು
ನರನಿದ್ದೆಡೆಗೆ ತಂದು ನಿಲ್ಲಿಸಿ ದಿವಿಜರ
ಭರದಲ್ಲಿ ನಿನ್ನ ಔದಾರತನಕೆ
ಕರ ಮುಗಿದು ನಮಿಸಿ ಜಯ ಜಯ ಜಯವೆಂದು
ಪಾರ್ಥನ ಭಾಗ್ಯ ಮಹಿಮೆ ವರ್ಣಿಸಿದರು
ಸರಸಿಜಾಂಡವನ್ನು ಇಚ್ಛಾ ಮಾತ್ರದಲಿಂದ ಸಂ–
ಹರಿಪ ಶಕ್ತನಾಗಿ ಸುಮ್ಮನಿದ್ದು
ಅರಿಗಳ ವರ್ಗವೆಲ್ಲ ಹನನ ಮಾಡಿದನೆಂಬ
ವರಖ್ಯಾತಿ ಮಾತ್ರಕ್ಕೆ ತಂದು ಇತ್ತೇ
ಪರಿಪೂರ್ಣ ಸ್ವಾತಂತ್ರ್ಯ ಸರ್ವತ್ರ ಸಮಸ್ಥಿತ
ಚರಿಯಕ್ಕೆ ನಮೊ ನಮೊ ಆವ ಕಾಲ
ಸುರದ್ರುಮ ನಾಮ ಗುರು ವಿಜಯ ವಿಠ್ಠಲರೇಯ
ಶರಣರ್ಗೆ ಆವಾಸಾ ಸ್ಥಾನ ನೀನೆ ೩

## ಅಟ್ಟತಾಳ

ಭಕ್ತರ್ಗೆ ಪಾಪದ ಕೃತ್ಯಗಳೇ ಇಲ್ಲ
ಕೃತ್ಯಗಳಿದ್ದರು ಲೇಪನವೇ ಇಲ್ಲ
ಕೃತ್ಯವ ಲೇಪಿಸೆ ಭೋಕ್ತವ್ಯವೇ ಇಲ್ಲ
ಭೋಕ್ತವ್ಯವಾದರು ನರಕಯಾತನೆ ಇಲ್ಲ
ಭಕ್ತನಾದವ ಒಂದು ದುಷ್ಕೃತ್ಯ ಮಾಡಲಾಗಿ
ಉತ್ತಮರ ದೋಷ ನೀಚರುಂಬುವರು
ಯುಕ್ತಿ ಪೂರ್ವಕವಾಗಿ ಇನಿತು ಮಾಡುವಿ
ಪ್ರತ್ಯಕ್ಷವೆ ಸರಿ ಸುರಪತಿ ದೋಷವ ಧ–
ರಿತ್ರಿಗೆ ವಿಭಾಗ ಮಾಡಿದಿ ಕಾರುಣ್ಯದಿ
ಇತ್ತಲೀಗಲು ಅದರಂತೆ ಸರಿಯನ್ನು

ಮುಕ್ತರಾಶ್ರಯ ಗುರು ವಿಜಯ ವಿಠ್ಠಲರೇಯ
ಮಿತ್ರ ನೀನೆ ಗತಿ ಆವ ಕಾಲದಲ್ಲಿ ೪

ಭಕ್ತರ ಭಾಗ್ಯವನ್ನು ವರ್ಣಿಪರಾರಯ್ಯ
ಶಕ್ತನಾದರು ನೀನು ಭಕ್ತರಿಗೆ ಸೋಲುವಿ
ಸಪ್ತ ದ್ವಯ ಲೋಕಕ್ಕೆ ಕರ್ತೃ ನೀನಾದರು
ಭಕ್ತರ ವಶನಾಗಿ ಕರದಲ್ಲಿ ಬರುವಿ
ಭಕ್ತರ ನಿನ್ನ ನೋಳ್ಪ ಸೌಖ್ಯದ ವ್ಯತಿರಿಕ್ತ
ಮುಕ್ತಿಯನಾದರು ಅಪೇಕ್ಷೆ ಮಾಡರಯ್ಯ
ಪ್ರತ್ಯುಪಕಾರ ಗುರು ವಿಜಯ ವಿಠ್ಠಲರೇಯ
ಕೃತ್ಯಗಳೆಣಿಸುವ ಭಕ್ತರುಗಳು ಕಂದಿ ೫

**ಜತೆ**

ಭಕ್ತರಧೀನತೆ ಬಲು ಭೂಷಣೆಲೊ ನಿನಗೆ
ಉತ್ತಮೋತ್ತಮ ಗುರು ವಿಜಯ ವಿಠ್ಠಲರೇಯ ॥

## ೧೨೫

**ಧ್ರುವತಾಳ**

ಮಿತ್ರನು ಎಂದು ನಿನ್ನ ಮನದಿ ನಂಬಿದಕ್ಕೆ
ಉತ್ತಮ ಉಪಕಾರ ಮಾಡಿದಯ್ಯಾ
ಶತ್ರುಗಳಂತೆ ನಿಂದು ಬಹಿರಂತರಂಗದಲ್ಲಿ
ಕತ್ತಲೆ ಚರರಿಗೆ ಸಹಾಯಕನಾಗಿ
ನಿತ್ಯ ದುಃಖಗಳುಣಿಸಿ ಎಷ್ಟು ಕೂಗಿದರು
ನೇತ್ರ ದೃಷ್ಟಿಲಿ ನೋಡದಲೆ ಇರುವ ಬಗೆಯೋ
ಮಿತ್ರರಲಕ್ಷಣವೆ ಅಥವಾ ಶತ್ರುತ್ವದ ಸೊಬಗೆ
ಎತ್ತಣದೊ ಇದನು ತೋರದೆನಗೆ

ಕರ್ತೃ ನಿನ್ನಲ್ಲಿ ದೋಷ ಎಂದೆಂದಿಗೆ
ನಿಸ್ತ್ರೈಗುಣ್ಯ[1]ನೆಂದು ಶ್ರುತಿ ಸಾರಿತು ಸ-
ರ್ವತ್ರ ಸಮನಾದ ಹರಿ ನೀನು ಜೀವ ಕಾಲ ಪ್ರ-
ಕೃತಿ ಅನುಸರಿಸಿ ಸುಖ ದುಃಖ
ಹೊತ್ತು ಹೊತ್ತಿಗೆ ತಂದು ತುತ್ತು ಮಾಡಿ ಉಣಿಸಿ
ಕೀರ್ತ್ಯಾಪಕೀರ್ತಿಗಳ ಜಾದಿಗಳಿಗೆ
ಇತ್ತು ಪೊರೆವಿ ಎಂಬ ಕಾರಣದಿಂದ ನಿನಗೆ
ಯುಕ್ತವಾಗದಯ್ಯಾ ದೋಷವನ್ನು
ಈ ತೆರವಾದ ಬಗೆಯಿಂದ ಎನ್ನ ಕರ್ಮದಂತೆ ದು-
ಷ್ಕೃತ್ಯಗಳುಂಬೆನೆಂದು ನಿಶ್ಚೈಸುವೆ ಧಾ-
ರಿತ್ರಿಯೊಳಗೆ ಅಶಕ್ತರಾದವರೆಲ್ಲ
ಶಕ್ತರಾದವರೆಲ್ಲ ಆಶ್ರೈಸೆ
ಅತ್ಯಭಿಮಾನದಿಂದ ಪೊರೆಯದಿರಲು ಆವ
ಕೀರ್ತಿ ಐದುವನೆಂತು ಮಾನ್ಯನಾಗಿ ತಾ-
ಪತ್ರಯ ಕಳಿಯದಿರೆ ಅನುಸಾರ ಮಾಳ್ಪದೇಕೆ (ದ್ಯಾಕೊ)
ಕೃತ್ಯಾಭಿಮಾನಿಗಳ[2] ಸುರರೊಡಿಯ ಮುಕ್ತಾ
ಮುಕ್ತರಾಶ್ರಯ ಗುರು ವಿಜಯ ವಿಠ್ಠಲರೇಯ
ಭಕ್ತವತ್ಸಲ ದೇವ ಮಹಾನುಭಾವಾ ೨

## ಮಟ್ಟತಾಳ

ಅನಾದಿ ಕರ್ಮವನು ಅನುಭವ ಮಾಡುವದು
ಪ್ರಾಣಾದ್ಯಮರರಿಗೆ ತಪ್ಪುವದು ಎಂದು
ಜಾಣತನದಲಿಂದ ಜಾರಿ ಪೋಗುವದೊಳಿತೆ
ಶ್ರೀನಾಥನ ನಿನ್ನ ಪಾದ ಸಾರಿದ ಜನಕೆ
ಅನೇಕ ಜನ್ಮದ ಪಾಪ ತಕ್ಷಣದಲ್ಲೇವೇ
ವಿನಾಶವಾಗುವದೆಂದು ಶ್ರುತಿ ಸಾರುತಲಿದಕೋ

---

೧. ಸತ್ವ ರಜ ತಮೋಗುಣ ಬಂಧ ದೂರ ೨. ಕ್ರಿಯೆ, ತತ್ವಕಾರ್ಯ ಮಾಡುವ ತತ್ವಾಭಿಮಾನಿ ದೇವತೆಗಳು

ದೀನರಾಗಿ ನಿನ್ನ ಸ್ತುತಿಪರು ಸುರರೆಲ್ಲ
ಎನಗಿದ್ದ ಕರ್ಮವನು ಕ್ಷೀಣವೈದಿಸದಿರಲು
ವಿನಯದಿಂದಲಿ ನಿನಗೆ ಬೇಡಿಕೊಂಬುವದೇಕೆ (ದ್ಯಾಕೆ)
ಪ್ರಾಣನಾಥ ಗುರು ವಿಜಯ ವಿಠ್ಠಲರೇಯಾ
ಪ್ರೀಣ[1]ನಾಗುತಿರಲು ನಿಲ್ಲುವದೆ ದೋಷ ೧

## ತ್ರಿವಿಡಿತಾಳ

ವೆಂಕಟನೆಂಬೊ ನಾಮ ವ್ಯವಹಾರ ತೋರುತಿದೆ
ಪಂಕಜಾಕ್ಷನೆ ಇನಿತು ನಡತಿಯಿಂದ
"ಯತ ತೋಪಿ ಹರೇಃ ಪದ ಸಂಸ್ಮರಣೆ ಸಕಲಂ ಹ್ಯಗಮಾಶುಲಯಂ ವ್ರಜತಿ"
ಎಂಬೋ ಉಕ್ತಿಗೆ ಕಳಂಕ ಬಾರದೇನೊ ಈ ತೆರ ನುಡಿದರೆ
ಶಂಕರ[2]ನೆಂಬೊ ನಾಮ ನುಡಿಯಲ್ಯಾಕೆ
ನಿಖಿಳಾಘ ವಿನಾಶಕನೆಂಬೊದೇನೋ
ಮಂಕು ಜನರ ಪಾಪ ಕಳೆಯದಿರೆ
"ಯಂಕಾಮಯೆ ತಂತು ಮುಗ್ರಂ ತೃಣೋಮಿ" ಎಂಬ
ಬಿಂಕದ ಉಕುತಿಗೆ ಘನ್ನತ್ಯಾಕೆ
ಸಂಕಟ ಹರ ಗುರ ವಿಜಯ ವಿಠ್ಠಲ ನಿನ್ನಗ–
ಲಂಕಾರವಾಗದಯ್ಯಾ ಇನಿತು ನೋಡೆ ೨

## ಅಟ್ಟತಾಳ

ಮಾಡಿದ ಕರ್ಮವ ಕ್ಷೀಣವೈದಸದಿರಲು
ನಾಡೊಳಗೆ ಪುಟ್ಟಿ ಅನುಭವಿಸಲೆ ಎನ್ನ
ಯೂಢವಾದ ಕಲ್ಪ ತಿರುಗಿ ತಿರುಗಿದರು
ಗಾಢವಾದ ಕರ್ಮ ನಾಶವಾಗದು ಕೇಳೊ
ಈಡು ಇಲ್ಲದಿಪ್ಪ ಸೌಖ್ಯದಾಯ ಮುಕ್ತಿ
ಪ್ರೌಢರಾದವರಿಗೆ ದುರ್ಲಭವೆ ಸರಿ
ರೂಢಿಯ ಜನಕಿನ್ನು ಪೇಳುವದ್ಯಾತಕೆ

---

೧. ತೃಪ್ತನಾಗು, ಸಂತುಷ್ಟನಾಗು ೨. ಶಂ + ಕರ = ಸುಖಕರ, ಮಂಗಳಕರ

ಗೂಢ ಕರುಣಿ ಗುರು ವಿಜಯ ವಿಠ್ಠಲ ಎಂಬೊ
ರೂಢಿಯ ಸರಿ ಮತ್ತೆ ಯೋಗ ಎನ್ನಲ್ಯಾಕೆ ೪

**ಆದಿತಾಳ**

ವಿನಯದಿಂದಲಿ ಒಮ್ಮೆ ಹರಿ ಎನೆ ಹರಿ ಎಂದು ಸ್ಮರಿಸಲು
ಜನ್ಮ ಜನ್ಮದ ಪಾಪ ಪರಿಹಾರವಾಗುವವು
ಅನುನಯದಿ ಮತ್ತೊಮ್ಮೆ ಅಚ್ಯುತನೆಂದು ನೆನೆಯೆ
ಮನದಲ್ಲಿ ತೋರಿ ನೀನು ಆನಂದ ಬಡಿಸುವಿ
ಘನ ಮಹಿಮನೆ ನಿನ್ನ ಮೂರನೆ ಖ್ಯಾತಿ ನೆನೆಯೆ
ಅನಾದಿಯಿಂದ ಬಂದ ಪ್ರತಿಬಂಧ ದೂರ ಮಾಡಿ
ಆನಂದಪ್ರದವಾದ ಸ್ಥಾನವನ್ನು ಐದಿಸುವ
ಚಿನುಮಯನೆ ನಿನ್ನ ನಾಲ್ಕನೆಯ ಬಾರಿ ನೆನೆಯೆ
ಋಣವನ್ನೆ ತೀರೆಸುವೆ ಉಪಾಯವಿಲ್ಲ ನಿನಗೆ
ಅನುಮಾನ ಇದಕಿಲ್ಲ ಬಲಿಯೇ ಇದಕೆ ಸಾಕ್ಷಿ
ಇನಿತು ನಿನ್ನ ಮಹಿಮೆ ಶ್ರುತಿ ಸ್ಮೃತಿ ವರಲುತಿರೆ
ಎನಗಿದ್ದ ದುಷ್ಕರ್ಮ ಪರಿಹಾರ ಮಾಡದಿರಲು
ಘನವಾದ ಮಹಿಮೆಯು ಲೌಕಿಕವಾಗದೇನೊ
ಸನಕಾದಿ ಮುನಿ ವಂದ್ಯ ಗುರು ವಿಜಯ ವಿಠ್ಠಲರೇಯ
ಮನಕ್ಕೆ ತಂದುಕೋ ಎನ್ನ ಬಿನ್ನಪವ ೫

**ಜತೆ**

ಭಕುತಿ ಇಲ್ಲದೆ ಬರಿದೆ ಸಥೆಯಿಂದಲಿ ಬಿನ್ನೈಸಿದೆ
ಉಕುತಿ ಲಾಲಿಸು ಗುರು ವಿಜಯ ವಿಠ್ಠಲರೇಯ ॥

# ೧೨೬

## ಧ್ರುವತಾಳ

ಅಪರಾಧಿಯಾದದಕ್ಕೆ ಕಾರಣವಿನಿತೆ ಕೇಳು
ಶಫರಾದಿ ದಶರೂಪ[೧] ಅನಂತವೋ
ನೃಪನು ವಿನೋದದಿಂದ ವಿಹಾರ ಮಾಡುತಲಿ
ವಿಪಿನದಿ ಸಂಚರಿಪ ಸಮಯದಲ್ಲಿ
ಅಪರಿಮಿತವಾದ ಮೃಗಗಳು ನೋಡಿ ಸಂಹ–
ರಿಪ ಮನಸು ಮಾಡೆ ಭೃತ್ಯನಾದ
ಆಪ್ತನೊಬ್ಬನ ಕರೆದು ಆಜ್ಞವ ಮಾಡಲಾಗಿ
ಸ್ವಪತಿಗೆ ಬಿನ್ನೈಸಿದ ಸಥಿಯಲಿಂದ
ಉಪಗೂಢ ಕರುಣಿಯೆ[೨] ಇವುಗಳ ಹನನದಿಂದ
ಪಾಪ ಸಂಚಯವು ಪ್ರಾಪ್ತವಾಹದೋ
ಈ ಪರಿ ನುಡಿದು ಪರಿ ಪರಿ ಯುಕುತಿಯಿಂದ
ಕೃಪಿಯ ವಿಷ್ಟನಾಗಿ ಪೇಳಲಾಗಿ
ವಿಪರೀತ ನಿನಗಿಲ್ಲ ಎನ್ನ ವಚನದಿಂದ
ಕ್ಷಪಿಸು[೩] ಎಂದು ನುಡಿಯೆ ಮೀರಲೊಶವೆ
ಭೂಪತಿ ವಾಕ್ಯವನ್ನು ಭೃತ್ಯನು ನಡಿಸುವದು
ಉಪಾಯವೇ ಸರಿ ಜೀವನಕ್ಕೆ
ಈ ಪರಿಯಾಗದಿರೆ ಒಡಿಯ ನಿಂದಲ್ಲಿ ಅವ
ಕೋಪಕ್ಕೆ ವಿಷಯನಾಹನೆಂದು ತಿಳಿದು
ಕುಪತಿ[೪] ನುಡಿದ ಕ್ರಮದಂತೆ ಮಾಡಿದ ಕೀರ್ತಿ

---

೧. ಶ್ರೀ ಹರಿ ಸತ್ವಾದಿ ಗುಣರಹಿತನಾದರೂ, ಸತ್ವ ಜ್ಞಾನ ಪ್ರಾಚುರ್ಯ ರೂಪಗಳು. ಬಲ ರಜೋಗುಣ ಪ್ರಾಚುರ್ಯ ರೂಪಗಳು. ತಮ ಅಜ್ಞಾನಾದಿ ಮೂಢಭಾವ ಪ್ರಾಚುರ್ಯದಿಂದ ಜೀವರಿಗೆ ಪ್ರೇರಿಸುವನು.

೨. ಗುಪಿತವಾದ ಕಾರುಣ್ಯ ಸಾಗರ ಆಲಿಂಗಿತವಾದ ಕಾರುಣ್ಯ, ದಯಾಲಿಂಗಿತನೆ

೩. ಕ್ಷಮಿಸು ೪. ಕು = ಭೂಮಿ, ಭೂಪತಿ ರಾಜನಾಡಿನ ಕ್ರಮದಂತೆ

ನೃಪತಿಗಲ್ಲದೆ ಮಿಕ್ಕ ಜನರಿಗುಂಟೆ ?
ಸುಪಥವೆ ಸರಿ ಇದು ಆಜ್ಞಾಧಾರಕರಿಗೆ
ನೃಪ ಮುನಿವದಕ್ಕೆ ಲೇಶ ನಿಮಿತ್ಯ ಉಂಟು
ಕೃಪೆಯು ವಿಶೇಷವಾದ ಗರುವದಿಂದಲ್ಲಿ ಎನ್ನ ನಿ-
ರುಪಮ ಯತ್ನದಿಂದ ಮಾಡೆನೆಂದು
ಅಪಕೃತಿಯಾದ ಅಹಂಕಾರ ಬಂದೊದಗಲು
ಕುಪಿತನಾಗಿ ಶರಮನೆಯೊಳಿಟ್ಟು
ರಿಪುಗಳ ಸಂಘದಲ್ಲಿ ನಿಯಾಮಿಸಿ ಅವನನ್ನು
ತಪುತವಾದ ದುಃಖ ಬಡಿಸಿದಂತೆ
ಅಪಚಾರ ಮಾಡದಿಪ್ಪ ಆಳುಗಳೊಬ್ಬರಿಲ್ಲ
ಈ ಪೃಥ್ವಿಯ ಮಧ್ಯದಲ್ಲಿ ಎಣಿಸಿ ಗುಣಿಸೆ
ನೃಪನ ಕಾದು ತಿರುಗಿ ಮಾತು ಲಾಲಿಸಿದಂಥ
ಉಪಕಾರ ಲೇಶವನ್ನು ತಿಳಿಸದಲೆ
ಅಪಹಾಸ ಮಾಡಿದರೆ ಆರಿಂದಾಗುವದೇನೋ
ಶ್ರೀಪತಿ ಎನಗೆ ನಿನಗೆ ಇದರಂತೆವೋ
ವಿಪಗಮನನೇ ನೀನು ಕಡಿಗೆ ಮುನಿವದಕ್ಕೆ
ಅಪ್ರೀತಿಗೆ ಪಾತ್ರನೇನೊ ನಿನಗೆಂದಿಗೆ
ಶಪಥವ್ಯಾತಕ್ಕೆ ದೇಹಿ ಎಂದವರ ಮೇಲೆ
ಕೃಪಣ ವತ್ಸಲ ಸಕಲ ಗುಣ ಪೂರ್ಣನೆ
ವಿಪುಳ ಐಶ್ವರ್ಯ ನಿಧಿ ಗುರು ವಿಜಯ ವಿಠ್ಠಲರೇಯ
ನೀ ಪ್ರಸನ್ನನಾಗೆ ಎನಗಿಲ್ಲ ದೋಷರಾಶಿ ೧

## ಮಟ್ಟತಾಳ

ಅರಸು ಒಬ್ಬನ ಕರೆದು ಗುಪ್ತದಿಂದಲಿ ಪೋಗಿ
ಪುರದೊಳಗಿರುತಿಪ್ಪ ಧನಿಕರ ಮನೆಯಲ್ಲಿ
ಇರುವ ವಸ್ತುಗಳೆಲ್ಲ ಕಳದು ತಾ ಎಂದೆನ್ನೆ
ವರ ಆಜ್ಞವ ಆವ ಶಿರದಲ್ಲಿ ಧರಿಸಿ
ಪರಿ ಪರಿ ವಸ್ತುಗಳ ಜನಪಗೆ ತಂದಿತ್ತ
ಪರಮಾತ್ಮನ ಮಹ ಬಂಧಕ ಶಕುತಿಯಲಿ

ಭರದಿಂದಲಿ ಎನ್ನ ಸಹಾಸದಿಂದಲ್ಲಿ
ಸಿರಿಯನು ಕ್ಷಿತಿಪಂಗೆ ಬಂದೊದಗಿತು ಎಂದು
ವರಲಿ ಕೊಂಡದಕವನ ಕಾರಾಗೃಹದಲ್ಲಿ
ಸ್ಥಿರವಾದ ದುಃಖ ಬಡಿಸಿ ನೋಡಿದ ತೆರದಿ
ಹರಿಯೆ ಎನಗೆ ನಿನಗೆ ಇದೆ ನ್ಯಾಯದಂತೆ
ಕರುಣವಿಲ್ಲದಲೆ ಭವದೊಳಗೆ ತಂದಿ
ಬರಿದೆ ಶಬ್ದಕೆ ಮಹಾ ಬಂಧನವೊದಗಿಸಿದೆ
ಪರಮ ದಯಾನಿಧೆ ಗುರು ವಿಜಯ ವಿಠ್ಠಲರೇಯ
ಕರವ ಪಿಡಿಯಬೇಕು ಇನ್ನಾದರು ಬಿಡದೆ ೨

### ತ್ರಿವಿಡಿತಾಳ

ಧನಿಕನೋರ್ವನು ಒಬ್ಬ ನಿರ್ಧನಿಕನ ನೋಡಿ ದಯದಿ
ಘನ ದಾರಿದ್ರವ ಕಳೆವ ಇಚ್ಛೆಯಿಂದ
ಧನವು ಕೆಲವು ಕೊಟ್ಟು ಯಿದರಿಂದ ಪ್ರಾಪ್ತವಾದ
ಹಣದಿ ಜೀವಿಸು ಎಂದು ಬುದ್ಧಿ ಪೇಳೆ
ವಿನಯದಿಂದಲಿ ಪೇಳ್ದ ಯುಕ್ತಿಯಂದದಿ ಮಾಡಿ
ಘನೀ ಭೂತವಾದ ಸಂಪನ್ನನೆನಿಸಿ
ಧನವಿತ್ತವನನ್ನು ಸ್ಮರಿಸದಲೆ ಹೀನ
ಮನಸಿನಿಂದೆನ್ನದೆಂದು ಪೇಳಿಕೊಳಲು
ಧನಿಕನು ಕ್ರೋಧನಾಗಿ ಸಕಲ ವಸ್ತು ಅಪಹ–
ರಣ ಮಾಡಿ ಅವನ ಮೇಲೆ ಮುನಿದು
ಘನ ಕ್ರೂರ ಬಂಧನದ ಮಾಡಿಸಿ ನೋಡಿದಂತೆ
ಎನಗೆ ನಿನಗೆ ವ್ಯಾಜ ಇನಿತು ದೇವ
ಧನಿಕರ ಶಿರೋಮಣಿ ಗುರು ವಿಜಯ ವಿಠ್ಠಲರೇಯ
ಮಣಿದು ಬೇಡಿಕೊಂಬೆ ಕರುಣ ಮಾಡೋ ೩

### ಅಟ್ಟತಾಳ

ಮತ್ಸ್ಯನೋರ್ವನು ಅಪರಾಧ ಮಾಡಿರಲಾಗಿ
ಧಾರಿತ್ರಿವಲ್ಲಭ ತಾನು ಮುನಿದು ಶಿಕ್ಷಿಸುತಿರೆ

ಮತ್ತೊಬ್ಬ ಅವಿವೇಕಿಯಾದ ಮನುಜ ಇವನ
ಉಕ್ತಿಗೆ ಬಾಧ್ಯನು ನಾನು ಎಂದು ಪೇಳಲು
ಕ್ಷಿತಪ ಕೇಳ್ಯವನ ತ್ವರಿತದಿಂದಲಿ ಜರಿದು
ಈ ತೆರ ನುಡಿದ ಅಹಂಕಾರಿಯ ಪಿಡಿದು
ತಪ್ಪವಾದ ಬಾಧೆ ಬಡಿಸಿದ ತೆರದಂತೆ
ಸ್ವಾತಂತ್ರ ನೀನು ಪರತಂತ್ರ ನಾನಯ್ಯಾ
ಗುಪ್ತವಾದ ದೋಷ ವ್ಯಕ್ತಯ ಮಾಡಿದಿ
ಇತ್ತ ಇನ್ನಾದರು ತಪ್ಪುಗಳೆಣಿಸದೆ
ಪ್ರತ್ಯರ್ಥಿಯಾಗಿದ್ದ ಪ್ರತಿಬಂಧ ತಪ್ಪಿಸು
ಮಿತ್ರನೆನಿಪ ಗುರು ವಿಜಯ ವಿಠ್ಠಲರೇಯ
ಎತ್ತಲಿದ್ದರೇನು ನೀನೇವೆ ಗತಿಯೋ ೪

**ಆದಿತಾಳ**

ಜೀವಕ್ಕೆ ಸ್ವಾತಂತ್ರ ಎಳ್ಳಿನಿತಾದರನ್ನ
ಆವಾವ ಕಾಲಕ್ಕು ಇಲ್ಲದು ನಿಜವಾಗಿ
ದೇವ ನಿನ್ನ ಆಜ್ಞಾದಿಂದ ಇಂದ್ರಿಯ ಗ್ರಾಮದಲ್ಲಿ
ದೇವ ದೈತ್ಯರೆಲ್ಲ ನಿಂದು ವ್ಯಾಪಾರ ಮಾಡುವರು
ಇವರಿಗೆ ಸ್ವಾತಂತ್ರ ಪೂರ್ವೋಕ್ತದಂತೆ ಸರಿ
ಅವರಿಗೆ ಉತ್ತಮರು ಪ್ರೇರಕರಾಗುವರು
ಆವಾವ ಸುರರೆಲ್ಲ ಪ್ರಾಣನಿಂದ ಚಲಿಸುವರು
ಆವಾತ ದೇವಿಯಿಂದ ಪ್ರೇರಿಸಿಕೊಂಬುವನು
ದೇವಿಗೆ ಮುಖ್ಯ ನೀನು ನಿರುಪಮ ಕರ್ತೃನಾಗಿ
ಅವ್ಯವಧಾನದಿಂದ ಭೂ ಚಕ್ರ ತಿರುಗುತಿರೆ
ಜೀವಿಗಳಿಗೆ ಸ್ವಾತಂತ್ರ ಆವ ಬಗೆ ಪೇಳುವುದು
ನೋವುಗಳಿಗೆ ಸಂಜ್ಞವಾದ ಅಹಂಕಾರ ಮಮತೆಯನ್ನು
ಆವ ನಿನ್ನಿಚ್ಛೆಯಿಂದ ಅಸುರರು ಪ್ರೇರಿಸಲು ಈ
ದಾವ ಪ್ರತಿಬಂಧ ಎನ್ನಿಂದ ಮೀರಲೊಶವೆ ದೇವ
ದೇವ ದೇವ ನೀನೊಲಿದು ಕರುಣವ ಮಾಡಿದರೆ
ಏವಮಾದಿ ಅಪರಾಧವಂದಿಲ್ಲ ನೋಡಿದರು

ಶ್ರೀ ವಾಸುದೇವ ಗುರು ವಿಜಯ ವಿಠ್ಠಲರೇಯ
ಆವಾವ ಬಗೆಯಿಂದ ನೀನೆವೆ ತಾರಕನೊ ೫

ಜತೆ

ಸಹಸ್ರ ಅಪರಾಧ ಮಾಡಿ ಪ್ರಾಂತ್ಯದಿ ನಿನಗೆ
ದೇಹಿ ಎಂದೆನೊ ಗುರು ವಿಜಯ ವಿಠ್ಠಲರೇಯ ೬

[ರಾಕ್ಷಸ ನಾಮ ಸಂ॥ ಆಶ್ವೀಜ ಬ॥ ೮ ಶುಕ್ರವಾರದಲ್ಲಿ]

## ೧೨೭

ಶ್ರೀ ಹರಿಯ ಅಪರೋಕ್ಷ ಬಿಂಬ ದರ್ಶನವೆ ಸಕಲ ಸಂಪತ್ತು. ಶ್ರೀ ಹರಿಯನ್ನು ನೋಡದಿಪ್ಪದೆ ದುರ್ದಿನ. ಕಲ್ಯಾದಿ ದೈತ್ಯರಿಗೆ ಪ್ರೇರಿಸಿ ಎನ್ನ ಜ್ಞಾನ ತಿರೋಧಾನ ಮಾಡಿಸಿದಿ, ಒಂದು ಕ್ಷಣ ಬ್ರಹ್ಮ ಕಲ್ಪವಾಗಿ ದುಃಖದಿಂದ ಕಳೆವೆ. ನಿನ್ನ ಕಾಣದಿಪ್ಪ ಸತ್ಯಲೋಕದ ಸೌಖ್ಯವಾದರು ಒಲ್ಲೆ. ನಿನ್ನ ಕಾಣುವ ನರಕವಾದರು ಲೇಸು. ಕ್ರೂರರ ಬಾಧೆ ಪರಿಹರಿಸಿ ಗೋಚರನಾಗು ಎಂದು ಪ್ರಾರ್ಥನಾ.

ಧ್ರುವತಾಳ

ಇಂದಿರಾಪತಿ ನಿನ್ನ ನಿಗ್ರಹಕೆ ಪಾತ್ರರೆನಿಪ
ಕುಂದು ಜನರಾದ ಕಲ್ಯಾದಿಗಳಿಗೆ
ಒಂದೆ ದೇಹದಿಂದ ಸಾಧನ ಪೂರ್ಣವಾಹ
ದೆಂದು ಬಾಹುಳ್ಯವಾದ ದೇಹವಿತ್ತು
ವೃಂದ ಅಘಗಳ ಮಾಡಿಸಿದಿ ಅಹರಹ
ಛಂದ ಛಂದದ ದುಃಖ ಉಣಿಸಿದಂತೆ
ಇಂದು ಎನಗೆ ಪ್ರಾಪ್ತವಾದ ದೇಹ ಕ್ಲಿಪ್ತ
ದಿಂದನುಭವಿಸಿದ ಸುಖ ದುಃಖ
ದಿಂದ ಪೂರ್ವ ಕೃತ ಕರ್ಮವು ತೀರಿಸದೆ

ಮಂದಿ ಆಯುಷ್ಯ ಎನಗೆ ಯುಕುತಿಯಿಂದ
ತಂದು ಹಾಕಿ ನಿಬಿಡ ಅಜ್ಞಾನ ಪಾಶದಿಂದ
ಬಂಧನ ಮಾಡಿ ಎನ್ನ ಭವದಿ ನಿಲಿಸಿ
ಒಂದು ನಿಮಿಷ ಒಂದು ಕಲ್ಪ ಕಳೆದ ತೆರದಿ
ನಿಂದು ಉಂಬುವ ದುಃಖಕ್ಕೆಣೆ ಯಾವದು
ಹಿಂದೆ ಮಾಡಿದ ಉಪಕಾರವೇನೊ ನಿನಗೆ
ಇಂದು ನಾ ಮಾಡಿದ ಅನುಪಕಾರವೇನೊ
ಬಂಧು ನೀನಲ್ಲವೆ ಇನಿತು ಮಾಡುವದಕ್ಕೆ
ತಂದೆ ನಿನಗೆ ನಾನು ಅಲ್ಲದವನೇ
ಮಂದರೋದ್ಧರ ಗುರು ವಿಜಯ ವಿಠ್ಠಲರೇಯ
ಎಂದೆಂದು ಮಾಡಿದದ್ದು ಮಾಡಿದಿಯಾ ೧

**ಮಟ್ಟತಾಳ**

ಧ್ರುವ ಋಷಿ ಮೊದಲಾದ ಸುಜನರ ಸಂತತಿಗೆ
ಅವನಿಯೊಳಗೆ ಬಹು ಕಾಲಾವಧಿಯಾಗಿ
ಜೀವಿಸುವ ಬಗೆ ಅನುಗ್ರಹ ಮಾಡಿದರು
ನವನವವಾದಂಥ ಜ್ಞಾನ ಭಕುತಿಯಿಂದ
ಸುವಿಮಲವಾದ ಆನಂದದಿ ಮುಣುಗಿ
ಅವನಿಯ ಪತಿ ನಿನ್ನ ಕಾಣುತ ಸುಖಿಸುವರು
ಜೀವಿತವಾದದಕೆ ಇದೇ ಸಾರ್ಥಕವಯ್ಯಾ
"ಜೀವಿತಂ ವಿಷ್ಣು ಭಕ್ತಸ್ಯ ವರಂ ಪಂಚದಿನಾನ್ಯಪಿ"
ಈ ವಿಧವನ್ನು ಬಿಟ್ಟು ಅಜ್ಞಾನಾಂಧದಲಿ
ಭವದಲ್ಲಿ ಮುಣಿಗಿ ಕ್ಷಣ ಕ್ಷಣಕೆ ದುಃಖ
ತ್ರಿವಿಧ ತಾಪದಿ ಬಳಲಿ ಜ್ಞಾನರಹಿತನಾಗಿ
ಈ ವಸುಧಿಯಲ್ಲಿಪ್ಪ ಮನಜರಿಗಿಂದಲ್ಲಿ
ಕೇವಲ ನರಕ ಸ್ಥಾನವೆ ಲೇಸು ಹರಿಯೇ
"ನತು ಕಲ್ಪ ಸಹಸ್ರಸ್ತು ಭಕ್ತಿ ಹೀನಸ್ತು ಕೇಶವೆ" ಇಂತೆಂ–
ಬ ವಿಧದಿ ಈ ಅವನಿಯ ಮೇಲೆನಗೆ ನಿನ್ನಿಂದಲಿ ಅಗಲಿ ಇ–
ರುವದಕಿಂತಲ್ಲಿ ಯಮ ಸದನದಲ್ಲಿ

ನಿವಾಸವು ಎನೆ ಬಹು ಲೇಸು ನಿನ್ನಾಣೆ
ಶಿವ ಮೂರುತಿ ಗುರು ವಿಜಯ ವಿಠ್ಠಲರೇಯ
ತ್ರಿವಿಧ ಕರಣದಿಂದ ಇದೆ ಮಾತು ನುಡಿವೆ ೨

**ತ್ರಿವಿಡಿತಾಳ**

ಕ್ರೂರ ದೈತ್ಯರನ್ನ ಘೋರ ತಮಸಿನಲ್ಲಿ
ಪಾರುಗಾಣದೆ ಇದ್ದು ದುಃಖ ಉಂಬ
ಕಾರಣದಿಂದ ದೇಹ ಛೇದ ಭೇದಾದಿಗಳು
ತೋರಗೊಡದೆ ಜನಾರ್ದನನ ನಾಮದಿಂದ
ಸಂರಕ್ಷಣ ಮಾಡುವುದು ನಿನ್ನ ಕರುಣವೆಂದು
ಆರಾದರೆಂಬುವರೆ ಅವನಿನಾಥ
ಧಾರುಣಿ ಮಧ್ಯದಲ್ಲಿ ಕೇವಲ ದುಃಖ ಉಣಿಪ
ಕಾರುಣದಿಂದ ಎನ್ನ ಉಳಿಸಿದದಕೆ
ಕಾರುಣ್ಯ ಮಾಡಿದೆಂಬ ಸಂಜ್ಞವಾಗದು ಎನಗೆ
ನೀರಜಾಕ್ಷನೆ ನಿನ್ನ ಕಾಣದ ದಿನ ಒಂದು
ಪರಮೇಷ್ಠಿ ಕಲ್ಪದ ನಿತ್ಯ ಕಳಿವೆ
ಕಾರಣ ಸ್ಥಿತನಿಗೆ ಪ್ರತ್ಯೇಕ ಪೇಳುವದೇನೊ
ಆರಿಗುಸರಲಿ ಎನ್ನ ಸುಖಾ ದುಃಖ
ದೂರು ಕೇಳುವರಿಲ್ಲ ಎಷ್ಟು ಕೂಗಿದರು
ಆರೆನ್ನ ಮೋಹಿಸುವರು ಆರಿಗಾರು ಅ–
ಪಾರ ದಾರಿದ್ರನ ಕರೆದು ಮನ್ನಿಸಿ ಮನ್ನಿಸಿ ಸಕಲ
ವಾರಣಾಂತದಿ ಸಂಪದವನಿತ್ತು
ವರಣ ನಾಲ್ಕರಿಂದ ಮಾನ್ಯನೆನಸಿ ಕೊನೆಗೆ
ತಿರಕಿಯ ಮನೆ ಮನೆ ತಿರಗುವಂಥ
ತೆರದಿ ಮಾಡಿಸಿದ ಮಹಿಮೆಗೆ ಯೇನೆಂಬೆ
ನೀರಧಿ ಪೋಲ್ವ ಕರುಣಿ ನಿರ್ಮಲಾತ್ಮಾ
ಸಾರಿ ಸಾರಿಗೆ ನಿನಗೆ ವೈಶೇಷ ಪೇಳುದ್ಯಾಕೆ
ನಾರಾಯಣ ನಿನ್ನ ವಿರಹಿತದಿ
ನೀರಜಾಸನ ಲೋಕವಾದರು ಎನಗೆ

ಮೀರಿದ ನರಕವೆಂದು ಮನದಿ ತಿಳಿವೆ
ವಾರವಾರಕೆ ಎನ್ನ ಬರಿದೆ ಬಳಲಿಪದೇಕೆ
ಭಾರ ಕರ್ತನಾದ ಸಖನೆ ಕೇಳು
ಮಾರಜನಕ ಗುರು ವಿಜಯ ವಿಠ್ಠಲರೇಯ
ಶಾರೀರದಲ್ಲಿದ್ದು ಸಾಕ್ಷಿ ನೀನೆ ೩

**ಅಟ್ಟತಾಳ**

ವೈಕುಂಠ ವಿಶೇಷ ಸಾಕಾರ ನೀನಿಂದು
ಭಕುತ ಸಮೂಹಕೆ ಬೇಕಾದ ಸುಖಗಳ
ನೇಕವಾಗಿ ಯಿತ್ತು ಸಾಕುವೆನೆಂತೆಂಬ ಕಾರಣ ಸುಜನರು
ಬೇಕೆಂದು ಬಯಸಿ ಸಾಧನ ಮಾಳ್ಪರು
ಕಾಕುದರನಯ್ಯಾ[1] ನಿನ್ನ ವಿರಹಿತವಾದ
ವೈಕುಂಠವಾದರೂ ಬಯಸರೊಬ್ಬರನ್ನ
ಈ ಕುಂಭಿಣಿ ವಿಷಯ ಪೇಳ್ವದೇತಕಿನ್ನು
ವೈಖಾನಸ ವಂದ್ಯ[2] ಗುರು ವಿಜಯ ವಿಠ್ಠಲರೇಯ
ಯಾಕೆ ಎನ್ನ ವ್ಯರ್ಥ ಬಳಲಿಸಿ ನೋಡುವಿ ೪

**ಆದಿತಾಳ**

ರಾಜಾಧಿರಾಜನೆನಿಸಿ ಸಕಲವಾದ ಜನರಿಂದ
ಪೂಜ್ಯನಾಗುವದು ಆನೊಲ್ಲೆ ನಿನ್ನ ಸಾಕ್ಷಿ
ಮೂರ್ಜಗದೊಳಗಿದ್ದ ಧನ ಮೊದಲಾದ ವಸ್ತು
ನಿರ್ವ್ಯಾಜದಿ ಎನಗೆ ಪ್ರಾಪ್ತವಾದರು ನಾನೊಲ್ಲೆ
ಭೋಜ ಕುಲೋತ್ತಮ ಇದು ಸತ್ಯ ಇದು ಸತ್ಯ
ಈ ಜೀವಿಗಳ ಮಧ್ಯ ಅಲ್ಪನಾದರು ಆಗೆ ಹೃತ್ಸರ
ಸಿಜದಲ್ಲಿ ಕಾಂಬುವದು ಎನಗೆ ಬೇಕು
ರಾಜೀವ ನೇತ್ರ ಎನಗೆ ನೈಜವಾದ ಕಾಮವಿದೆ

---

೧. ಶೇಷನ ಅಯ್ಯಾ ಅಧಿಪತಿ = ಶೇಷಶಾಯಿ
೨. ಬ್ರಹ್ಮಾದಿ ದೇವತೆಗಳಿಂದ ವಂದ್ಯ

ವ್ಯಾಜದಿಂದ ಇದಕ್ಕೆ ಯೋಗ್ಯನ್ನ ಮಾಡದಲೆ ದುಃಖ
ಭಾಜನ ರೂಪವಾದ ಈ ಭೂಮಿಯಲ್ಲಿ ವ್ಯರ್ಥ
ನೀ ಜೀವಿಸೆಂದು ಪೇಳ್ವ ವಚನವು ನುಡಿವದೇಕೆ
ತೈಜಸ ರೂಪ ಗುರು ವಿಜಯ ವಿಠ್ಠಲರೇಯಾ
ಸೋಜಿಗವೇನಿಂಬೆ ನಿನ್ನಯ ಕರುನಕ್ಕೆ ೫

**ಜತೆ**

ನಿನ್ನ ನೋಡದಲಿಪ್ಪ ದಿನವೆ ದುರ್ದಿನವಯ್ಯಾ
ಮುನ್ನದಿ ನಿಜವಿದು ಗುರು ವಿಜಯ ವಿಠ್ಠಲರೇಯಾ ॥

[ನಳ ನಾಮ ಸಂ॥ ವೈಶಾಖ ಬ॥ ೧೧ ಶುಕ್ರವಾರ]

## ೧೨೮

ಶ್ರೀ ಹರಿಯ ಇಚ್ಛಾರೂಪ ಪ್ರಥಮಾವರ್ಕ, ಪ್ರಕೃತಿ ಮಾಯಾ ಬಂಧಕದಿಂದ ಜೀವ ನಿಗೆ ನಾನಾ ಯೋನಿ ಕರ್ಮಾನುಭವ ಪ್ರಾರಬ್ಧ ಯೋಗ ಹರಿ ಪ್ರಸಾದದಿಂದಲೇ ಅನಾದಿಲಿಂಗ, ದ್ವಯ ಸ್ತ್ರೀ ಅಭಿಮಾನ್ಯ ಭಾವರೂಪ, ಅವಿದ್ಯಾನಾಶ, ಸ್ವಾತ್ಮಾನುಭವ ಹರಿ ಪ್ರಸಾದ ವಿಷಯ, ಪ್ರಾರ್ಥನಾ.

**ಧ್ರುವತಾಳ**

ಏಸು ದಿವಸವುಂಟು ಈ ಪ್ರಾರಬ್ಧ ಕರ್ಮ
ಸಾಸಿರ ರೂಪನೆನೆಪ ಏಕ ಮೇವಾ
ಹಾಸುಗಲ್ಲಿನ ಮೇಲೆ ಬೀಸಿ ಅಪ್ಪಳಿಸಿದಂತೆ
ಘಾಸಿಗೊಳಿಸುತಿದೆ ಅಪರಿಮಿತ
ಕ್ಲೇಶ ಮಿಶ್ರಿತವಾದ ಸುಖನಾಮವೆ ಹೊರ್ತು
ಲೇಸಾದ ಸೌಖ್ಯವಿಲ್ಲ ಎಣಿಸೆ ಗುಣಿಸೆ
ದ್ವಾಸುಪರ್ಣಾವೆಂಬೊ ಶ್ರುತಿ ಪ್ರತಿಪಾದ್ಯನೆನೆಸಿ ಜೀವ

ರಾಶಿಗೆ ತಂದು ಉಣಿಪ ವಿಹಿತಾ ವಿಹಿತ
ಆಶೆ ಮಮತೆ ಕ್ರೋಧ ಲೋಭ ಮತ್ಸರವೆಂಬೊ
ಪಾಶದಿಂದಲಿ ಬಿಗಿದು ವಿಷಯದಲ್ಲಿ
ಕಾಸು ಬಾಳದ ಸಂಸಾರದಲ್ಲಿ ತಂದು
ಮೋಸಗೊಳಿಸುವಿ ನಿನ್ನ ಮಾಯದಿಂದ
ಭಾಸುರ ಮಹಿಮ ಗುರು ವಿಜಯ ವಿಠ್ಠಲರೇಯ
ಈ ಸಮಯದಿ ಒದಗೆ ಕೀರ್ತಿ ನಿನಗೆ ೧

## ಮಟ್ಟತಾಳ

ಹರಿ ನಿನ್ನಿಚ್ಛೆಯಲಿ ತೃಣ ಮೇರಾಗುವುದು
ಕರುಣೇತರದಿಂದ ಆವ ಮೇರು ತೃಣ
ಪರಿಮಿತಿಯಿಲ್ಲದ ಮಹಿಮೆಗೆ ಏನೆಂಬೆ
ವರ ಅಘಟಿತ ಘಟಣ ಐಶ್ವರ್ಯಾದಿ ಪೂರ್ಣ
ಸಿರಿ ಬೊಮ್ಮಾದ್ಯರಿಗೆ ಸಿಲುಕದ ಗುಣನಿಧೆ
ಸರಸಿಜ ಜಾಂಡವನ್ನು ವಿಸ್ತೀರ್ಣವ ಮಾಡಿ
ಮರಳೆ ನೋಡಲು ಕೇವಲ ಸಂಕೋಚವ ಮಾಳ್ಪ
ವರ ಸ್ಥೂಲವ ತೇಲಿಸಿ ಮುಣಗಿಸುವಿ ಸೂಕ್ಷ್ಮ
ನೀರಿನಿಂದಲಿ ಪೃಥ್ವಿ ನಿರ್ಮಾಣವ ಮಾಳ್ಪ
ಗರುಡೋರುಗಗಳಿಗೆ ಸಖತನ ಮಾಡಿಸುವಿ
ಪರಮಾಣುಗಳಲ್ಲಿ ವ್ಯಾಪುತನಾಗಿದ್ದು
ಸರಿ ಸರಿ ಬಂದಂತೆ ಸಕಲ ಚೇಷ್ಟೆಯ ಮಾಡಿ
ಪರಮ ವ್ಯಕ್ತನಾಗಿ ಸ್ಥಿತನಾದರು ಅದರ
ಕುರುಹು ತೋರಲಿಗೊಡದೆ ಭ್ರಾಂತಿಯು ಕಲ್ಪಿಸಿ
ದಾರು ಮಯವಾದ ಬೊಂಬಿಯು ತಾನೇವೆ
ಧರಿಸಿದ ಸೂತ್ರಗಳ ಅನಪೇಕ್ಷದಿ ಕುಣಿದು
ಮೆರೆವದು ಎಂತೆಂಬ ಮೋಹಪಾಶದಿ ಬಿಗಿದು
ಪರಿಭ್ರಮಣಗೈಸುವಿ ಸಂಸಾರ ಚಕ್ರದಲಿ
ಸರಿಯಿಲ್ಲವೊ ನಿನ್ನ ಮಾಯಕೆ ನಮೊ ನಮೊ

ಪರಮ ಪಾವನ ಮೂರ್ತಿ ಗುರು ವಿಜಯ ವಿಠ್ಠಲರೇಯ
ನೆರೆನಂಬಿದ ಜನಕೆ ಪಾರುಗಾಣಿಪ ನೀನೆ ೨

## ತ್ರಿವಿಡಿತಾಳ

ಮುನಿಯಾಗಿ ಸುಕರ್ಮ ಶೀಲನಾದರು ನಿತ್ಯ
ಘನವಾದ ಸಾಧನ ಮಾಳ್ಪನಾಗಿ
ಕ್ಷಣದೊಳು ಹತ್ತು ಸಂಖ್ಯೆ ಅವರ ಯೋನಿಗಳಲ್ಲಿ
ಜನನವಾಗುವ ಕರ್ಮಾ ಕೊರತೆ ಮಾಡಾ
ಇನಿತು ಕರ್ಮದ ಸೊಬಗು ನಿನ್ನಿಂದಲೆ ನೇಮಿಸಿರೆ
ಎಣೆಗಾಣದೆ ಕರ್ಮ ಬೆಳವದಕೆ
ಗುಣದ್ವಯ ವಿಕಾರವಾಗಿ ಮೂರನೇ ಗುಣ[1]
ಖಣಿಯಾಗಿ ನಿಲ್ಲುವದು ಕೇಡಿಲ್ಲದೇ
ಗುಣಿಸಿ ನೋಡಲು ಇದು ಜಡರೂಪವೆನಿಪದು
ತೃಣವ ಚಲಿಸುವ ಶಕ್ತಿ ಇದಕ್ಕಿಲ್ಲವೊ
ಗುಣಪೂರ್ಣ ನಿನ್ನಿಂದೆ ವಿಷ್ಣು ಬ್ರಹ್ಮ ರುದ್ರ
ನೆನಿಪ ರೂಪಗಳಿಂದ ವ್ಯಾಪ್ತನಾಗಿ
ವನಜ ಜಾಂಡವನ್ನು ನಿರ್ಮಿಸಿ ಅದರಂತೆ
ಕನಕಗರ್ಭಾದಿ ಗುರು ಸುರ ತೃಣ ಜೀವಾಂತ
ತನುವಿನಲ್ಲಿ ವಾಸವಾಗಿ ಸುಖ ದುಃಖ ಕಾ–
ರಣವಾಗಿಪ್ಪವೊ ಕ್ಲಿಪ್ತದಿಂದ
ಮಿನುಗುವ ಪ್ರಕಾಶಕ್ಕೆ ತೈಲ ಮಿಳತದಂತೆ
ಮನ ಮೊದಲಾದ ಸಕಲ ಇಂದ್ರಿಯಗಳಲ್ಲಿ
ದನುಜರೆಲ್ಲರು ನಿಂದು ಸಾಭಿಮಾನದಿಂದ
ಶಣಿಸುವರು ಬಿಡದೆ ಸರ್ವಕಾಲ
ಕನಸಿನಲ್ಲಾದು ನಿವೃತ್ತಿ ಮಾರ್ಗದಲ್ಲಿ
ಮನಸು ಕೊಡರು ಒಮ್ಮೆ ಎಂದಿಗನ್ನ
ಮನುಜಲೋಕ ಮತ್ತೆ ನರವಿಹಿತನ್ನ ದು–

---

೧. ಬಂಗಾರಾದಿ ಧಾತುಗಳ ಉತ್ಪತ್ತಿ ಸ್ಥಾನ, ತಮೋಗುಣ

ಗರ್ಣಿ ಮಣಿಯಾದ ಕಲಿಯುಗದಿ ಜನನ
ಮನಸಿಜಪಿತ ನೀನು ಮುನಿದು ನೋಡುವ ಕಾಲ
ಅನಕೂಲ ಈ ಪರಿ ಒದಗಲಾಗಿ
ಗಣನೆಯಿಲ್ಲದ ಕರ್ಮ ಅಭಿವೃದ್ಧಿಯಾಹದಕ
ನ್ಯೂನವಾವದಯ್ಯಾ ಪೂರ್ಣತೆಗೆ
ಬಿನಗು[1] ಯತ್ನಗಳಿಂದ ನಿಹಸಣ[2]ವಾಗುವದೆ
ವನಜಾಕ್ಷ ನಿನ್ನ ಕರುಣವಾಗಲಾಗಿ
ವಿನಯದಿಂದಲಿ ಒಮ್ಮೆ ನಾಮಾಮೃತವ ನೆನೆಯೆ
ಹನನವಾಗುವವು ತೂಲರಾಶಿ
ಅನಳ ಪೊಕ್ಕಂತೆ ನಿರ್ಮಲಿನವಾಗುವ ಬಿಡದೆ
"ಜ್ಞಾನಾಗ್ನಿ ದಗ್ಧ ಕರ್ಮಣಿ" ಎಂಬ
ಈ ನುಡಿ ಪ್ರಮಾಣದಂತೆ ಶುದ್ಧನಾಗಿ
ಅನುಪಮವಾದ ಸುಖವೈದಿಪದು
ಸನಕಾದಿ ವಂದ್ಯ ನೀ ಸುಮ್ಮನೆ ನೋಡಲಾಗಿ
ಇನಿತ ಕರ್ಮದ ಬಂಧ ತೊಲಗುವದು
ಕೊನೆಗೆ ಬಿಡವದಕ್ಕೆ ದ್ವೇಷಿಯಾದವನಲ್ಲ
ನೀನೆ ಗತಿಯೆಂದು ಇಪ್ಪೆ ಆವ ಕಾಲ
ಅನುಮಾನ ಮುನಿಗತ ವಿಜಯ ವಿಠ್ಠಲರೇಯಾ
ಏನು ಬಂದರು ನಿನ್ನ ಬಿಡೆನೆಂದು ೩

## ಅಟ್ಟತಾಳ

ಕರ್ತುನಾಗಿದ್ದವ ನಿರ್ದೋಷಿ ಎನಿಸುವ
ಭೃತ್ಯನಾಗಿದ್ದವ ಸಾದೋಷಿ ಎನಿಪನು
ಪ್ರತ್ಯಕ್ಷವೆ ಸರಿ ಇಹಪರದಲ್ಲಿ ನೋಡು
ಪತ್ನಿ ಪತಿಗೆ ತಾನಪರಾಧಿ ಎನಿಪಳು
ಈ ತೆರದಲಿ ಪರತಂತ್ರ ಜೀವರಾಶಿ
ಮೊತ್ತಾರ ತತಿಗೆ ಸ್ವಾಮಿಯು ನೀನಾಗಿ ಅ–

---

೧. ಅಲ್ಪ, ನೀಷ ೨. ಪೂರೈಕೆ ಅಥವಾ ನಾಶ

ಕೃತ್ಯಗಳೆಣಿಸುವ ಯತ್ನವ ಮಾಡಲು
ಹೊತ್ತಿಗೆ ಅನಂತ ಅಗಣಿತವೆ ಸರಿ
ಕತ್ತಲೆ ಮನೆಯೊಳು ಕಣ್ಣುಗಳ ಮುಚ್ಚಿ
ವಸ್ತು ಪರಿಕ್ಷವ ತಿಳಿಯಬೇಕೆಂದೆನ್ನ ನಿ-
ಮಿತ್ಯವೇನೊ ಇದು ಅಪರಾಧ ವಿಷಯದಿ
ಮುಕ್ತರಾಶ್ರಯ ಗುರು ವಿಜಯ ವಿಠ್ಠಲರೇಯಾ
ಭಕ್ತ ವತ್ಸಲನೆಂಬೊ ಬಿರಿದೆಂತು ನಿಲ್ಲುವದೋ ೬

### ಆದಿತಾಳ

ಜೀವನಕ್ಕೆ ಅನಾದಿ ಕ್ಲಪ್ತದಿಂದ ಲಿಂಗದೇಹ
ಆವರ್ಕವಾಗಿಪ್ಪದು ಅದರಂತೆ ಕಾಲ ಕರ್ಮ
ಜೀವ ಪರಮಾಚ್ಛ್ಯಾದ ದ್ವಯ ಸ್ತ್ರೀಯಾದಾ ವಿಷ್ಟ
ಭಾವರೂಪ ಮೊದಲಾದ ಅವಿದ್ಯಾ ಪ್ರತಿಬಂಧ
ಜೀವ ಪ್ರಕಾಶವನ್ನು ತಮ್ಮೊಳು ಮಾಡಿ ನಿಜ ಸ್ವ-
ಭಾವದಂತೆ ಮಾಡಿಸುವ ಕರ್ಮಗಳ
ಆವ ಮೀರುವೆನೆಂತೊ ದೇವ ನೀ ಕೃಪೆ ಮಾಡಿದರೆ
ಕಾವ ಕರುಣಾನಿಧೆ ಗುರು ವಿಜಯ ವಿಠ್ಠಲರೇಯಾ
ಈ ವಿಧ ಪ್ರತಿಕೂಲ ನೀನೆಂತು ದಾಂಟುವದೊ ೭

### ಜತೆ

ನಾಮ ಮಾತ್ರವು ನೆನೆಯೆ ಭವರೋಗ ಪರಿಹಾರ
ಶ್ರೀ ಮನೋಹರ ಗುರು ವಿಜಯ ವಿಠ್ಠಲರೇಯಾ ॥

[ನಳ ನಾಮ ಸಂ॥ ಆಶ್ವೀಜ ಶುದ್ಧ ೨]

## ೧೨೯

ಸುರರಿತ್ತ ಶಾಪದಿಂದ ಈ ಧರೆಯಲ್ಲಿ ಜನಿಸಿ ಎನ್ನವರಿಂದ ಅಗಲಿ ಸಂಸಾರಾರಣ್ಯ ವೆಂಬ ಅಜ್ಞಾನ ಅಟವಿಯಲ್ಲಿ ನಿನ್ನ ಕಾಣದೆ ವರಲುವೆ. ವೈರಾಗ್ಯ ಶಸ್ತ್ರದಿಂದ ಕಲ್ಮಾದಿಗಳ ನಿಗ್ರಹಗೈಸಿ, ದುರಿತವೆಂಬ ಕಂಟಕ ಪರಿಹರಿಸಿ, ಹೃದಯದಿ ಮಿಂಚಿನಂದದಿ ಹೊಳಿ ಎಂದು ಪ್ರಾರ್ಥನಾ.

### ಧ್ರುವತಾಳ

ಇಂದಿನ ದಿನದಲ್ಲಿ ಸಕಲ ಸಜ್ಜನರಿಂದ ಆ-
ನಂದದಿ ಇರುವಂಥ ಮನವೆ ಮಾಡೊ
ಮಂದಜಾಸನ ಮುಖ್ಯ ಆಶೀತಿ ನಾಲ್ಕು ಲಕ್ಷ
ಒಂದೊಂದು ಜೀವರ ಜಿಹ್ವಾಗ್ರದಿ
ನಿಂದು ನುಡಿಸುವದು ಸತ್ಯವೆಂಬೊದಿತ್ತೆ
ಅಂದ ವಚನ ಸತ್ಯವೆನಿಸುವದು ತರ-
ಣೇಂದು ಕೋಟಿ ರೂಪ ಗುರು ವಿಜಯ ವಿಠ್ಠಲರೇಯ
ಎಂದೆಂದು ಈ ಮಾತು ಸಫಲ ಮಾಡು ೧

### ಮಟ್ಟತಾಳ

ದುರ್ಗಾಂತರ್ಗತ ಹರಿ ತುಷ್ಟನಾಗಿ
ಸರ್ಗಾದಿಯಿಂದ ಸಂಪಾದನವಾಪ
ವರ್ಗಂಗಳೆಲ್ಲ ಸಮವನೆ ಐದಿಸು
ನಿಗ್ರಹದಲಿ ನೋಡಿ ಸಕಲ ಶತ್ರುಗಳನ್ನು
ನಿರ್ಗತರನ ಮಾಡು ಅವ್ಯವಧಾನದಲಿ
ದುರ್ಗಮ ಭವಾಬ್ಧಿಯಿಂದಲಿ ನೀನೇವೆ
ನಿರ್ಗಮಗೈಸುವ ಮಮ ಸ್ವಾಮಿ ಏ ದೇವ
ಭಾರ್ಗವಿ ನಾಮ ಗುರು ವಿಜಯ ವಿಠ್ಠಲ ನನ್ನ
ಯೋಗ್ಯತೆ ಫಲವನ್ನು ತ್ವರಿತದಿ ಪಾಲಿಸೊ ೨

**ತ್ರಿವಿಡಿತಾಳ**

ವೈರಾಗ್ಯವೆಂದೆಂಬ ಶಸ್ತ್ರಗಳು ಪಿಡಿಸಿ
ಕರಣಲಳಲಿದ್ದ ಕಲಿ ಮುಖ್ಯ
ವೈರಿ ಸಮ್ಮೊಗಳೆಲ್ಲ ನಿರ್ಮೂಲ ಮಾಡಿಸುವದು
ನೀರಜಾಸನ ಮುಖ್ಯ ಸುರರ ತತಿಗೆ
ಮೀರಿದ ಒಡೆಯನ್ನ ಸಖನೆಂದೆನಿಸಿಕೊಂಡು
ತೋರಿ ಎನ್ನಯ ಮನದಿ ಪ್ರಿಯ ದರ್ಶನ
ಸಾರಿ ಸಾರಿಗೆ ಯಿತ್ತು ಮೋದ ಬಡಿಸಿ ಎನ್ನ
ಸಾರ ಸೌಖ್ಯವನ್ನು ಐದಿಪದು
ಭೂರುಹ ಸ್ಥಿತ ಗುರು[1] ವಿಜಯ ವಿಠ್ಠಲರೇಯಾ
ದೂರ ನೋಡದಲಿರು ಅನ್ಯ (ನಾ)ನಲ್ಲ ೩

**ಅಟ್ಟತಾಳ**

ದುರಿತಗಳೆಂಬುವ ಕಂಟಕವನೆ ಹರಿಸಿ
ಅರುಹ ಮಾತ್ರಾದಿ ಕಟಾಕ್ಷದಲಿ ನೋಡಿ
ಕರುಣ ಕವಚವೆಂಬೊ ಆಯುಷ್ಯವನೆ ಯಿತ್ತು
ನಿರುತ ಪ್ರಾಣನಾಗಿ ರಕ್ಷಿಸು ರಕ್ಷಿಸು
ಕರುಣ ನಿಯಾಮಕ ಗುರ ವಿಜಯ ವಿಠ್ಠಲರೇಯಾ
ಪರಮ ಪ್ರೀಯನಾಗು ಅಂದಿನಂತೆ ಎನಗೆ ೪

**ಆದಿತಾಳ**

ಸುರರಿತ್ತ ಶಾಪದಿಂದ ಈ ಧರೆಯಲ್ಲಿ ಬಂದು
ಚರಿಸಿದೆನೊ ಬಲು ಅರಣ್ಯ ಅಜ್ಞಾತ
ಪರಿಹಾರ ಮಾಡುವದು ಇಂದಿನ ಶುಭ ಕಾಲ
ಹರಿ ನಿನ್ನ ಕೃಪೆಯಿಂದ ಅಂದಿನ ಕಾಲದಲ್ಲಿ
ಧರೆಯಲ್ಲಿ ಚರಿಸಿದರು ಒಂದಿಷ್ಟು ಶ್ರಮವಿಲ್ಲ

---

೧. ಭೂರುಹ = ಮರ, ಗಿಡ, ತರು ಸ್ಥಿತ, ಭೂರುಹ ಸ್ಥಿತ, ಜಡ ಸ್ಥಾವರ ಜೀವ ನಿಯಾಮಕ ಹರಿ ಮರಗಳಂತೆ ಫಲವನ್ನು ಕೊಡು.

ಪರಿವಾರದಿಂದ ಕೂಡಿ ಸುಖವನ್ನೆ ಐದಿದೆನು
ಸುರಧೇನು ನಾಮ ನಿನ್ನ ಬಂಧಕ ಶಕುತಿಯಿಂದ
ಪರಿವಾರ ವಗಲಿದ ಶಿಶುವಂತೆ ಮಹಿಯೊಳು
ಪರಿ ಪರಿ ದುಃಖದಿಂದ ಬಳಲಿದೆ ತೀರಿಸಿದೆ
ಸರಿ ಮಾಡು ಸರಿ ಮಾಡು ಪರಿಪೂರ್ಣ ಕೃಪಾನಿಧೆ
ಶರಗೊಡ್ಡಿ ಬೇಡಿಕೊಂಬೆ ಮುಕುತನ್ನ ಮಾಡುವದು
ಅರ ಲವವಾದರು ಉಳಿಸುವದು ಸಲ್ಲ
ಪರಮಾನುಗ್ರಹ ಮಾಡುವದು ತಡಿಯದಲೆ
ಪರಿವ್ಯಕ್ತಿ ಮಾಡಿದಂಥ ಶುಭ ಕಾಲವಿದು ಎಂಬೊ
ವರವಾದ ಆಶೆಯಿಂದ ಬಿನ್ನಹ ಮಾಡಿದೆನೊ
ತರು ಸ್ಥಿತ[1] ನಮ್ಮ ಗುರು ವಿಜಯ ವಿಠ್ಠಲರೇಯಾ
ಪರಿಶುದ್ಧ ಮಾಡುವದು ಪಾಪದಿಂದ ತ್ವರಿತದಿ ೫

**ಜತೆ**

ಮಿಂಚಿನಂದದಿ ಪೊಳಿಯೊ ಹೃದಯ ಕಮಲದಲ್ಲಿ
ಪಂಚ ಪಾಂಡವ ಪ್ರೀಯ ಗುರು ವಿಜಯ ವಿಠ್ಠಲರೇಯ ೬

[ನಳ ನಾಮ ಸಂ॥ ಆಶ್ವೀಜ ಶುದ್ಧ ೧೦ ಗುರುವಾರ]

## ೧೩೦

[ನಿನ್ನ ಭಕ್ತರಿಗೆ ಭವದ ದೋಷವಿಲ್ಲ ಸರ್ವ ಕರ್ತೃ ಸ್ವತಂತ್ರ ಹರಿಯೇ, ನೀನೆ ಪ್ರೇರಿಸಿ ಭಕ್ತರಿಂದ ಅಪರಾಧ ಮಾಡಿಸಿ ಹೊಣೆಗಾರರನ್ನು ಮಾಡಿ ದಣಿಸದಲೆ ಕ್ಷಮಿಸಿ ಚಿತ್ತದಲಿ ಪೊಳೆ ಎಂದು ಪ್ರಾರ್ಥನಾ.]

---

೧. ಗಿಡ, ಮರ

### ಧ್ರುವತಾಳ

ಅಪರಾಧಿ ನಾನಲ್ಲ ಅಪರಾಧ ಎನಗಿಲ್ಲ
ವಿಪರೀತವೇನಯ್ಯ ಎನ್ನಂದಿಲಿ
ಅಪರಿಮಿತ ಸ್ವಾತಂತ್ರವುಳ್ಳ ಕರ್ತೃತ್ವದಿಂದ
ಕೃಪಣರ ಬಾಧೆಗೆ ಯತನವೇನೋ
ವಿಪುಳ ಐಶ್ವರ್ಯದಿಂದ ಸ್ವಾಮಿ ನೀನಾದರೂ
ಸುಪಥ ನಡಿಯದಿಪ್ಪ ಕುಜನರನ್ನ
ತಪುತ ದುಃಖದಲ್ಲಿ ನಿಯಾಮಿಸುವಿಯೆಂದು
ಅಪೌರುಷೇಯವಾದ ಶ್ರುತಿಯು ಪೇಳೆ
ಖಪತಿ[೧]ಯು ಬಾಧಿಪದಕೆ ಕಾರಣವೇನುಂಟು
ಉಪಗೂಢ[೨] ಕರುಣಿಯೇ ತಿಳುಹಬೇಕು
ಕ್ಲಿಪುತ ರಹಿತವಾದ ವಪುಗಳು ಬರಲೇಕೆ
ಶಪಥ ಉಂಟು ನಿನ್ನ ಬಿಡೆನೆಂದೂ
ಉಪರಿಯಿನ್ನು ಉಂಟು ಅಪರಾಧವೇನು ತಿಳಿಯೆ
ನೃಪತಿ ಹೀನವಾದ ಸತಿಯನೊಲಸೆ
ಉಪಮ ರಹಿತವಾದ ಸಥೆ ಮಾಳ್ಪ ತೆರದಂತೆ
ಚಪಲನಾದರು ಇದನು ಪೋಗದೆಂದು
ರಿಪು ಕುಲ ದಲ್ಲಣನಾದ ಪಿತನ ಭಯ
ಕೃಪೆಗೆ ವಿಷಯನಾದ ಸುತರಿಗೆ ನೀನು
ಅಪಾರ ಗುಣನಿಧೆ ಇನಿತು ಮಾತೆ ಹೊರತು
ಕುಪಿತನಾಗುವದಕ್ಕೆ ಕೃತ್ಯವಿಲ್ಲ
ಶಪಥ ರೂಪನೆ ನಿನ್ನ ಆಜ್ಞ ಪಾಲನೆ ಮುಖ್ಯ
ಸಫಲವಲ್ಲದೆ ಮತ್ತೊಂದಧಿಕವಿಲ್ಲ ಅ–
ನುಪಮ ಸಾಧನ ಇದೆ ಇದೆ ಸಿದ್ಧವೆಂದು
ವಿಪ ಅಹಿಪಾದ್ಯರು ಮಾಳ್ಪುದಾಗಿ
ಸುಪವಿತ್ರವೆನಿಪ ಸತ್ವಬೋಧಿತನಾಗಿ ಹರಿ

---

೧. ಭಗವದ್ರೂಪ, ಖಂ = ಖಪತೇನಮ ೨. ಎನ್ನೊಳಗೆ ಗುಪ್ತನಾಗಿರುವ ಮಹಾ ಕರುಣಾಸಮುದ್ರನೆ, ಕಣ್ಣಿಗೆ ಕಾಣಿಸದಿದ್ದ, ಗುಪ್ತನಾಗಿದ್ದ.

ಕ್ಷಿಪಣರ[1] ವ್ಯಾಪಾರನಿಂದಾದಕ್ಕೆ
ಸ್ವ ಪಕ್ಷದವರನ್ನು ವೊಹಿಸದಲೆ ಕಡಿಗೆ ಪ-
ರ ಪಕ್ಷದವರೆಲ್ಲ ನುಡಿದ ನುಡಿಗೆ
ಅಪಹಾಸ ಮಾಡಿದಿ ಅಭಿಮಾನವಿಲ್ಲದಲೆ
ಆಪ್ತನೆಂಬೊ ಮಾತು ಉಳಿಸದಲೆ
ತಪನವಾದ ಭವದಿ ತಂದು ಕ್ಲೇಶವ ಬಡಿಸಿ
ಅಪಹೃತವಾದ ಜ್ಞಾನ ಮಾಡಿದೆನಗೆ
ಉಪಕಾರವೇನು ನಿನ್ನ ಮಾತು ಕೇಳಿದದಕೆ
ಈ ಪರಿ ಮಾಡದಿರು ನಂಬಿದವರ
ತಪುತ ಸುವರ್ಣ ವರ್ಣ ಗುರು ವಿಜಯ ವಿಠ್ಠಲರೇಯ
ಯಃ ಪ್ರಾಣದಾತಿ ಮದ್ಭಕ್ತನೆಂಬೋದು[2] ಸತ್ಯ ಮಾಡು ೧

## ಮಟ್ಟ ತಾಳ

ಪ್ರೌಢ ಕರ್ಮದಿ ನಿನ್ನ ಪ್ರೀತಿಯ ಎನಸಲ್ಲ
ಕೀಡ ಕರ್ಮ[3] ನರಕವೆಂದೆಂಬೋಸು ಅಲ್ಲ
ಮಾಡು ಎಂದವರನ್ನು ಬಿಡುವರೆ ಮಹಾಪಾಪ
ಬೇಡ ಎಂದದರನ್ನ ಮಾಡುವದೆ ದೋಷ
ಈಡಿಲ್ಲವೋ ನಿನ್ನ ಮಹಿಮೆಗೆ ಏನೆಂಬೆ
ರೂಢಿಗಾಗಿದೆ ನೋಡು ದ್ರೋಣನ ವಧೆಗಾಗಿ ನೀ-
ನಾಡಿದ ಉಕುತಿಯನು ಗ್ರಹಿಸದ ಕಾರಣದಿ
ನೋಡಿಸಿದಿ ನರಕ ದುಃಖವ ಧರ್ಮಜಗೆ
ಗೂಢ ಬಲ್ಲವರಾರು ನಿನ್ನ ಪ್ರೀತಿಯು ಧರ್ಮ
ಗಾಢ ಭಕುತರೆಲ್ಲ ಇದೆ ಮಾಡುವರಾಗಿ
ಕ್ರೋಧ ಮೂರುತಿ ಗುರು ವಿಜಯ ವಿಠ್ಠಲರೇಯ
ಆಡಿದ ವಚನಗಳು ಸಕಲ ಸಾಧನವೆನಗೆ ೨

---

೧. ದೀನರು ೨. ಇದು ಶ್ರುತಿ ಇದೆ. ಇದರ ಅರ್ಥ ಯಾವಾತನು ಭಕ್ತರುಗಳಿಗೆ ಪ್ರಾಣ ಸದೃಶನೊ ಅಂದರೆ ಬಿಡದೆ ಇರುವವನೊ ೩. ಕೀಡು – ಕೇಡು, ಕೆಟ್ಟ ಕರ್ಮ

**ತ್ರಿವಿಡಿತಾಳ**

ಅರಸು ತನ್ನ ನಿಜ ಪರಿಚಾರ ಜನರಿಗೆ
ಸರಿ ಬಂದ ಕಾರ್ಯದಲಿ ನಿಲ್ಲಿಸಲು
ನರರಿಗುಂಟೇನಯ್ಯ ವಿಹಿತಾವಿಹಿತದ ಭಯ
ಧರಣಿಪತಿಯ ಪ್ರೀತಿ ಒಂದೇ ಹೊರ್ತು
ಸರಸಿಜ ಹರಿಭವ ಸುರಪಾದಿ ನಿರ್ಜರರು
ಹರಿಯೆ ನಿನ್ನಾಜ್ಞವ ಪಾಲಿಪರೋ
ಸರಸಿಜಾಂಡವನ್ನು ನಿಯಾಮಿಸಿ ಒಂದೊಂದು
ಪರಿಯ ವ್ಯಾಪಾರದಲ್ಲಿ ನಿಲ್ಲಿಸಲೂ
ಪರಮಾಣುಗಳ ಸ್ಥೂಲ ಸೃಷ್ಟಿ ಸ್ಥಿತಿಯ ಮಾಡಿ
ತರುವಾಯ ಲಯದಲ್ಲಿ ಅಭಿಮುಖರು
ಪರಮ ಭಯಂಕರವಾದ ಕಾರ್ಯಗಳಿಂದ
ಕರುಣವಿಲ್ಲದಲೆ ಖಂಡ್ರಿಪರು ಈ
ತೆರದಿ ಮಾಡುವರಿಗೆ ಪಾಪ ಪುಣ್ಯವೇನು
ಧೊರಿಯೆ ನಿನ್ನಯ ಪ್ರೀತಿ ಒಂದಲ್ಲದೆ
ಮರಳೆ ಸಂದೇಹವಿಲ್ಲ "ಭೀಷಾಸ್ಮಾದ್ವಾತಃ ಪವತಿ"
ವರಲುತಿವೆ ವೇದ ಅಂತವಿಲ್ಲ
ಸುರಲೋಲ ಮಹಧೃತಿ ಗುರು ವಿಜಯ ವಿಠ್ಠಲರೇಯಾ
ಶರಣರ್ಗೆ ಕರ್ಮಗಳ ಲೇಪ ಉಂಟೆ ೩

**ಅಟ್ಟತಾಳ**

ಪ್ರಾತಿ ಡೊಂಕಾಗಿರೆ ತೀರ್ಥಕ್ಕೆ ದೋಷವೆ
ತೀರ್ಥ ಮಮಿನ ತೋರೆ ಪವಿತ್ರಕ್ಕೆ ದೋಷವೆ
ಯಾತ್ರೆಮಾಡುವಾಗ ಮಾರ್ಗವು ತಪ್ಪಲು ತಾ–
ಪತ್ರಯವ ನೀಗುವ ಪುಣ್ಯಕ್ಕೆ ದೋಷವೆ
ಉತ್ತಮ ಸತಿ ಒಂದು ಕರ್ಮ ಕೊರತೆ ಮಾಡೆ
ಪಾತಿವ್ರತಕೆ ದೋಷಕೆ ಎಂದಿಗಾದರೂ ನೋಡಾ

ಸ್ತೋತ್ರ ಮಾಡುವಾಗ ಶಬ್ದ ಡೊಂಕಾಗಲು ಪಾ-
ರತ್ರಿಕವಾಗುವ ಪುಣ್ಯಕ್ಕೆ ದೋಷವೆ
ಸೂತ್ರನಾಮಕ ನಿನ್ನ ಆಜ್ಞವ ನಡಿಸುವ
ಭಕ್ತರಿಗೆ ಉಂಟೇನೊ ಭವದೋಷವನ್ನು
ಕ್ಷೇತ್ರ ಮೂರುತಿ ಗುರು ವಿಜಯ ವಿಠ್ಠಲರೇಯಾ ಧಾ-
ರಿತ್ರಿಯೊಳಗೆ ನಿನ್ನವಗೆ ದೋಷವೇನೊ ೪

## ಆದಿತಾಳ

ಒಂದಪರಾಧ ಉಂಟು ವಂದಿಪೆ ತಲೆಬಾಗಿ
ಇಂದಿರೆ ಮೊದಲಾಗಿ ಶ್ವಾಸ ಬಿಡಿಸೊ ಶಕ್ತಿ
ಎಂದಿಗೆ ಬಾರದು ನಿನ್ನ ಹೊರತಾಗಿ
ಸಿಂಧುಜ[೧] ಮೊದಲಾದ ಸುರರಲ್ಲಿ ನೀನಿಂದು
ಚಂದ ಚಂದದ ಕಾರ್ಯ ಮಾಡಿಸಿ ಭಕ್ತರ್ಗೆ
ಪೊಂದಿದ ಘನತೆಯು ನಿನ್ನದಲ್ಲದೆ ಅನ್ಯ-
ರಿಂದಲಿ ಮಾಳ್ಪ ಕೃತ್ಯ ಎಳ್ಳನಿತಿಲ್ಲವೆಂದು
ಮಂದಮತಿಗನಾಗಿ ತಿಳಿಯದೆ ಅಹಂಕಾರ
ಬಂದೊದಗಲು ಅದರನ್ನೆ ಅತ್ಯಭಿವೃದ್ಧಿ ಮಾಡಿ
ತಂದು ಈ ಲೋಕದಿ ಬಂಧನ ಮಾಡಿಸಿದಿ
ತಂದೆ ನಿನಗೆ ಇದು ಪರಮ ಸಮ್ಮತವಾಗೆ ಎ-
ನ್ನಿಂದಾಗುವದೆ ಮೋಚನ ಮಾರ್ಗವ
ಒಂದು ತೀರಿಸ ಬಂದು ಹನ್ನೊಂದು ಗಳಿಸಿಕೊಟ್ಟಿ
ಬಂಧು ಅನಿಮಿತ್ಯನಾದದ್ದು ನಿಜವಿತ್ತೆ
ಕುಂದುಗಳೆಣಿಸದೆ ಪಾಲಿಪದೆನ್ನನು
ಮಂದರಧರ ಗುರು ವಿಜಯ ವಿಠ್ಠಲರೇಯಾ
ಇಂದು ಎಂದೆಂದಿಗೆ ನೀನೆವೆ ಗತಿಯೊ ೫

---

೧. ಲಕ್ಷ್ಮೀ

**ಜತೆ**

ಭಕತರ ಅಪರಾಧವೆಣಿಸದಲೆ ತ್ವರಿತದಿ ಚಿತ್ತ
ಮುಕುರದಲಿ ಪೊಳೆಯೊ ಗುರು ವಿಜಯ ವಿಠ್ಠಲರೇಯಾ ॥

[ವಿಷನಾಮ ಸಂ॥ ಮಾರ್ಗಶೀರ್ಷ ಶುದ್ಧ ೮]

## ೧೩೧

[ಪುನಃ ಅಪರೋಕ್ಷ ಒದಗಿದ ನಂತರದಿ ಶ್ರೀಹರಿಯನ್ನು ನಾನಾ ಬಗೆಯಿಂದ ಸ್ತೋತ್ರ ಗೈದದ್ದು. ಮುನ್ನಿನ ಸುಕೃತದಿಂದ ಇಂದು ಮಂದಹಾಸದಿಂದ ಹೃನ್ಮಂದಿರದಿ ದರ್ಶನವಿತ್ತು ನುಡಿದ ವಚನಕ್ಕೆ ಧನ್ಯನಾದೆ. ಅನಂತ ಜನ್ಮದ ಪುಣ್ಯ ಫಲವೆಂದು ಸ್ತೋತ್ರ.]

**ಧ್ರುವತಾಳ**

ಅನಂತ ಜನ್ಮದಲ್ಲಿ ನಿನ್ನಗಲದೆ ಯಿದ್ದ
ಉನ್ನತ ಭಕುತಿಲಿ ಭಜಿಸಿದೆನೋ
ಅನಂತ ಜನ್ಮದಲ್ಲಿ ಆವಾವ ಬಗೆಯಿಂದ
ಚಿನ್ಮಯನಾಗಿ ಪದಗಳರ್ಚಿಸಿದೆನೋ
ಅನಂತ ಜನ್ಮದಲ್ಲಿ ಆವಾವ ವಸ್ತುಗಳು
ಅನ್ನಪೇಕ್ಷದಿಂದ ಯಜಿಸಿದೆನೋ
ಅನಂತ ಜನ್ಮದಲ್ಲಿ ವಿಧ್ಯುಕ್ತವಾದ ಕರ್ಮ
ವನ್ನು ಮಾಡಿ ನಿನ್ನ ಬೇಡಿದೆನೋ
ಧನ್ಯರಾದ ಪಿತೃ ಸಮಾನರೆಂಬೋ ದ್ವಯರು[1]
ಇನ್ನಾವ ಬಗೆಯಿಂದ ವೊಲಿಸಿದರೋ
ಅನುಜರಾದವರು[2] ಎನ್ನ ನಿಮಿತ್ಯವಾಗಿ
ಮನ್ನದಿ ಹರಿ ನಿನ್ನ ತುತಿಸಿದರೋ

---

೧. ಅಣ್ಣಂದಿರಾದ ಧರ್ಮ ಭೀಮಸೇನ ದೇವರು ೨. ನಕುಲ ಸಹದೇವರು

ಎನ್ನಿಂದ ಮಾನ್ಯರಾದ ಈರ್ವರು ಸತಿಯರು
ಮನ್ನಿಷಣ ಶೀರ್ಷ ಮಾಡಿದರೂ
ಜನ್ನಕನಲ್ಲಿ ನಿನ್ನ ವರವೆಷ್ಟು ಬೇಡಿದನು
ಜನ್ನನಿ ಇಲ್ಲಿ ಹಿತ ಚಿಂತಿಸಿದಳೊ
ತನ್ನಿಮಿತ್ಯವಾಗಿ ತತ್ವಾಭಿಮಾನಿ ಸುರರು
ಮನ್ನಿಸಿ ವರಗಳನ್ನು ಸಲ್ಲಿಸಿದರು
ಇನ್ನಿವರ ಮಧ್ಯ ಆವದು ತಿಳಿಯಲರಿಯೆ
ಎನ್ನ ಪುಣ್ಯದಿಂದ ಇನಿತಾಹದೋ
ಅನಂತ ನಾಮರೂಪ ಗುರು ವಿಜಯ ವಿಠ್ಠಲರೇಯಾ
ಎನ್ನ ಭಾಗ್ಯಕ್ಕೆ ಸಮ ಆವುದಯ್ಯಾ ೧

**ಮಟ್ಟತಾಳ**

ಸಲ್ಲಿಂಗ ವಿಲ್ಲಿಂಗ ಸುರರೆಲ್ಲರು ನಿನ್ನ
ವಾಲ್ಗೈಸುತಲಿಹರೊ ಪರಮ ಭೀತಿಯಿಂದ
ಶ್ರೀ ಲಕುಮಿ ನಿನ್ನ ಗುಣ ಕ್ರೀಯಗಳನ್ನು
ಆಲೋಚಿಸಿ ನೋಡೇ ಅನಂತ ಕಾಲಕ್ಕು
ಮೂಲನೀತವ ತಿಳಿದೆ ಆಶ್ಚರ್ಯದಿ ಮುಣಗಿ
ಕಾಲ ದೇಶ ವ್ಯಾಪ್ತಳೆನಿಸಿ ನಿನ್ನ ಪಾದ
ವಾಲಗ ಮಾಡುವಳೊ ಉಪಕರಣ ತಾನಾಗಿ
ಜಾಲ ಮಹಿಮ ನೀನು ಗೂಢಚಾರಿ ಎನಿಸಿ
ಲೀಲ ಮಾನುಷ ಕೈವಲ್ಯ ವಿಗ್ರಹ ನೀನಾಗಿ ವಿ-
ಶಾಲ ಕರುಣದಿಂದ ಅನುಗ್ರಹಿಸಿದುದಕೆ
ಮೇಲಾವದು ಎನ್ನ ಸಂಪದವಿಗೆ ಇನ್ನು
ವ್ಯಾಳ ವ್ಯಾಘ್ರರೂಪ ಗುರು ವಿಜಯ ವಿಠ್ಠಲರೇಯಾ
ಕಾಲ ಕಾಲಕೆ ನಿನ್ನ ಉಪಕಾರವು ಮರಿಯೇ ೨

**ತ್ರಿವಿಡಿತಾಳ**

ಅಪಾಂಗ ದೃಷ್ಟಿಯಿಂದ ಸೃಷ್ಟಿ ಸ್ಥಿತ್ಯಾದಿ ಅಷ್ಟ

ವ್ಯಾಪಾರ ಮಾಡುವಳು ಲಕುಮಿ ತಾನು
ಆಪಚಾಸನ[೧] ಮುಖ್ಯ ಸುರರು ವಿಜಯವನ್ನು
ಆಪಾಂಗ ಲೇಶದಿಂದ ಐದುವರು
ಕೃಪಾಕಟಾಕ್ಷ ವೀಕ್ಷಣದಿ ಧರ್ಮಾರ್ಥದಿ
ಆಪವರ್ಗವನೈದಿ ಸುಖಿಸುವರು
ಆಪಾರ ಗುಣನಿಧೆ ಅಮಿತ ಪೂರ್ಣ ನಿನ್ನ
ಕೃಪಣ ವತ್ಸಲತನಕೆ ಎಣೆ ಆವದೋ
ಉಪಸ್ಪರ್ಶದಿ[೨] ಪರಶು ಲೋಹ ಸುವರ್ಣದಂತೆ ಸ್ವ–
ರೂಪದಿಂದಲಿ ಹೀನನಾದವನನ್ನು
ಭೂಪತಿ ಭಿಕ್ಷುಕನ ಬಂಧುತ್ವ ಮಾಡಿದಂತೆ
ಈ ಪರಿ ಮಾಡಿ ಅತಿ ಪ್ರೀಯನೆನೆಸಿ
ತಾಪಗಳಿಲ್ಲದಲೆ ಕಾಪಾಡಿದದಕ ನಿನ್ನ
ಉಪಕಾರವು ಮರಿಯೇ ಊರ್ವಿನಾಥ
ತಾಪಶ್ವಿಗಳ ಪ್ರಾಣ ಗುರು ವಿಜಯ ವಿಠ್ಠಲರೇಯಾ
ವ್ಯಾಪಕ ಎನ್ನ ಹೃದಯ ಕಮಲದಲ್ಲಿ ೩

## ಅಟ್ಟತಾಳ

ಅಂದು ಮಾಡಿದ ಕೃಪೆ ವೈಶೇಷ[೩] ಶೇಷ[೪]ವೊ
ಇಂದು ಸ್ವಪ್ನದಲ್ಲಿ ಅತಿ ವ್ಯಾಮೊ ಪ್ರೀಯಾ[೫]
ನೆಂದು ನುಡಿದ ಮಾತ್ರ ಕಲಿಕೃತ ಕಲ್ಮಷ
ದಿಂದ ಪಾವನನಾದೆ ಸಂದೇಹ ಇದಕ್ಕಿಲ್ಲ
ತಂದೆಯೆ ನಿನ್ನಯ ಕರುಣಾಸಿಂಧುವಿಗೆ ನಮೊ
ಹಿಂದೆ ಕರುಣದಿ "ಮಮ ಪ್ರಾಣಾಹಿ ಪಾಂಡವಃ"
ರೆಂದು ನುಡಿದ ಮಾತ್ರ ಜ್ಞಾನ ಭಕ್ತಿ ಸುಖ
ವೃಂದಗಳೊದಗಿದ ತೆರದಿ ಎನಗೆ

---

೧. ಕಮಲಾಸನ = ಬ್ರಹ್ಮ ೨. ಸಮೀಪಿಸು, ಮುಟ್ಟುವದರಿಂದ ೩. ವೈಶೇಷ = ಅಶೇಷಾ ಕಾರಣ ಅನುಗ್ರಹ. ೪. ಶೇಷ = ಸಾಧಾರಣ ಕಾರಣ ಅನುಗ್ರಹ ೫. ಅತ್ಯಂತ ಪ್ರಿಯ

ಇಂದು ಮಂದಹಾಸದಿಂದ ನುಡಿದ ಮಾತಿಗೆ ಆ-
ನಂದವ ಪಾಲಿಸು ಕುಂದುಗಳೆಣಿಸದೆ
ಮಂದರಧರ ಗುರು ವಿಜಯ ವಿಠ್ಠಲರೇಯಾ
ಎಂದೆಂದು ಈ ಮಾತು ಮರಿಯದಿರು ದೇವಾ ೪

**ಆದಿತಾಳ**

ಕರುಣನಿಧಿಯೆ ನಿನ್ನ ಘನವಾದ ವಾಕ್ಯವನ್ನು
ಪರವಾಗಿ ಎನ್ನಲ್ಲಿ ಸಫಲ ಮಾಡಿದಯ್ಯಾ
ಹರಿ ನಿನ್ನ ಕರುಣಕ್ಕೆ ಸರಿ ಉಂಟೆ ಸರಿ ಉಂಟೆ
ಮರಿಯೆ ಮರಿಯೆ ನಿನ್ನ ಅನಿಮಿತ್ತ ಉಪಕಾರ
ನರ ಸಖನೆನಿಪ ಗುರು ವಿಜಯ ವಿಠ್ಠಲರೇಯಾ
ಪರಮ ಕೃಪಾನಿಧೆ ಪರಮಾಪ್ತ ನಿರಲಿಪ್ತ ೫

**ಜತೆ**

ಅನಂತ ಜನುಮದ ವ್ರತ ಪುಣ್ಯ ಫಲವಿದೆ
ಅನಂತ ಗುಣಪೂರ್ಣ ಗುರು ವಿಜಯ ವಿಠ್ಠಲರೇಯಾ ॥

## ೧೩೨

[ಹಿಂದೆ ಪಾರ್ಥ ಜನುಮದಲ್ಲಿ ಇದ್ದ ಭಗವದ್ವಿಭೂತಿ ವರ್ಣನೆ ಶುಕ್ತಿಯಲ್ಲಿ ರಜತ ಭ್ರಾಂತಿಯಂತೆ ತೋರಿದರೂ ನಿಜವಾಗಿ ಈ ಪ್ರಮೇಯ ಮಧ್ವ ಮತಾನುಗರು ಒಪ್ಪರು. ದತ್ತ ಸ್ವಾತಂತ್ರ್ಯ ಇತ್ತ ಹರಿಯೇ, ನೀನಿತ್ತ ನಿನ್ನ ವಿಭೂತಿಯಿಂದಲೆ ಸಕಲ ಜ್ಞಾನ ಸಂಪದ, ಬಲ, ಗಾಂಡೀವವನ್ನು ಎತ್ತಿದ್ದು ನಿನ್ನ ವಿಭೂತಿ ಈಗಿಲ್ಲದ ಕಾರಣ ತೃಣ ಚಲಿಸದಾದೆ.] ಇನ್ನಾದರೂ ನೀನೆ ಕರುಣಿಸು.]

## ವಿಭೂತಿ ಸುಳಾದಿ

### ಧ್ರುವತಾಳ

ತತ್ರ ಶ್ರೀ ರ್ವಿಜಯೋರ್ಭೂತಿ ಎಂದ ಕಾರಣದಿಂದ
ಶ್ರುತ್ಯಾಭಿಮಾನರಾದ ಸುರರ ತತಿಯು
ಚಿತ್ತಕ್ಕೆ ನಿಲುಕದ ಅಗಣಿತ ಮಹಿಮ ಎನ್ನ
ಹತ್ತಿಲಿ ಬಿಡದಿಪ್ಪ ಕಾರಣದಿಂದ
ಭಕ್ತರಗ್ರೇಸರನ ಉಕ್ತಿಯ ತೆರದಂತೆ
ಉತ್ತಮವಾದ ಭೂತಿ[1] ಐದಿದೆನೊ
ಈ ತೆರವಾದದ್ದು ನಿನ್ನಿಂದಲ್ಲದೆ ಎನ್ನ
ಕೃತ್ಯವಲ್ಲವಯ್ಯಾ ನಿನ್ನ ಸಾಕ್ಷಿ
ಶುಕ್ತಿಯಲ್ಲಿ ರಜತ ಭ್ರಾಂತಿಯು ತೋರಿದಂತೆ
ಉಕ್ತವಾದ ಪಾದ ಪಠಣದಿಂದ
ಸ್ವಾತಂತ್ರದಿಂದ ಎನಗೆ ಭೂತಿಯು ತೋರುತಿದೆ
ಮರ್ತ್ಯರಾದವರ ಕಂಗಳಿಗೆ
ಸತ್ವ ಪ್ರಾಚುರ್ಯವಾದ ಪೂರ್ಣ ಪ್ರಜ್ಞರ ಮತ
ವರ್ತಿಗಳಾದವರು ಒಪ್ಪರಿದನು
ಮಿತ್ರನಿಂದಲ್ಲಿ ಸಹಿತನಾದ ಪಾರ್ಥನಲ್ಲಿ
'ಅತ್ರ' ವಿಭೂತಿ ಉಂಟು ದೃಢವಾಗಿ
ಪುತ್ರ್ಯಭಿಯುಕ್ತಳಾದ ಸತಿಯೇವೆ ಮಂಗಳ
ಯುಕ್ತಳೆನಿಸಿಕೊಂಬ ಸೊಬಗಿನಂತೆ
ನಿತ್ಯ ಮುಕ್ತಳಾದ ಲಕುಮಿ ಬೊಮ್ಮಾದ್ಯರೆಲ್ಲ
ಚಿತ್ತಜ ಪಿತ ನಿನ್ನ ಸಹಿತವಾಗಿ
ಉತ್ತಮವಾದ ಭೂತಿ ಐದಿ ಸುಖಿಸುವರು
ವ್ಯತ್ಯಸ್ಥ ಇದಕಿಲ್ಲ ಎಂದೆಂದಿಗೆ
ಈ ತೆರವಾಗದಿರೆ ಪಾರ್ಥನಿಂದಲೆ ಭೂತಿ

---

೧. ಭೂತಿ = ಪಾರಲೌಕಿಕ ಸಂಪತ್ತು, ಕಾಂತಿ

ಸತ್ಯವೆಂದರಿತರೆ ಕಾರ್ಯದಿಂದ
ಪ್ರತ್ಯಕ್ಷವಾಗುವದು ಘಟಕ ಕೃತ್ಯಗಳಿಂದ ಈ
ಗಾತ್ರವೆ ಇದಕೆ ಸಾಕ್ಷಿ ಪೇಳಲೇನು
ಮುಕ್ತರಾಶ್ರಯ ಗುರು ವಿಜಯ ವಿಠ್ಠಲ ನಿನ್ನ
ಅತ್ಯಧಿಕ ಪ್ರೀತಿಯೊ ಭೂತಿ ಎನಗೆ ೧

## ಮಟ್ಟತಾಳ

ನೂರು ಸಾಸಿರ ಸಂಖ್ಯ ಪರಿಮಿತವಾಗಿದ್ದ
ಘೋರ ಭಯಂಕರದಾ ಧನು ಕೈಯಲಿ ಪಿಡಿದು
ಚಾರು ವಿಲಾಸದಲಿ ವ್ಯವಧಾನವ ಕೊಡದೆ
ಕ್ರೂರ ಶತ್ರುಗಳನ್ನು ಎಡಬಿದಲಿ ಯೆಚಿವ
ಧೀರನೆನಿಸಿ ನಾಮಾ ವರದಂತೆ ಪಡೆದು
ಸಾರೆಕರದಲ್ಲಿ ಈಗ ತೃಣ ಚಲಿಸುವ ಶಕ್ತನಾಹದಿದ್ದವನಾದೆ
ಧಾರುಣಿಯಲಿ ಮಾನ್ಯನೆನೆಸಿ ಮೆರೆವನಾಗಿ
ನರಾಧಮರಿಂದ ಬಲು ನಿಂದಿತನಾದೆ
ವಾರಿಜಾಕ್ಷ ಗುರು ವಿಜಯ ವಿಠ್ಠಲರೇಯಾ
ದೂರ ನೋಳ್ಪದರಿಂದ ಇನಿತಾಯಿತು ಎನಗೆ ೨

## ತ್ರಿವಿಡಿತಾಳ

ವಿಜಯ ನಾಮವ ಪಡೆದು ಈ ಕುಂಭಿಣಿಯ ಮಧ್ಯ
ಅಜಯ ಉಳ್ಳವನಾದೆ ಅಲ್ಪರೊಡನೆ
ದ್ವಿಜ ವರೂಢಿಯ ಪಾದ ಭಕುತನೆನೆಸಿ ಈಗ
ನಿಜ ಭಕ್ತರಿಗೆ ದೂರನಾದೆ ನಿಂದು
ಕುಜನ ಮರ್ದನ ಗುರು ವಿಜಯ ವಿಠ್ಠಲನೆಂಬ
ವಿಜಯ ಎನ್ನಗಲಿದ ಕೃತ್ಯದಿಂದ ೩

**ಅಟ್ಟತಾಳ**

ಹತ್ತು ನಾಮಗಳು ಧಾರಿತ್ರಿಯೊಳಗೆ ಪಡೆದು
ಸಾರ್ಥಕನೆನೆಸಿ ಇತ್ತಲೀಗಲು ಅದಕೆ
ನಿರರ್ಥಕ ನಾನಾದೆ ಬಲು ವಿಧದಿಂದಲ್ಲಿ
ಶಕ್ತನಾದ ನಿನ್ನ ಯುಕ್ತನಾಗದಿರೆ
ವ್ಯರ್ಥವಾಗುವವು ಶಕ್ತ್ಯಾದಿ ಗುಣಗಳು
ಭೃತ್ಯ ವತ್ಸಲ ಗುರು ವಿಜಯ ವಿಠ್ಠಲ ಎನ್ನ
ಹತ್ತೀಲಿ ನೀನಿಂದು ಕೃತಕೃತ್ಯನೆನೆಪದು ೪

**ಆದಿತಾಳ**

ಕೊಟ್ಟಿದ್ದ ಭಾಷೆಯನ್ನು ಸತ್ಯವ ಮಾಳ್ಪನಾಗಿ
ಕೃಷ್ಣರಾಯ ಎನ್ನ ತೊಲಗದ ಕಾರಣದಿ
ಸೃಷ್ಟಿಯೊಳಗೆ ನಾನು ಬಲು ಧನ್ಯನೆನೆಸಿದೆ
ಸೃಷ್ಟೇಷ್ಟದನೆ ನೀನು ಬಿಟ್ಟು ನೋಡುವ ಕಾಲ ನಿ–
ಕೃಷ್ಟದೊಳಗತಿ ನಿಕೃಷ್ಟನಾದೆ ಬಲು
ಅಷ್ಟಮ ಗರ್ಭಜಾತ ಗುರು ವಿಜಯ ವಿಠ್ಠಲನ್ನ
ದೃಷ್ಟಿಯೆ ಎನಗೆ ಗತಿ ಶುಭವಯ್ಯಾ ಆವ ಕಾಲಾ ೫

**ಜತೆ**

ನಿನ್ನ ಕರುಣದಿಂದ ಧನ್ಯನಾನೆಲೊ ದೇವ
ಪನ್ನಂಗಚಲವಾಸ ಗುರು ವಿಜಯ ವಿಠ್ಠಲರೇಯಾ ೬

[ಪಿಂಗಳನಾಮ ಸಂವತ್ಸರ ಕಾರ್ತಿಕ ಶುದ್ಧ ೩]

೧೩೩

# ಶ್ರೀಮಹಾಲಕ್ಷ್ಮೀ ಸ್ತೋತ್ರ

## ಧ್ರುವತಾಳ

ಇಂದುಮುಖಿಯೆ ನಿನ್ನ ಸಂದರುಶನದಿಂದಾ
ನಂದವಾಯಿತು ಅರವಿಂದನಯನೆ
ಅಂದಿಗೆ ಗೆಜ್ಜೆ ಮೊದಲಾದಾಭರಣದಿಂದ
ಸುಂದರವಾದ ರೂಪದಿಂದ ಬಂದು
ಮಂದಹಾಸದಿಂದ ಮಾತನಾಡಿದುದರಿಂದ
ಬೆಂದು ಪೋದೆವೆನ್ನ ತ್ರಿವಿಧ ತಾಪ
ಇಂದಿರೇ ಈ ರೂಪದಿಂದ ತೋರಿದಳು
ಬಂಧುನೆನಿಪ ಲೋಕ ಗುರು ಸತಿಯೊ
ಕಂದುಕಂಧರ[೧]ನಾದ ದೇವನ್ನ ರಾಣಿಯೊ
ಇಂದ್ರಾಣಿ ಮೊದಲಾದ ಜನರೋರ್ವಳೊ
ಮಂದಾಕಿನಿಯೊ ಇದರೊಳೊಂದರಿಯೇ ಕರುಣ
ಸಿಂಧುವೆ ನಿನ್ನ ಪದಕೆ ನಮೊ ನಮೊ
ಮಂದರ್ಗೆ ಯೋಗ್ಯವಾದ ಮನುಷ್ಯ ದೇಹವನ್ನು
ವೊಂದಿಪ್ಪ ಕಾರಣದಿಂದ ನಿನ್ನ
ಅಂದವಾದ ರೂಪ ಶ್ರೀಯಗಳನ್ನು ತಿಳಿದು
ವಂದಿಸಿ ವರಗಳು ಬೇಡಲಿಲ್ಲ
ಇಂದಿರೆ ರಮಣನ ಬಂಧಕ ಶಕುತಿಯು
ಮಂದನಾದವ ನಾನು ಮೀರುವೆನೇ
ಕಂದನ ಅಪರಾಧವೆಣಿಸದಲೇ ನೀನು
ಅಂದ ವಚನವನ್ನೆ ಸತ್ಯ ಮಾಡಿ

---

೧. ನೀಲಕಂಠ, ಮಹರುದ್ರದೇವರು

ಬಂಧುನೆನಿಸಿಕೊಂಬ ಗುರು ವಿಜಯ ವಿಠ್ಠಲನ್ನ
ಎಂದೆಂದಗಲದಿಪ್ಪ ವರವ ನೀಡು ೧

**ಮಟ್ಟತಾಳ**

ಸಾನುರಾಗದಿ ಎನ್ನ ಸಾಮೀಪ್ಯವನ್ನೈದಿ
ಪಾಣಿದ್ವಯದಲ್ಲಿ ವೇಣು ಸ್ವರಶ ಮಾಡಿ
ಏನು ಬೇಡುವೆ ಬೇಡು ನೀಡುವೆನೆಂತೆಂದು
ವಾಣಿಯಿಂದಲಿ ನುಡಿದು ಅನುಗ್ರಹಿಸಿದುದಕೆ
ಮಾನುಷನ್ನ ಜನಿತ ಅಜ್ಞಾನದಿಂದ
ಜ್ಞಾನನಿಧಿಯೆ ನಿನ್ನ ಪದದ್ವಂದ್ವಕೆ ನಮಿಸಿ
ಮಾನಸಿನಾಪೇಕ್ಷೆ ವಿವರಿಸಿ ಬಿನ್ನೈಸಿ
ಪೂರ್ಣ ಮಾಡುಯೆಂದು ವರಗಳ ಬೇಡದಲೆ
ಹೀನ ಮನೋಭಾವ ಮಾಡಿದೆ ಹೇ ಜನನಿ
ಧೇನುವಿಗೆ ವತ್ಸ ಮಾಡಿದ ಅಪಚಾರ
ತಾನೆಣಿಸಿ ಅದರ ಸಾಕದೆ ಬಿಡುವದೆ
ಮಾನ ನಿಧಿಯೆ ಎನ್ನ ಅನುಚಿತವೆಣಿಸದಲೆ
ಏನು ಬೇಡಿದ ವರವ ನೀಡುವೆನೆಂತೆಂದ
ವಾಣಿ ಸತ್ಯ ಮಾಡು ಅವ್ಯವಧಾನದಲಿ
ಜ್ಞಾನಪೂರ್ಣ ಗುರು ವಿಜಯ ವಿಠ್ಠಲರೇಯ
ಪ್ರೇರಣೆಯಿಂದಲ್ಲಿ ಪ್ರಾರ್ಥಿಸುವೆನು ನಿನ್ನ ೨

**ತ್ರಿವಿಡಿತಾಳ**

ನಿನ್ನನುಗ್ರಹದಿಂದ ಧನ ಮೊದಲಾದ ವಸ್ತು
ತನ್ನಿಂದ ತಾನೆ ಬಂದು ಒದಗುತಿರೆ
ಇನ್ನಿದಕ್ಕೆ ನಾನು ನಿನ್ನ ಪ್ರಾರ್ಥಿಪೊದಿಲ್ಲ
ಬಿನ್ನಪವನು ಉಂಟು ಗ್ರಹಿಸಬೇಕು
ಅನಂತ ಜನುಮದ ಪುಣ್ಯ ಪ್ರಭಾವದಿಂದ
ಘನ್ನ ಮಹಿಮನಾದ ಪುರುಷನೋರ್ವ
ಕ್ಷಣವಗಲದಿಪ್ಪ ಆಪ್ತನಾದವನೆನಿಸಿ

ಎನ್ನ ವಿರಹಿತವಾದ ಸ್ಥಾನವನ್ನು
ಕಣ್ಣಿಲಿ ನೋಡಲಾರೆನೆಂದು ನುಡಿದವನ್ನ
ಎನ್ನ ದುರ್ಭಾಗ್ಯದಿಂದ ಅಗಲಿ ನಾನಾ
ಬನ್ನ ಬಡುತಲಿಪ್ಪೆ ನಿಮಿಷ ಒಂದ್ಯುಗವಾಗಿ
ಮನ್ನಿಸಿ ಮನಕ ತಂದು ಪೂರ್ವದಂತೆ
ಮನ್ಮನದಲಿ ತೋರೊ ವ್ಯವಧಾನ ಮಾಡದಲೆ
ಇನ್ನಿದೆ ಬೇಡುವೆನೇ ಜನ್ನನೀಯೇ
ನಿನ್ನಿಂದ ನುಡಿದಂಥ ವಾಕ್ಯ ಸಫಲ ಮಾಡಿ
ಮನ್ಮನೋರಥವನು ಪೂರ್ಣ ಮಾಡು ಆ
ಪನ್ನ[1]ರ ರಕ್ಷಿಸುವ ಬಿರಿದು ನಿನಗೆ ಉಂಟು
ಸನ್ನುತಿಸಿ ಬೇಡಿಕೊಂಬೆ ಗುಣನಿಧಿಯೇ
ಪನ್ನಂಗತಲ್ಪ ಗುರು ವಿಜಯ ವಿಠ್ಠರೇಯ
ನಿನ್ನ ವಾಕ್ಯವೊಹಿಪ ಸರ್ವಕಾಲ ೩

**ಅಟ್ಟತಾಳ**

ಕರಣಗಳಲಿ ಹರುಇ ವ್ಯಾಪಕನೆಂತೆಂಬ
ಪರಿಯನ್ನು ತಿಳಿದಿಪ್ಪ ನರ ನುಡಿದ ವಾಕ್ಯ
ಪರಮೇಷ್ಠಿ ಮೊದಲಾದ ಸುರರು ಸಹಿತನಾದ
ಸಿರಿಪತಿ ವೊಹಿಸುವನೆಂದು ಪೇಳುತಲಿರೆ
ಕರಣಮಣನಿಗಳಾದ ಸುರರಿತ್ತ ವರಗಳ
ಹರಿ ಸತ್ಯ ಮಾಡುವನೆಂಬದಚ್ಚರವೇನೊ
ಶರಣನ್ನ ಮನೋರಥ ಪೂರ್ಣ ಮಾಡುವುದಕ್ಕೆ
ಕೊರತೆ ನಿನಗಾವುದು ಕೋಮಲಾಂಗಿಯೆ ನಿನ್ನ
ಚರಣ ದ್ವಂದ್ವಕೆ ನಮಿಸಿ ಶರಗೊಡ್ಡಿ ಬೇಡುವೆ
ತ್ವರಿತದಿಂದಲಿ ಈ ವರವನ್ನೆ ಪಾಲಿಸು
ಸುರಪಕ್ಷಪಾಲ ಗುರು ವಿಜಯ ವಿಠ್ಠಲ ನಿಮ್ಮ
ಕರವಶನಾಗಿಪ್ಪ ಆವಾವ ಕಾಲದಲಿ ೪

---

೧. ಹೊಂದಿದವರ

**ಆದಿತಾಳ**

ಆವಾವ ಜನ್ಮದಲ್ಲಿ ಅರ್ಚಿಸಿದೆ ನಿನ್ನ
ಆವಾವ ಕಾಲದಲ್ಲಿ ಅನುಗ್ರಹಿಸಿದ ವರವು
ಈ ವಿದ್ಯಮಾನವಾದ ಜನುಮದಲೊಮ್ಮೆ ಘನ್ನ
ದೇವಿಯೋ ನಿನಪಾದ ಸಾರಿದವನಲ್ಲ
ಗೋವತ್ಸ ನ್ಯಾಯದಿಂದ ನಿನಗ ನೀನೆ ಬಂದು
ಆವದು ಬೇಡಿದ ವರಗಳನೀವೆನೆಂದು
ಸುವಾಣಿಯಿಂದ ಎನ್ನ ಆದರಿಸಿದಿ ನಿನ್ನ
ಔದಾರ್ಯತನಕಿನ್ನು ಆವದಾವದು ಸಮ
ಶ್ರೀ ವತ್ಸಲಾಂಛನ ಗುರು ವಿಜಯ ವಿಠ್ಠಲ ನಿನ್ನ
ಭಾವದಿಂದಲಿ ನೋಳ್ಪ ಭಾಗ್ಯವೇ ಪಾಲಿಸೇ ೫

**ಜತೆ**

ನಿನ್ನ ದರುಶನದಿಂದ ಅನಿಷ್ಟವನು ನಾಶ
ಘನ್ನ ಇಷ್ಟ ರೂಪ ಗುರು ವಿಜಯ ವಿಠ್ಠಲ ಪ್ರಾಪ್ತ ॥

[ರಕ್ತಾಕ್ಷಿ ಸಂ॥ ಶ್ರಾವಣ ಶುದ್ಧ ೧ ಬುಧವಾರ ನವವೃಂದಾವನದಲ್ಲಿ ಮಾಡಿದ್ದು.]

೧೩೪

## ಶ್ರೀವಾಯುದೇವರ ಪ್ರಾರ್ಥನೆ

**ಧ್ರುವತಾಳ**

ಘನ ದಯಾನಿಧಿಯಾದ ಪವನರಾಯನೆ ನಮೊ
ಪುನರಪಿ ನಮೋ ನಿನ್ನ ಪಾದ ಸರಸಿರುಹಕೆ
ಮಣಿದು ಬೇಡಿಕೊಂಬೆ ನೀನವೆ ಗತಿ ಎಂದು

ನಿನಗಿಂತ ಹಿತರಾರು ಜೀವನಕೆ
ಸನಕಾದಿ ವಂದ್ಯನ್ನ ಆಜ್ಞದಿಂದಲಿ ಪರಮ
ಅಣುಗಳಲ್ಲಿ ವ್ಯಾಪ್ತನಾಗಿ ಬಿಡದೆ
ಅಣುರೂಪಗಳಿಂದ ನಿಂದು ಮಾಡಿದ ಕೃತ್ಯ
ಮನಸಿಜ ವೈರಿಯಿಂದ ತಿಳಿಯಲೊಶವೆ
ಹೀನ ಮನಸಿನಿಂದ ಬದ್ಧನಾದವ ನಾನು
ಗುಣರೂಪ ಕ್ರಿಯಗಳ ವಿದಿತನೇನೊ
ತನುವಿನೊಳಗೆ ಮೂರು ಕೋಟ್ಯಧಿಕ ಎಪ್ಪತ್ತೆರಡು
ಎನಿಪ ಸಾಸಿರ ರೂಪದಿಂದ ಸತಿಯ ಸಹಿತ
ತೃಣ ಮೊದಲಾದ ಜೀವ ಪ್ರಕೃತಿ ಕಾಲಕರ್ಮ
ಅನುಸರವಾಗಿ ಕ್ರಿಯಗಳನೆ ಮಾಡಿ
ಅನಿಮಿತ್ಯ ಬಾಂಧವನೆನಿಸಿ ಸಜ್ಜನರಿಗೆ
ಜ್ಞಾನ ಭಕ್ತ್ಯಾದಿಗಳು ನೀನೆ ಇತ್ತು
ಮನದಲ್ಲಿ ಎರಿ ರೂಪ ಸಂದರುಶನವಿತ್ತು
ಘನೀ ಭೂತವಾದ ಆನಂದದಿಂದ
ವಿನಯದಿಂದಲ್ಲಿ ಪೊರೆವ ಉಪಕಾರ
ವನು ಸ್ಮರಿಸಲಾಪೆನೆ ಎಂದಿಗೆ ಗುಣನಿಧಿಯೆ
ಇನ ಕೋಟಿ ತೇಜ ಗುರು ವಿಜಯ ವಿಠ್ಠಲರೇಯ
ಇನಿತು ನಿನ್ನೊಳು ಲೀಲೆ ಮಾಡುವ ಆವಕಾಲ ೧

## ಮಟ್ಟತಾಳ

ಮಿನುಗುವ ಕಂಠದಲಿ ಎರಡು ದಳದ ಕಮಲ
ಕರ್ಣಿಕಿ ಮಧ್ಯದಲಿ ಸತಿ ಸಹಿತದಲಿದ್ದು
ವನಜಾಸನವಿಡಿದು ತೃಣಜೀವರ ತನಕ
ತನುವಿನೊಳಗೆ ವಿಹಿತವಾದ ಶಬ್ದಗಳನ್ನು
ನೀವೆ ಮಾಡಿ ಅವರವರಿಗೆ ಕೀರ್ತಿ
ಘನತೆಯನೇ ಇತ್ತು ಕಾಣಿಸಿಕೊಳ್ಳದಲೆ
ಮನುಜಾಧಮರಿಗೆ ಮಾಯವ ಮಸಗಿಸಿ
ಕೊನೆ ಗುಣದವರನ್ನ ನಿತ್ಯ ದುಃಖಗಳಿಂದ

ದಣಿಸುವಿ ಪ್ರಾಂತ್ಯದಲಿ ಕಡೆಮೊದಲಿಲ್ಲದಲೆ
ದನುಜ ಮರ್ದನ ಗುರು ವಿಜಯ ವಿಠ್ಠಲರೇಯ
ನಿನಗಿತ್ತನು ಈ ಪರಿಯ ಸ್ವತಂತ್ರ ಮಹಿಮೆಯನು ೨

## ರೂಪಕತಾಳ

ನಾಸಿಕ ಎಡದಲ್ಲಿ ಭಾರತಿ ತಾನಧೋ
ಶ್ವಾಸ ಬಿಡಿಸುವಳು ನಿನ್ನಾಜ್ಞದೀ
ನಾಸಿಕ ಬಲದಲ್ಲಿ ಈಶನಾಜ್ಞದಿ ಊರ್ಧ್ವ
ಶ್ವಾಸ ಬಿಡಿಸಿ ಪೊರೆವಿ ಜೀವರನ್ನೂ
ತಾಸಿಗೊಂಭೈನೂರು ಕ್ರಮದಿಂದ ಇಪ್ಪತ್ತೊಂದು
ಸಾಸಿರದಾರು ಶತದಿನ ಬಂದಶಲಿ
ಭೂ ಶಬ್ದದಿಂದಲ್ಲ ಹರಿಯನ್ನೇ ಪೂಜಿಸುತ್ತ
ಆಶೀತಿ ನಾಲ್ಕು ಲಕ್ಷ ಜೀವರಿಗೆ
ಲೇಸು ಮಿಶ್ರಗಳೆಲ್ಲ ಅದರಂತೆ ನಿರ್ದೇಶ
ವಾಸಗೈಸುವಿ ನೀನೆ ಪ್ರಾಂತ್ಯದಲ್ಲಿ
ಈ ಸುಜ್ಞಾನವೆ ತಿಳಿದುಪಾಸನೆ ಮಾಳ್ಪರಿಗೆ
ಶ್ವಾಸ ಮಂತ್ರದ ಫಲವ ಶೇಷವೀವ
ಕಾಶಿನಿಂದಲಿ ಕೋಟಿ ದ್ರವ್ಯ ಪ್ರಾಪುತದಂತೆ
ವಾಸುದೇವನು ಇದಕೆ ತುಷ್ಟನಾಗೀ
ಈ ಶರೀರದಿ ಪೊಳೆದು ಕ್ಲೇಶವ ಪರಿಹರಿಪ
ಈ ಸಂಜ್ಞದಿಂದಲ್ಲಿ ದಿವಿಜರೆಲ್ಲ
ದಾಸರಾಗಿಹರಯ್ಯಾ ನಿನ್ನ ಪಾದವ ಬಿಡದೆ
ಕ್ಲೇಶಾನಂದಗಳೆಲ್ಲ ನಿನ್ನಾಧೀನ
ದೇಶ ಕಾಲ ಪೂರ್ಣ ಗುರು ವಿಜಯ ವಿಠ್ಠಲರೇಯ
ಭಾಸುರ ಜ್ಞಾನ ನಿನ್ನಿಂದವೀವ ೩

## ಝಂಪಿತಾಳ

ಪಂಚ ದ್ವಾರಗಳಲ್ಲಿ ಪಂಚವ ಪುಷಗಳಿಂದ
ಪಂಚರೂಪನ ಧ್ಯಾನ ಮಾಳ್ಪ ನಿನ್ನ

ಪಂಚಮುಖ ಮೊದಲಾದಮರರೆಲ್ಲರು ನಿ–
ಶ್ಚಂಚಲದಿ ಭಜಿಸುತಿರೆ ಅವರವರ
ವಾಂಛಿತಗಳನಿತ್ತು ಪರಮ ಮುಖ್ಯ ಪ್ರಾಣ ದ್ವಿ–
ಪಂಚಕರಣಕೆ ಮುಖ್ಯ ಮಾನಿ ನೀನೆ
ಪಂಚರೂಪಗಳಿಂದ ಪಂಚಾಗ್ನಿಗತನಾಗಿ
ಪಂಚ ವ್ಯಾಪರಗಳು ಮಾಳ್ಪ ದೇವ
ಪಂಚ ಪರ್ವದಲಿಪ್ಪ ಪಂಚ ಪಂಚಮರರೊ
ಸಂಚರಿಸುವರಯ್ಯಾ ನಿನ್ನಿಂದಲಿ
ಪಂಚಭೇದಗಳರುಹಿ ಶುದ್ಧ ಶಾಸ್ತ್ರಗಳಿಂದ ಪ್ರ–
ಪಂಚ ಸಲಹಿದ ವಿಮಲ ಉಪಕಾರಿಯೇ ನಿ–
ಷ್ಕಿಂಚನ ಪ್ರೀಯ ಗುರು ವಿಜಯ ವಿಠ್ಠಲರೇಯನ
ಮಿಂಚಿನಂದದಿ ಎನ್ನ ಮನದಿ ನಿಲಿಸೊ ೪

## ತ್ರಿವಿಡಿತಾಳ

ದಳ ಅಷ್ಟವುಳ್ಳ ರಕ್ತಾಂಬುಜದ ಮಧ್ಯ
ಪೊಳೆವ ಕರ್ಣಿಕೆಯಲ್ಲಿ ಶೋಭಿಸುವ
ಮೂಲೇಶನ ಪಾದ ಪಂಕಜದಲಿ ನಿಂದು
ಸಲೆ ಭಕುತಿಯಿಂದ ಭಜಿಸುವ ನಿನ್ನ ಚರಣ
ಮೂಲದಲ್ಲಿ ಜೀವ ಆಶ್ರೈಸಿ ಇಪ್ಪನಾಗಿ
ಸ್ಥಳವ ಸೇರಿಪ ಭಾರ ನಿನ್ನದಯ್ಯಾ
ಒಲ್ಲೆನೆಂದರೆ ಬಿಡದು ಭಕತರ ಅಭಿಮಾನ
ಒಲಿದು ಪಾಲಿಸಬೇಕು ಘನ ಮಹಿಮಾ
ಖಳ ದರ್ಪ ಭಂಜನ ಗುರು ವಿಜಯ ವಿಠ್ಠಲರೇಯ
ಒಲಿವ ನಿಮ್ಮಯ ಕೃಪೆಗೆ ವಿಮಲ ಚರಿತ ೫

## ಅಟ್ಟತಾಳ

ಜಾಗೃತಿ ಸ್ವಪ್ನ ಸುಷುಪ್ತಿಯಲ್ಲಿ ನೀನೆ
ಜಾಗರೂಕನಾಗಿ ಜೀವನ ಪಾಲಿಸಿ
ಭಾಗತ್ರಯದಲ್ಲಿ ವಿಭಾಗ ಮಾಡುವಿ

ನಾಗಭೂಷಣಾದಿ ಸುರರಿಗೆ ಜೀವನ
ಸಾಗರ ಮೊದಲಾದ ಸಕಲರಲ್ಲಿ ವ್ಯಾಪ್ತ
ನಾಗರಾಜನ ಅಂಗುಟದಿ ಮೀಟಿದ ಶಕ್ತ
ಯುಗಾದಿ ಕೃತು ನಾಮ ಗುರು ವಿಜಯ ವಿಠ್ಠಲರೇಯನ
ಯೋಗವ ಪಾಲಿಸಿ ಭವದೂರೂ ಮಾಡೋದು ೬

ಆದಿತಾಳ

ಅಸುರರ ಪುಣ್ಯವನ್ನು ಭಕ್ತರಿಗಿತ್ತವರ
ಅಸಮೀಚೀನ ಕರ್ಮ ದನುಜರಿಗುಣಿಸುವಿ
ಈಶನೆ ಗತಿಯೆಂದು ನೆರೆ ನಂಬಿದವರಿಗೆ
ಸು ಸಮೀಚೀನವಾದ ಮೋದಗಳೀವಿ ನಿತ್ಯ
ವಸುಧೆಯ ಭಾರವನ್ನು ಧರಿಸಿ ತ್ರಿಕೋಟಿಯ
ಸುಶರೀರಗಳಿಂದ ಬಹಿರಾವರಣದಲ್ಲಿ
ವಾಸವಾಗಿ ಸಕಲ ಭೂತ ಹೃತ್ಕಮಲದಲ್ಲಿ ನಿಂದು
ಬಿಸಜಜಾಂಡವನ್ನು ಪೊರೆವ ಕರುಣಿ ನೀನು
ಅಸಮನೆನಿಪ ಗುರು ವಿಜಯ ವಿಠ್ಠಲರೇಯ
ವಶವಾಗುವನು ನಿನ್ನ ಕರುಣದಿ ಆವಕಾಲಾ ೭

ಜತೆ

ಹರಿಯ ವಿಹಾರಕ್ಕೆ ಆವಾಸನೆನಿಸುವಿ
ಗುರು ವಿಜಯ ವಿಠ್ಠಲನ್ನ ಸುಪ್ರೀತ ಘನದೂತ ॥

## ೧೩೫

[ಶ್ರೀ ವಾಯುದೇವರ ಅನುಗ್ರಹವೆ ಮುಖ್ಯ ತಾರಕ. ಹಿಂದೆ ಅರ್ಜುನಾವತಾರದಲ್ಲಿ ವಾಯುವೇ ಭೀಮಸೇನನು ಜೇಷ್ಠನಾಗಿ ಅವತರಿಸಿ ಅನೇಕ ಕಾಲದಲ್ಲಿ ರಕ್ಷಿಸಿದ್ದು ಆಶ್ಚರ್ಯ ವಲ್ಲ. ಈಗ ದುರುಳ ಕಲಿ ಬಾಧೆಯಿಂದಾದ ಅಜ್ಞಾನಾಂಧಕಾರವನ್ನು ಪರಿಹರಿಸಿ ರಕ್ಷಿಸು, ಹೃದಯ ಧ್ವಜಕೇತನದಲ್ಲಿ ಪೊಳೆದು ಹರಿಯನ್ನು ತೋರಲು ಪ್ರಾರ್ಥನಾ.]

## ಧ್ರುವತಾಳ

ಪಿತೃ ಸಮಾನ ಜೇಷ್ಠನೆಂತೆಂಬ ವಿಧದಿಂದ
ಪಿತೃ ನಿಷ್ಠವಾದ ಕರುಣದಿಂದ
ಅತಿಶಯವಾಗಿ ಎನ್ನ ಪಾಲನ ಮಾಡದಿರೇ
ಪಿತೃ ಸಮಾನ ಜೇಷ್ಠನೆಂಬೋಕ್ತಿಗೆ ವ್ಯಾ-
ಹತಿ ಬಾರದೇನೊ ಶುಭಗಾತ್ರ ಜಗದ ಸೂತ್ರ
ಮತಿ ಪ್ರದಾತೃನೆನಿಪ ಪವನರಾಯಾ
ಈ ತೆರವಾದ ಘನತಿ ವೊಹಿಸದಿರಲು ಇರಲಿ
ಯತಾರ್ಥವಾಗಿ ಎನಗೆ ಭ್ರಾತೃನೆನೆಸಿ
ಭಾತೃ ನಿಷ್ಠವಾದ ಕೃಪೆಯ ಮಾಡದೆ ಎನ್ನ
ಪ್ರತಿದಿನದಲ್ಲಿ ಬಿಡದೆ ಬಳಲಿಸಲು
ಭ್ರಾತೃನೆಂಬೋಕ್ತಿಗೆ ವ್ಯಾಹತಿ ಬಾರದೇನೊ ಧರ್ಮ ಪ-
ದ್ಧತಿಯು ತಪ್ಪದಂತೆ ನಡೆವ ಸುಜನ
ಪ್ರತಿತಿಗೆ[೧] ಪ್ರಿಯನಾದ ಗುರು ವಿಜಯ ವಿಠ್ಠಲನ್ನ
ಭಕ್ತರ ಶಿರೋಮಣಿ ದಯದ ಖಣಿ ೧

## ಮಟ್ಟತಾಳ

ಗುರು ನಿಷ್ಠವಾದ ಧರ್ಮವ ನಿನ್ನಲ್ಲೀ
ಪರಿನಿಷ್ಠೆಯ ನೋಡಿ ಸುರರೆಲ್ಲರು ನಿನ್ನ
ಗುರು ನೀನೆಂದು ಭಜಿಸಿ ಪರಿಚಾರಕರಾಗಿಹರು
ಪರಮ ಕರುಣಿ ನೀನು (ದ್ವಾ) ದ್ವರನಾಪೇಕ್ಷ
ಗುರುವೆನಿಸಿ ಎನಗೆ ಹಿತ ಮಾಡದಿರಲು
ಗುರುವೆಂಬೋಕ್ತಿಗೆ ಸಾರ್ಥಕವೆಂತಹುದೊ
ಪರಿಪೂರ್ಣ ಕೃಪನಿಧೆ ಗುರು ವಿಜಯ ವಿಠ್ಠಲನ್ನ
ಕರುಣ ಪಡೆವದೆಂತೊ ನೀ ಇನಿತು ನೋಡೆ ೨

---

೧. ಸಮೂಹ

**ತ್ರಿವಿಡಿತಾಳ**

ಪ್ರತ್ಯಕ್ಷವಾದ ಮೃತ್ಯು ಮನೆಯಿಂದ ಪಾಲಿಸಿದ
ಕೀರ್ತಿ ಆಧಿಕ್ಯವಲ್ಲ ಗುಣನಿಧಿಯೇ
ಮೃತ್ಯು ರೂಪವಾದ ಸಂಸಾರವೆಂತೆಂಬ
ಕತ್ತಲೆ ಮನೆಯಿಂದ ರಕ್ಷಿಸಲು
ಉತ್ತಮೋತ್ತಮವಾದ ಖ್ಯಾತಿ ನಿನಗೆವುಂಟು
ಸತ್ವ ಪ್ರಮಾಣ್ಯವಾದ ಜೀವೋತ್ತಮ
ಪ್ರತ್ಯಕ್ಷವಾದ ರಾತ್ರಿ ಚರನಿಂದ ವುಳಿಸಿದ್ದು
ಅತ್ಯಾಶ್ಚರ್ಯವಲ್ಲ ಅಸುರಾರಿಯೇ ಅ–
ನುತ್ತಮನಾದ ಕಲಿಯಿಂದ ಬಾಧಿತನಾಗಿ
ನಿತ್ಯ ಪ್ರವಾಹರೂಪವಾದ ದುಃಖ
ಹೊತ್ತು ಹೊತ್ತಿಗೆ ಉಂಟೆ ಅವ್ಯವಧಾನದಿಂದ
ಈ ತೆರವಾದ ಪ್ರಬಲ ದೋಷ ಎನ್ನಿಂದ
ದೈತ್ಯನಿಂದಲಿ ಎನ್ನ ರಕ್ಷಿಸುವುದು ಮಹ
ಅತ್ಯಧಿಕವಾದ ಕೀರ್ತಿ ನಿನಗೆ
ನಿತ್ಯ ತೃಪ್ತನಾಮ ಗುರು ವಿಜಯ ವಿಠ್ಠಲನಿಂದ
ಮಿತ್ರನ್ನ ಮಾಡುವದು ಖ್ಯಾತಿ ನಿನಗೆ ೩

**ಅಟ್ಟತಾಳ**

ತನಯನಿಂದಲಿ ಮೂರ್ಛಗೈದಿದ್ದ ಸಮಯದಿ
ಘನ ಮಹಿಮನೆ ನಿನ್ನ ಕರುಣದಿಂದಲಿ ಹರಿ
ಧೇನು ವತ್ಸ ನ್ಯಾಯದಿಂದ ಬಂದು ಎನ್ನ
ತನವು ತಕ್ಷಿಸಿದ್ದು ಕೀರ್ತಿಯಲ್ಲವೊ ದೇವ ಸು–
ಮನಸರಿಂದಲಿ ಬಂದ ವಾಕ್ಯಾನುಸಾರದಿ
ಮಿನಗುವ ಸುಜ್ಞಾನದಿಂದ ರಹಿತನಾಗಿ ಅ–
ಜ್ಞಾನವೆಂಬೊವ ಅಸ್ತ್ರದಿಂದ ಮೂರ್ಛಿತನಾಗಿ
ತನುವಿನ ಸ್ಮರಣೆಯ ಇಲ್ಲದಿದ್ದವನಾದೆ
ವಿನಯದಿಂದಲಿ ಈಗ ಬಂದು ರಕ್ಷಿಸಲು
ಎಣಿಕೆಯಿಲ್ಲದ ಕೀರ್ತಿ ಬರುವದೊ ಯಲೊ ದೇವ

ಮುನಿ ಮನಮಂದಿರ ಗುರು ವಿಜಯ ವಿಠ್ಠಲರೇಯ
ಅನುಗ್ರಹ ಮಾಡುವ ನಿನ್ನಿಂದಲಾವಾಗ ೪

**ಆದಿತಾಳ**

ವಿಜಯವನೀವೆನೆಂದು ಧ್ವಜದಲ್ಲಿ ನೀನಿಂದು
ಕುಜನರ ಹೃದಯವ ನಿರ್ಭಿನ್ನಗೈಸಿ ಅಂದು
ವಿಜಯವ ಪಾಲಿಸಿದ್ದು ಆಶ್ಚರ್ಯವಲ್ಲ ನಿನಗೆ
ರಜತ ಮೊಗಣದಿಂದ ಬಂಧಿಸಿಕೊಂಡು ಸತತ
ರಜನಿಯ ಚರ[1]ರಿಂದ ಆಚ್ಛಿನ್ನನಾದೆ ಬಲು
ಕುಜನ ಮಾರುತಿಯಿಂದ ಕರುಣವ ಮಾಡಿ ಹೃದಯ
ಧ್ವಜದಲ್ಲಿ ನಿಂದು ವೇಗ ವಿಜಯವಗೈಸುವದು
ಭಜಕರ ಪ್ರಿಯ ಗುರು ವಿಜಯ ವಿಠ್ಠಲರೇಯ
ವೃಜನಗಳೋಡಿಸುವ ನಿನ್ನಿಂದಲಾವಾಗ ೫

**ಜತೆ**

ಅಂದು ಮಾಡಿದ್ದೇನು ಆಶ್ಚರ್ಯವಲ್ಲ ನಿನಗೆ
ಇಂದು ಪಾಲಿಸು ಗುರು ವಿಜಯ ವಿಠ್ಠಲ ಪ್ರೀಯಾ ॥

## ೧೩೬

[ಶ್ರೀ ಪ್ರಾಣದೇವರ ಅನುಗ್ರಹವಿಲ್ಲದೆ ಶ್ರೀ ಹರಿಯು ಎಂದಿಗೂ ಒಲಿಯನೆಂಬ ಪ್ರಮೇಯ. ಪೂರ್ವಜನ್ಮದಲ್ಲಿ ವಾಲಿ ಹನುಮಂತನ ಅನುಗ್ರಹವಿಲ್ಲದ ಕಾರಣ ರಾಮನು ನಿಗ್ರಹಿಸಿದ. ಅರ್ಜುನನಾದಾಗ್ಗೆ ಭೀಮನು ಅಗ್ರಜನಾಗಿ ದಯ ಮಾಡಿದುದಕ್ಕೆ ಕೃಷ್ಣನು ಸಖನಾದ. ಮೂರನೆ ಜನ್ಮ ಜಯತೀರ್ಥರಾದಾಗ್ಗೆ ಜ್ಞಾನವಿತ್ತು ಕುಮತಗಳ ನಿರಾಕರಿಸಿದಿ ಪ್ರಾಣನ ಕೃಪೆಯಿಂದ ಎಲ್ಲ ಸೌಖ್ಯ ಗಂಟು. ಈಗಾದರು ಹಿಂದಿನಂತೆ ಪೊರೆಯೊ ಎಂದು ಪ್ರಾರ್ಥನೆ.]

---

೧. ರಾತ್ರಿ ಚರರು = ದೈತ್ಯರು

## ಧ್ರುವತಾಳ

ಹಿತಮಾಳ್ಪ ಜನಕನಾಗಿ ರಕ್ಷಸು ಎಂದೆಂಬೆನೆ
ಪಿತೃ ಸಮಾನ ಜೇಷ್ಟನೆಂದೆಂಬ ವಿಧದಿ
ಪಿತನೆ ಸರಿ ಎನಗೆ ಉಪಕಾರವ್ಯಾತಕಿನ್ನು
ಮಾತರಿಶ್ವನೆ ದೂರ ನೋಳ್ಪದೇನೊ
ಭ್ರಾತೃನಾಗಿ ಎನ್ನ ಪಾಲಿಸು ಎಂದೆಂಬೆನೆ
ನೋತ ಪುಣ್ಯಗಳಿಂದ ಹರಿಯು ತಾನೆ
ಸ್ವತ ಏವ ಮಾಡಿದ ಈಗ ನುಡಿವದೇನೊ
ಮಾತೃ ನೀನೆ ದೇಹ ಪೊರೆಯುವಲ್ಲಿ
ಅತುಳ ಗುರುವಾಗಿ ಬೋಧಿಸು ಎಂದೆಂಬೆನೆ
ಆತ್ಮ ಗುರುವಿಗೆ ನಿಜ ಗುರುವೆನಿಸಿದೆ ನಿತ್ಯ
ನೂತನವಾಗಿ ಯಿದನು ಬೇಡಿಕೊಂಬುವದೇನು
ವೀತಿ ಹೋತ್ರನೆ ದೈತ್ಯ ಸಂತತಿಗೆ
ಪ್ರತ್ಯಂತರ ಜನುಮದ್ವಯದಿ ನಿಜ ಮುಖದಿಂದಲೆ
ಮತಿಯು ನೀಡಿದ ಮುಖ್ಯ ಗುರು ನೀನೆ
ಪ್ರತಿಯಿಲ್ಲದೆ ಇದ್ದ ಇಷ್ಟನೇನೊ ಎನಗೆ
ಗತಿ ಪ್ರದಾತನು ನೀನೆ ಆವಕಾಲ
ಆಪ್ತನಾಗಿ ನೀನು ಸಲಹಬೇಕೆಂಬೆನೆ
ಗತ ಜನ್ಮಗಳಲಿ ನೀನು ಮಾಡಿದುಪ-
ಕೃತಿಗಳೆಣಿಸೆ ಈಗ ನಿನಗಿಂದಧಿಕವಾದ
ಆಪ್ತನಾವನು ಎನಗೆ ಅರಸಿ ನೋಡಾ
ಮತಿಯು ರಹಿತವಾದ ಜನುಮಗಳು ಬರಲಿ
ಅತಿ ಹಿತ ನೀನೆ ಎನಗೆ ಇಹ ಪರದಿ
ಅತಿಶಯ ಕೃಪಾನಿಧೆ ಗುರು ವಿಜಯ ವಿಠ್ಠಲರೇಯ
ಅತಿ ಪ್ರೀಯನಾಗುವನು ನಿನ್ನ ದಯದಿ ೧

## ಮಟ್ಟತಾಳ

ಬಾಂಧವನು ನೀನೆ ಎರಡು ಬಗೆಯಿಂದ

ತಂದೆ ನಿನ್ನುಪಕಾರ ಅನಂತ ಜನುಮದಲಿ
ಮಂದನಾದವ ನನು ತೀರಿಸಬಲ್ಲೆನೆ
ಬಂಧು ಅನಿಮಿತ್ಯ ಗುರು ವಿಜಯ ವಿಠ್ಠಲ ನಿ-
ನ್ನಿಂದಲಿ ಎನಗೆ ಅನುಗ್ರಹ ಮಾಡುವನೊ ೧

## ತ್ರಿವಿಡಿತಾಳ

ನಿನ್ನ ಕರುಣಪೇಕ್ಷ ಮಾಡದಲೆ ಒಂದು
ಜನುಮ ಹರಿ ಕರುಣವಿಲ್ಲದಲೆ ಕಳದೇ
ಅನಂತರದಿ ಎನ್ನ ಪುಣ್ಯ ಸಾಸಿರದಿಂದ
ಅನುಜನಾದೆ ನಿನ್ನ ಕೃಪೆಯಿಂದಲಿ
ಮನುಜ ಕೃತಿಯಾದರು ಪ್ರತಿಮದಲ್ಲಿ
ಘನ್ನ ಚೇಷ್ಟಾದಿಗಳು ತೋರಿದಂತೆ
ಎನ್ನ ನಾಮಕನಾಗಿ ಎನ್ನ ರೂಪದಿಂದ
ಎನ್ನ ಕೃತ್ಯಗಳೆಲ್ಲ ನೀನೆ ಮಾಡಿ
ಉನ್ನತವಾದ ಕೀರ್ತಿ ತಂದು ಇತ್ತು ಎನ್ನ
ಜನ್ನರ ಮಧ್ಯದಲಿ ಶ್ರೇಷ್ಠನೆನಿಸಿ
ಪನ್ನಗ ತಲ್ಪನ್ನ ಕರವಶನೆನನಿಸಿದಿ
ನಿನ್ನ ಕರುಣಕೆ ಎಣೆ ಆವದಯ್ಯಾ
ಎನ್ನ ಸ್ವಭಾವದಿಂದ ಹರಿ ತಾನು ಇನಿತಾದ
ಮನ್ನಣೆ ಮಾಡುವನೆ ಎಂದಿಗನ್ನ
ನಿನ್ನುಪಕಾರವೆಂಬ ವನ್ನಧಿಯೊಳಗೆ ನಿರುತ
ಮುಣಗಿ ಇಪ್ಪೆನಯ್ಯಾ ತೆರವಿಲ್ಲದೆ
ಚನ್ನ ಪ್ರಸನ್ನ ಗುರು ವಿಜಯ ವಿಠ್ಠಲರೇಯ
ನಿನ್ನಿಂದಲೆ ಎನಗೆ ಬಂಧುನಾದಾ ೨

## ಅಟ್ಟತಾಳ

ಸೈರಿಸದೆ ಅಪಕೃತಿ ಮಾಡಲಾಕ್ಷಣ
ಪರಮ ಕರುಣದಿಂದ ಪೊರೆದು ತತ್ವವನರುಹಿ
ಮರಳೆ ಜನ್ಮದಲಿ ಮೂಢ್ಯನಾದವನಿಗೆ

ಸರಿಗಾಣದೆ ಇದ್ದು ವಿಮಲ ಜ್ಞಾನವನಿತ್ತು
ಹರಿಯೇ ಸರ್ವೋತ್ತಮನೆಂತೆಂಬೊ ಪ್ರಕಟದಿ
ಧರೆಯೊಳಗೆ ಬೀರಿ ಕುಜನ ಮತದ ಬೀಜ
ಹುರಿಸಿದಿ ನಿನ್ನಯ ಕರುಣಕ್ಕೆ ಎಣೆಯುಂಟೆ
ಸರಿಯಿಲ್ಲ ಸರಿಯಿಲ್ಲ ನಿನ್ನುಪಕಾರಕ್ಕೆ
ದುರುಳ ಮತಗಳೆಂಬೊ ಮಾಯಿ ಗೋಮಾಯಿಗಳು
ಶಿರವೆತ್ತಿ ನೋಡದೆ ಪಲಾಯದ್ವರಾದರು ಈ
ತೆರವಾದ ಮಹತ್ಮಿ ನಿನ್ನದು ನಿನ್ನದು
ಮರಳೆ ಮಾತುಗಳನ್ನು ತೋರದಿದ್ದರನಿಗೆ (ರೆನಗೆ)
ಕರುಣವಲ್ಲದೆ ಅನ್ಯಾಲೋಚನೆ ಇದಕ್ಕಿಲ್ಲ
ಸುರಲೋಲ ಮಹಧೃತಿ ಗುರು ವಿಜಯ ವಿಠ್ಠಲರೇಯ
ಪೊರೆವನು ನಿನ್ನಯ ಬಲದಿಂದಲಾವಾಗ ೬

**ಆದಿತಾಳ**

ನಿನ್ನ ಕೃಪೆಯಿಂದ ಜ್ಞಾನವಂತರಾಹರೆಲ್ಲ
ನಿನ್ನ ಕೃಪೆಯಿಂದ ಬಲವೀರ್ಯರಾಹರೈಯ್ಯಾ
ನಿನ್ನ ಕೃಪೆಯಿಂದ ಐಶ್ವರ್ಯವಂತರೆಲ್ಲ
ನಿನ್ನಯ ಕೃಪೆಯಿಂದ ಹರಿ ತಾನು ಒಲಿವನು
ನಿನ್ನಯ ಕೃಪೆಯಿಂದ ಪರಲೋಕವಾಗುವದು
ನಿನ್ನಯ ಕೃಪೆಯಿಂದ ಅನಾದಿ ಲಿಂಗ ದೇಹ
ಛಿನತ್ವ ಐದುವದು ಸಂಶಯ ಇದಕ್ಕಿಲ್ಲ
ಚಿನ್ಮಯ ಮೂರ್ತಿ ಗುರು ವಿಜಯ ವಿಠ್ಠಲರೇಯ
ನಿನ್ನಿಂದ ಮಾಡಿಸುವ ವಸುಧಿಯ ವ್ಯಾಪಾರ ೫

**ಜತೆ**

ನಿನ್ನ ಕರುಣದಿಂದ ನಿಖಿಳ ಸೌಖ್ಯವೆ ಉಂಟು
ಉನ್ನತ ಮಹಿಮ ಗುರು ವಿಜಯ ವಿಠ್ಠಲ ಒಲಿವ ॥

[ನಳ ನಾಮ ಸಂ॥ ಚೈತ್ರ ಬ॥ ೧೨ ಆದಿತ್ಯವಾರ]

## ೧೩೭

[ಶ್ರೀ ವಾಯುದೇವರ ಅನುಗ್ರಹವೆ ಮುಖ್ಯವಾದದ್ದೆಂಬ ಪ್ರಮೇಯ. ಹಿಂದಿನ ಜನುಮದಿ ವಾಯುದೇವರವತಾರ ಭೀಮಸೇನನಾದ ಅಣ್ಣನ ಕೃಪೆ ಈಗ ತಪ್ಪಿದ ಕಾರಣ ಈ ಅಜ್ಞಾನ ವಾದ ಅಂಧಕಾರದಲ್ಲಿ ಬಿದ್ದೆ. ಹಿಂದಿನ ವಿಭವವೆಲ್ಲ ತೀರಿ ನಿನ್ನ ಕಾಣದಾದೆ. ಎನ್ನ ಹಮ್ಮಿನಿಂದಲಿ ಹಿಂದೆ ಸುರರು ಶಾಪವಿತ್ತರು. ನಮ್ಮಣ್ಣ ಭೀಮನ ಬಲದಿಂದ, ಆಗ್ಗೆ ಏನು ಮಾಡದೆ, ಈ ಕಾಲ, ನಿರೀಕ್ಷಿಸಿ ಈ ಬಾಧೆ ಬಡಿಸುವರು ದೂರ ಮಾಡು ಇತ್ಯಾದಿ.]

### ಧ್ರುವತಾಳ

ಎನ್ನಣ್ಣನ ಕೃಪೆ ಇನ್ನು ಎನಗಿಲ್ಲದುದರಿಂದ
ಎನ್ನ ಮೇಲೆ ಈ ಪರಿ ಮುನದ್ಯಾ ದೇವಾ
ಎನ್ನಣ್ಣನ ಕೃಪೆ ಇನ್ನು ತೊಲಗಿದುದರಿಂದ
ಘನ್ನವಾದ ಸ್ಥಾನದಿಂದ ಇಳಿದೇ
ಎನ್ನಣ್ಣನ ಕೃಪೆ ಇನ್ನು ಹಿಂಗದ ಕಡೆಯಿಂದ
ಭಿನ್ನವಾದ ಜ್ಞಾನಿ ಆದೆನೆಂದು
ಎನ್ನಣ್ಣನ ಕೃಪೆ ಇನ್ನು ಜರಿದು ಪೋದದರಿಂದ ಅ-
ಭಿನ್ನ ಭಕುತಿಯಿಂದ ಹೀನನಾದೆ
ಎನ್ನಣ್ಣನ ಕೃಪೆ ಇನ್ನು ತಪ್ಪಿದುದರಿಂದ
ನಿನ್ನ ನಿಗ್ರಹ[1]ಕೆ ವಿಷಯನಾದೆ
ಎನ್ನಣ್ಣನ ಕೃಪೆ ಇನ್ನು ಇಲ್ಲದ ಕಾರಣದಿ
ಎನ್ನ ಈ ಪರಿ ನೀನು ಬಳಲಿಸುವಿ
ಎನ್ನಣ್ಣನ ಕೃಪೆಯಿಂದ ಗುರು ವಿಜಯ ವಿಠ್ಠಲರೇಯಾ
ಮನ್ನಿಸುವಿ ಎನ್ನ ಆವಕಾಲ ೧

### ಮಟ್ಟತಾಳ

ಅಣ್ಣನ ಕೃಪೆಯಿಂದ ವಿಜಯವುಳ್ಳವನಾಗಿ

---

೧. ಸ್ವೀಕಾರ ಮಾಡದಿರುವಿಕೆ, ಭರ್ತ್ಸನಕ್ಕೆ

ಜನರೊಳಗೆ ಶ್ರೇಷ್ಠನೆಂದೆನಿಸಿ ಮೆರದೆ
ಅಣ್ಣನ ಕೃಪೆಯಿಂದ ಬಲು ವಿಧವಾದಂಥ
ಮು(ಘ)ನ್ನ ಭಾಗ್ಯೋದಯವಾಯಿತು ಬಲು ಪರಿ
ಅಣ್ಣನ ಕೃಪೆಯಿಂದ ಜ್ಞಾನ ಬಲವು ಎನಗೆ
ಅಣ್ಣನ ಕೃಪೆಯಿಂದ ಶ್ರುತಿ ತತಿಗಗೋಚರ
ಅನಂತ ಮಹಿಮನ್ನ ಆಪ್ತನೆನೆಸಿಕೊಂಡೆ
ಅಣ್ಣನ ಕೃಪೆಯನ್ನು ಜರಿದ ಕಾರಣದಿಂದ
ಎನ್ನನ್ನೀ ಪರಿ ಮಾಡಿ ಬಳಲಿಸುವೆ ಧೊರಿಯೆ
ಘನ್ನ ದಯಾನಿಧೆ ಗುರು ವಿಜಯ ವಿಠ್ಠಲರೇಯ ನ–
ಮ್ಮಣ್ಣನ ಬಲವನ್ನು (ವೆ) ಎನಗೆ ಮುಖ್ಯ ಸತತ ೨

**ತ್ರಿವಿಡಿತಾಳ**

ನಮ್ಮಣ್ಣನ ಬಲವೆಂಬೊ ಘನ್ನ ಛತ್ರದ ನೆರಳು
ಮನ್ಮಸ್ತಕದಲಿ ಮೆರೆವ ಸಮಯದಲ್ಲಿ
ಆ ಮಹಾ ಶ್ರುತಿಗಳಿಗೆ ಸಿಲುಕದ ಪರಬ್ರಹ್ಮ
ಸಮ್ಮುಖವಗಲದೆ ಇಪ್ಪನಾಗಿ
ಈ ಮಹಿಯೊಳಗಾವದಯ್ಯ ಕೊರತೆ ಎನಗೆ
ಸನ್ಮಂಗಳಾಂಗನ ಶಾಸನದಿ
ಸುಮ್ಮನಸರು ಅಂದು ನಿರ್ನಿಮಿತ್ಯದಿ ಎನಗೆ
ಹಮ್ಮಿನಿಂದಲಿ ಶಾಪವಿತ್ತರಾಗೆ
ನಮ್ಮಣ್ಣನ ಬಲವೆಂಬೊ ಸುಪ್ರಭಾವಕ್ಕೆ ಅದು
ಸಮ್ಮೊಗವಾಗದೆ ನಿರೀಕ್ಷಿಸೆ
ರಮ್ಮೆಯ ಪತಿ ನೀ ಎಮ್ಮಣ್ಣನ ಮೇಲೆ
ನಮ್ಮಣ್ಣನ ಕೃಪೆಯು ದೂರವಾಗೆ
ದುರ್ಮ್ಮನಾಗ್ರಣಿಯಾದ ಕಲಿ ತಾನು ಅತಿ ಮದದಿ
ಜನ್ಮ ಜನ್ಮದ ದ್ವೇಷ ಮನದಿ ನಿಲಿಸಿ
ಸಮ್ಮ ರಹಿತವಾದ ದುಃಖಗಳುಣಿಸಿದ
ನಮ್ಮಣ್ಣನ ಬಲವನ್ನು ಇಲ್ಲದಾಗೆ

ನಿಮ್ನ ಮಹಿಮ ಗುರು ವಿಜಯ ವಿಠ್ಠಲರೇಯಾ
ವಿಮನಸ್ಕನಾದ ಇವನ ಕರುಣ ತೊಲಗೆ ೩

**ಅಟ್ಟತಾಳ**

ನಮ್ಮಣ್ಣನ ಬಲವನ್ನು ಇಲ್ಲದ್ದರಿಂದ
ಜನ್ಮ ಜನ್ಮದೆ ಯೋನಿಯೈದಿ ಅಜ್ಞಾನದಿ
ರಮ್ಮೆಯ ಪತಿ ಪಾದ ಸ್ವಪ್ನದಿ ನೆನೆಯದೆ
ಉನ್ಮತ್ತನಾಗಿ ಇಂದ್ರಿಯ ವಿಷಯದ
ನಿಮ್ನದೊಳಗಾದೆ ವೃಧೃತ್ಯ (ಉಧೃತ)ವಿಲ್ಲದೆ
ಸಮ್ಮಚರಿತ ಗುರು ವಿಜಯ ವಿಠ್ಠಲರೇಯಾ
ಒಮ್ಮೆಗಾದರು ಮುಖವೆತ್ತಿ ನೋಡದಾದ ೪

**ಆದಿತಾಳ**

ನಮ್ಮಣ್ಣನ ಬಲವನ್ನು ಇಲ್ಲದ ಕಾರಣದಿ
ಕಣ್ಣೆತ್ತಿ ನೋಡರಯ್ಯಾ ಸುರರೆಲ್ಲ ಎನ್ನ ಕಡೆ
ಖಮ್ಮಹಿಯೊಳಗೆಲ್ಲ ದುರ್ಮತಿ ನಾನಾಗಿ ಉ–
ಪಮ್ಮ ರಹಿತವಾದ ಜನ್ಮವೈದಿದೆ ಬಲು
ಚಿನ್ಮಯ ಮೂರ್ತಿ ಗುರು ವಿಜಯ ವಿಠ್ಠಲರೇಯ
ಎಮ್ಮನು ಪೊರೆವನು ಅಣ್ಣನ ಬಲದಿಂದ ।೫

**ಜತೆ**

ಅಣ್ಣನ ವೆಲವೆನಗೆ ಬಲು ಶೋಭಾ ಬಲು ಶೋಭಾ
ಘನ್ನ ಮಹಿಮ ಒಲಿವ ಗುರು ವಿಜಯ ವಿಠ್ಠಲರೇಯ ॥

[ಪಿಂಗಳನಾಮ ಸಂ॥ ಚೈತ್ರ ಬಹುಳ ೩ ಆದಿವಾರ]

## ೧೩೮

## ಶ್ರೀ ರಾಘವೇಂದ್ರ ಯತಿಗಳ ಸ್ತೋತ್ರ ಸುಳಾದಿ

[ಅವರರಾದರೂ (ಅವತಾರಾದಿಗಳಲ್ಲಿ ಜ್ಞಾನಿಗಳೇ ಶ್ರೇಷ್ಠರೆಂಬ ಪ್ರಮೇಯ) ಶ್ರೀ ರಾಘವೇಂದ್ರರು ಸಕಲ ಮುನಿಗಳಿಂದ ಸ್ವಪ್ನದಲ್ಲಿ ಬಂದು ದರ್ಶನವಿತ್ತು ಅನುಗ್ರಹಿಸಿದ್ದು. ಹೇ ಮಧ್ವ ಮತೋದ್ಧಾರಕ ಗ್ರಂಥಕರ್ತರೇ, ಜ್ಞಾನಿಗಳೇ ಈ ತುಂಗಾನದಿ ತೀರದಿ ನಿಂದು ಹರಿವಾಯುಗಳ ಅನುಗ್ರಹದಿ ಸಜ್ಜನರನ್ನು ಸಲಹುವಿ, ಇತ್ಯಾದಿ ಸ್ತೋತ್ರ. ನೀನು ಸೂಚಿಸಿ ದಂತೆ ಎನ್ನನುದ್ಧರಿಸು, ನೀನು ಸುಜ್ಞಾನಿಯು, ಅಶುಚಿಯಾಗಿ ನೀಚ ದೇಹತೆತ್ತವ ನಾನು. ಹರಿ ವಾಯುಗಳು ನಿಮ್ಮ ದ್ವಾರಾ ಬಂಧ ವಿಮೋಚಕರು. ಕಾರಣ ಹಿಂದೆ ಸುರರಿತ್ತ ಶಾಪವನ್ನು ಪರಿಹರಿಸಿ ಹೃದಯದಲ್ಲಿ ಹರಿ ಪೊಳೆವಂತೆ ಮಾಡೆಂದು ಪ್ರಾರ್ಥನಾ.]

### ಧ್ರುವತಾಳ

ಘನ ದಯಾನಿಧಿಯಾದ ಗುರು ರಾಘವೇಂದ್ರ ನಿಮ್ಮ
ವನಜ ಪಾದಯುಗಕೆ ನಮೊ ನಮೊ
ಜನುಮಾರಭ್ಯವಾಗಿ ಅಭಿನಮಿಸದಲಿಪ್ಪ
ಮನುಜನ ಅಪರಾಧವೆಣಿಸದಲೆ
ವನಧಿ ಪೋಲುವ ಕರುಣಿ ಗೋವತ್ಸ ನ್ಯಾಯದಿಂದ
ನಿನಗೆ ನೀನೆ ಬಂದು ಸ್ವಪ್ನದಲ್ಲಿ
ಸನಕಾದಿ ಮುನಿಗಳ ಮನನಕ್ಕೆ ನಿಲುಕದ
ಇನಕೋಟಿ ಭಾಸ ವೇದೇಶ ಪ್ರಮೋದ ತೀರ್ಥ
ಮುನಿಗಳಿಂದಲಿ ಕೂಡಿ ಸಂದರುಶನವಿತ್ತು
ವಿನಯೋಕ್ತಿಗಳ ನುಡಿದ ಕೃತ್ಯದಿಂದ
ಆನಂದವಾಯಿತು ಅಘದೂರನಾದೆನಿಂದು
ದನುಜಾರಿ ಭಕತರ ಮಣಿಯೇ ಗುಣಿಯೇ
ಎಣೆಗಾಣೆ ನಿಮ್ಮ ಕರುಣಾ ಕಟಾಕ್ಷ ವೀಕ್ಷಣಕ್ಕೆ
ಅನುಪಮ ಮಹಿಮನೆ ಅನಿಳ ಪ್ರೀಯಾ

ಗುಣ ಗಣ ಪರಿಪೂರ್ಣ ಗುರು ವಿಜಯ ವಿಠ್ಠಲ ನಿಮ್ಮ
ಘನವಾದ ಬಲದಿ ಎನಗೆ ಸುಳಿದನೆಂದು ೧

## ಮಟ್ಟತಾಳ

ಸುಖತೀರ್ಥರ ಮತವೆಂದೆಂಬ ಧ್ವಜವನ್ನು
ವಿಖನಸಾಂಡದ[1] ಮಧ್ಯ ಪ್ರತಿಯಿಲ್ಲದೆ ಮೆರೆಯೆ
ಪಖರಹಿತವಾದ ಪಕ್ಷಿಯು ತನ್ನಯ
ಪಖ ಚಿನ್ಹಿಷ್ಯ (ಯ) ಜನಿತ ಮಾರುತನಿಂದಲಿ ಧ್ವಜವ
ಪ್ರಕಟದಿ ಚರಿಸುವ ಯತ್ನದಂದದಿ ದುರುಳ
ಸಕುಟಿಲರಾದಿ ಆ ವಿದ್ಯಾರಣ್ಯ
ಮುಖ ಮಖರೆಲ್ಲ ಬರಲು ಅಮ(ವ)ಸ್ಥಿತ[2] ನಿಶ್ಚಯದಿ
(ಮುಖ್ಯ ಜನರು ಬರಲು)
ಮಖಶತಜನೆನೆಪ ಜಯರಾಯಾಚಾರ್ಯ
ಪ್ರಕಟ ಗ್ರಂಥಗಳೆಂಬ ಪಾಶಗಳಿಂದಲ್ಲಿ
ಯುಕುತಿಯಿಂದಲಿ ಬಿಗಿದು ವೀರಧ್ವನಿಯ ಗೈಯೆ
ಉಕುತಿಗೆ ನಿಲ್ಲದಲೆ ಮೊಲದಂತೆ ಜರಿದು
ದಿಕ್ಕು ದಿಕ್ಕಿನಲ್ಲಿ ಪಲಾಯನರಾಗೆ
ತ್ಯಕತ ಲಜ್ಜೆಯಲಿಂದ ಹತವಾಶೇಷ್ಯ
ಸಾಕುಂಠಿತವಾದ ಬಲವೀರ್ಯನು ಮೇರು
ಶಿಖರವೆತ್ತುವನೆಂಬೊ ಸಹಸದಂದದಲಿ
ವಿಕಟ ಮತಿಯುಕ್ತ ದುರುಳರು ರೋಷದಲಿ ಕು–
ಯುಕುತಿಗಳಿಂದಲಿ ಸಂಚರಿಸುತ ಬರಲು
ಲಕುಮಿಪತಿಯ ನೇಮ ತಿಳಿದ ಪ್ರೌಢ ನೀನು
ಈ ಖಂಡದಿ ಬಂದು ದ್ವಿಜನ್ಮವ ಧರಿಸಿ
ಪ್ರಖ್ಯಾತವಾದ ನ್ಯಾಯಾಮೃತವನ್ನು
ತರ್ಕ ತಾಂಡವ ಚಂದ್ರಿಕ ಪರಿಮಳ ಮೊದಲಾದ

---

೧. ಬ್ರಹ್ಮಾಂಡ

೨. ಅಮಸ್ಥಿತ = ವಿಘ್ನ ಬಂದರೂ ಶಿಥಿಲವಾಗದೇ ಇದ್ದ ದೃಢವಾದ ನಿಶ್ಚಯ.

ಮಿಕ್ಕಾದ ಗ್ರಂಥವೆಂತೆಂಬ ವಜ್ರದಲಿ ದು–
ರುಕುತಿಗಳೆಂಬಂಥ ಗಿರಿಗಳ ಛೇದಿಸಿ
ಈ ಕುಂಭಿಣಿ ಮಧ್ಯ ಪ್ರತಿಯಿಲ್ಲದೆ ಮೆರದೆ
ಭಕುತರಾಗ್ರೇಸರನೆ ಭೂ ವಿಬುಧರ ಪ್ರೀಯಾ
ನಖ ಶಿಖ ಪರಿಪೂರ್ಣ ಗುರು ವಿಜಯ ವಿಠ್ಠಲ ನಿಮ್ಮ
ಭಕುತಿಗೆ ವಶನಾಗಿ ಇತ್ತಿಹ ಕೀರ್ತಿಯನು ೨

## ತ್ರಿವಿಡಿತಾಳ

ಕಲಿಯುಗದಿ ಜನರು ಕಲ್ಮಷದಲಿಂದ
ಬಲವಂತವಾದ ತ್ರಿವಿಧ ತಾಪಗಳನು
ವಿಲಯ[1]ಗೈಸುವ ಉಪಾಯವನರಿಯದೆ
ಮಲಯುಕ್ತವಾದ ಭವ ಶರಧಿಯಲ್ಲಿ
ನೆಲೆಯಾಗಿ ಮಗ್ನರಾಗಿ ನಿವೃತ್ತಿ ವರ್ತ್ಮಾ[2]ವನ್ನು
ತಿಳಿಯದಲೆ ದುಃಖ ಬಡುವ ಸುಜನ
ಒಳಗೆ ತಾರಕನಾಗಿ ಈ ನದಿಯ ತೀರದಲ್ಲಿ
ನಿಲಯವಲ್ಲದೆ ನಿನಗೆ ಅನ್ಯ ಕೃತ್ಯಗಳಿಲ್ಲ
ನಳಿನ ಸಂಭವ ಜನಕ ಗುರು ವಿಜಯ ವಿಠ್ಠಲ ನಿನಗೆ
ಒಲಿದಿಪ್ಪಾಧಿಕಧಿಕವಾಗಿ ಬಿಡದೆ ೩

## ಅಟ್ಟತಾಳ

ಸೂಚನೆ ಮಾಡಿದ ಸೊಬಗಿನ ತೆರದಂತೆ
ಯೋಚನೆ ಯಾತಕ್ಕೆನ್ನನು ಉದ್ಧರಿಪದಕ್ಕೆ
ಊಚ ಜ್ಞಾನಾನಂದ ಬಲವೀರ್ಯನು ನೀನು
ನೀಚವಾದ ದೇಹ ಧಾರಣವನು ಮಾಡಿ ಅ–
ನೂಚಿತವಾಗಿದ್ದ ಕಾಮ ಕ್ರೋಧಂಗಳು
ಆಚರಣೆಯ ಮಾಳ್ಪ ಅಧಮನಾದವ ನಾನು

---

೧. ನಾಶ ೨. ಕಡೆ ಹಾಯುವ, ಬಿಡುಗಡೆಯ ಮಾರ್ಗವನ್ನು, ವರ್ತ್ಮಾ = ಮಾರ್ಗ

ಸೂಚರಿತ್ರವಾದ ಶುಚಿಯಾದ ಮನುಜಂಗೆ
ನೀಚ ಅಶುಚಿಯಾದ ನರನು ಅಧಿಕನೆಂದು
ಭೂ ಚಕ್ರದಲಿ ಅವರ ದೇಹ ತೆತ್ತವನಾಗಿ
ಆಚರಿಸಿದೆ ಬಲು ಹೀನ ಕೃತ್ಯಂಗಳು
ಸೂಚನೆ ಮಾಡಿದ್ದು ಸೊಬಗು ನೋಡದಲೆ
ಯೋಚನೆ ಮಾಡಿದ್ದು ಸಾರ್ಥಕ ಮಾಳ್ಪದು
ಮೋಚನೆ ಮಾಡುವದು ಭವ ಬಂಧದಲಿಂದ
ಶ್ರೀ ಚಕ್ರಪಾಣಿ ಗುರು ವಿಜಯ ವಿಠ್ಠಲರೇಯನ
ಯೋಚನೆ ಮಾಡುವ ಯೋಗವೆ ಬೋಧಿಸು ೪

## ಆದಿತಾಳ

ಪರಿಶುದ್ಧವಾದ ನಿನ್ನ ಭಕುತಿಗೆ ವಶನಾಗಿ
ಹರಿ ತನ್ನ ಪರಿವಾರ ಸಮೇತನಾಗಿ ನಿಂದು
ಮೊರೆ ಹೊಕ್ಕ ಜನರಿಗೆ ಪರಿಪೂರ್ಣ ಸುಖವಿತ್ತು
ಪರಿ ಪರಿ [illegible]
ಪರಮಾಪ್ತನಾಗಿ ತವಪಾದ ಸಾರಿದೆನು
ದೂರ ನೋಡದಲೆ ಕರುಣ ಮಾಡಿ ವೇಗ
ಸುರರಿತ್ತ ಶಾಪದಿಂದ ಕಡಿಗೆ ಮಾಡಿ ಎನ್ನ ಹೃ-
ತ್ಸರಸಿಜದಲ್ಲಿ ಹರಿ ಪೊಳೆವಂತೆ ಮಾಡುವದು
ಪರಿಪೂರ್ಣ ಕೃಪಾನಿಧೆ ಗುರು ವಿಜಯ ವಿಠ್ಠಲನ್ನ
ಶರಣರ ಅಭಿಮಾನಿ ಔದಾರ್ಯ ಗುಣಮಣಿ ೫

## ಜತೆ

ಗುರುಕುಲ ತಿಲಕನೆ ಗುರು ರಾಘವೇಂದ್ರಾಖ್ಯ
ಸುರ ಕಲ್ಪತರು ಗುರು ವಿಜಯ ವಿಠ್ಠಲ ಪ್ರೀಯಾ ॥

# ಕಲಿ ನಿಗ್ರಹ ಸುಳಾದಿ

## ೧೩೯

**ಧ್ರುವತಾಳ**

ಎಲೆ ಎಲೆ ಪರಮ ದುಷ್ಟನಾದ ಕಲಿಯೆ ನಿನ್ನ
ತಲೆಯ ಮೇಲೆ ಕಾಲು ಇಟ್ಟು ನಡಿವೆ ಸತತ
ಬಲಹೀನನೆಂದು ತಿಳಿದು ನೈಜ ಸ್ವಭಾವದಿಂದ
ಕುಲಗೇಡಿ ಚೇಷ್ಟೆಗಳ ಪ್ರೇರಿಸುವಿ
ಮಲಿನಯುಕ್ತನೆ ನಿನ್ನ ಕರ್ತೃತ್ವ ಎನ್ನ ಮೇಲೆ
ನೆಲೆಯಾಗಿ ನಿಂದಿರದು ಎಂದೆಂದಿಗೆ
ತಿಳಿದು ನೋಡಿಕೋ ಉಭಯ ಅಂಶಾಂಶ[1]ದಲ್ಲಾಗೆ
ತಲಿಯ ಬಾಗಿದವನೆ ದುರುಳ ನಿನಗೆ
ಬಲವೀರ್ಯನಾದ ಎನ್ನ ಒಡಿಯನ್ನ ಬಲದಿಂದ
ಚಲಿಸದಲೇ ನಿನ್ನ ತೃಣಕೆ ಬಗೆದು
ಕೆಲವು ಶಸ್ತ್ರದಿಂದ ಕೆಲವು ವಾಕ್ಯದಿಂದ
ತಲೆ ಎತ್ತದಂತೆ ಮಾಡಿದ್ದದನು ಮರದೇ
ಮೊಲದಂತೆ ಜರಿದು ಈಗ ಮದೋನ್ಮತ್ತವಾದ
ಬಲದಿಂದ ನಿನ್ನ ಯುಗವೆಂದು ತಿಳಿದು
ಮಲತ ಗರ್ವದಿಂದ ಮಾಯಾ ಮಾಡುವಿ ಸುಜನ
ಕುಲದೂಷಕನೆ ಬಲು ಕುಜನ ಶಿರೋಮಣಿಯೆ
ಬಲಿಗೆ ಬಲಿಯಾದ ಗುರು ವಿಜಯ ವಿಠ್ಠಲರೇಯನ
ಬಲ ಎನಗಿರಲಾಗಿ ಎದುರೇ ನೀನು ೧

**ಮಟ್ಟತಾಳ**

ಬಲವುಳ್ಳವನೆಂದು ಬಲು ಗರ್ವದಲಿಂದ

---

೧. ಇಂದ್ರ ಅರ್ಜುನನಾದಾಗ್ಗೆ ಮತ್ತು ಜಯತೀರ್ಥರಾದಾಗ್ಗೆ ಇಂದ್ರದೇವರು ತತ್ವಾಭಿಮಾನಿಗಳು. ಇವರಿಗೆ ಮೂಲದಲ್ಲಿ ಕಲ್ಯಾವೇಶವಿಲ್ಲ.

ಬಳಲುವದು ಸಲ್ಲಾ ಲಜ್ಜೆಯನು ತೊರೆದು
ಬಲಯುಕ್ತ ನೀನಾಗೆ ಅಂದಿನ ಕಾಲದಲ್ಲಿ
ಮಲತ ಮಲ್ಲರ ಗಂಡ[೧]ನೆನಿಪರ ಕೈಯಿಂದ
ತಲಿಯ ತುಳಿಸಿಕೊಂಡಿ ಚರಣ ತಳದಿಂದ
ಹಳಿ ಹಳಿ ನಿನ್ನ ಪೌರುಷತನ ಸುಡಲಿ
ಭಳಿರೆ ಭಳಿರೆ ಗುರು ವಿಜಯ ವಿಠ್ಠಲರೇಯನ
ಒಲಿಮೆಯುಳ್ಳವರೆಲ್ಲ ನಿನಗಂಜುವರೇನೊ ೨

## ತ್ರಿವಿಡಿತಾಳ

ಬಲಹೀನ ಮನುಜನೆ ನಿನ್ನ ಕುಹಕ ನಡತಿ ದು-
ರ್ಬಲವಾದವರ ಮೇಲೆ ನಡೆಯು (ವೊ) ವದಲ್ಲದೆ
ಬಲವುಳ್ಳ ಜನರಲ್ಲಿ ನಡೆವೊದಲ್ಲವೆ ಕೇಳೊ
ತಿಳಿದು ನೋಡಿಕೋ ಎನ್ನ ಬಲದ ಮಹಿಮೆ
ಜಲಜ ಜಾಂಡವನ್ನು ಕಲ್ಪಿಸಿ ಸ್ಥಿ-
ತಿ ಲಯ ನೆಲೆಯಾದ ನಿಯಮನ ಜ್ಞಾನ ಜ್ಞಾನ
ಬಲವದ್ರೂಪವಾದ ಬಂಧ ಮೋಕ್ಷದಿ ಅಷ್ಟ ಪ್ರ-
ಬಲ ಕರ್ತುತ್ವದಿಂದ ದಿವಿಜ ದನುಜಾ
ವಳಿಗೆ ಶಿಕ್ಷಿಸುವಂಥ ದುಷ್ಟ ಮರ್ದಕನೆನಿಪ
ಜಲಧರಾ ವರ್ಣ ಕೃಷ್ಣರಾಯ ಎನ್ನ
ಕುಲದೈವವೆನಿಪ ಮತ್ತೆ ಸಖನೆಂದೆನಿಸಿಕೊಂಬ ನಿನ್ನ
ತಲಿಯನೊರಸಿದ ಧೀರ ಭ್ರಾತೃನೆನಿಪ
ಕುಲಗೇಡಿ ನಿನ್ನಂಥ ಕುಹಕರ ಶಿಕ್ಷಿಸುವ
ಬಲಿಯಾದ ದೇವ ಪೂರ್ವೋಕ್ತದಂತೆ
ಬಲವು ಇನಿತು ಇರಲು ನಿನಗಂಜುವದೆಂತೊ
ಸುಳಿಯದಿರುಯಿತ್ತ ಸೌಖ್ಯವಿಲ್ಲಾ
ಅಲವ ಬೋಧರ ಪ್ರಿಯ ಗುರು ವಿಜಯ ವಿಠ್ಠಲರೇಯ
ತಲಿಯ ಮೇಲಿಪ್ಪ ಛತ್ರದಂತೆ ಕಾಯ್ವಾ ೩

---

೧. ಎದುರಿಲ್ಲದ ಬಲಿಷ್ಠರಾದ ಜಟ್ಟಿಗಳ ಗಂಡ ಭೀಮಸೇನ

**ಅಟ್ಟತಾಳ**

ಬಲವೈರಿ ಎನ್ನಯ ಜನಕನೆಲೊ ಕೇಳು ಅ-
ಖಿಳ ಸುಮನಸರು ಎನಗೆ ಸಹಾಯರೆಲೊ
ಖಳ ಕುಲಮಣಿ ನಿನ್ನ ನೈಜ ವ್ಯಾಪಾರವ
ಬಲ ನಡಿಯದಲೊ ಕಲ್ಪಾಂತ್ಯದಲ್ಲ್ಯಾಗಿ
ಖಳ ದರ್ಪ ಭಂಜನ ಗುರು ವಿಜಯ ವಿಠ್ಠಲನ್ನ
ಬಲದಿಂದ ನಿನ್ನಯ ತಲಿಯ ಕುಟ್ಟುವೆನೊ ೪

**ಆದಿತಾಳ**

ಕಾಲನಾಮಕ ಭಗವಂತನ ಇಚ್ಛೆಯಿಂದ
ಮೂಲ ಕಾರಣವಾದ ಅನಾದಿ ಕರ್ಮದಿಂದ
ಪಾಲಕನಾದ ಹರಿ ಪರಾಙ್ಮುಖನಾಗುತಿರೆ
ಇಳಿಯೊಳು ಜನಿಸಿದಾಗ ಪೂರ್ವೋಕ್ತವಾದ ಬಲ
ತೊಲಗಿಪ್ಪ ಕಾಲದಲ್ಲಿ ಇದೆ ಇದೆ ಸಮಯವೆಂದು
ಖಳ ಕುಲಮಣಿ ನಿನ್ನ ಕುಹಕದ ನಡತೆಯಿಂದ
ಮೇಲಾದ ಸುಖಗಳ ಅಪಹಾರ ಮಾಳ್ಪನೆಂದು
ಬಲು ಮೋದದಿಂದ ನೀನು ಹಿಗ್ಗುವದು ಸಲ್ಲಾ
ಕಾಲಕ್ಲಿಪ್ತ ನಂತರ ಹರಿ ಕೃಪೆಯಿಂದ ಎನ್ನ
ಆಳಾಗಿ ನೀನೆ ಉಂಬಿ ಕಲಿಕೃತ ಕಲ್ಮಷದಿ
ಆಲೋಚನೆ ಇದಕ್ಕಿಲ್ಲ ಇದು ಸತ್ಯ ಇದು ಸತ್ಯ
ಶ್ರೀ ಲಲನಿಯ ಪ್ರಿಯ ಗುರು ವಿಜಯ ವಿಠ್ಠಲನ್ನ
ಆಳುಗಳಂಜೊವರೆ ನಿನಗೆಂದಿಗಾದರು ೫

**ಜತೆ**

ಕಂಟಕಾರಿ[೧]ಯ ಮೆಟ್ಟಿ ನಿನ್ನ ಎದಿಯ ತುಳಿವೆ ನಿ-
ಷ್ಕಂಟಕ ಗುರು ವಿಜಯ ವಿಠ್ಠಲನ್ನ ಕೃಪೆಯಿಂದ ॥

[ರಾಕ್ಷಸ ನಾಮ ಸಂ॥ ಕಾರ್ತಿಕ ಬ॥ ೭ ಬುಧವಾರ]

---

೧. ಪಾದರಕ್ಷೆ, ಕೆರಹು

# ಆತ್ಮ ನಿವೇದನೆಯ ಸುಳಾದಿಗಳು

## ೧೪೦

### ಧ್ರುವತಾಳ

ಒಡಿಯರಿಲ್ಲದ ವೃಕ್ಷ ಕಂಡ ಕಂಡವರೆಲ್ಲ
ಬಡಿದು ತಿಂಬುವ ನ್ಯಾಯವಾಯಿತೆನಗೆ
ಅಡಿ ತೊಲಗದೆ ಕಾಮ ಕ್ರೋಧಾದಿ ಗರ್ವಂಗಳು
ಸುಡುತಲಿವೆ ವ್ಯವಧಾನವಿಲ್ಲದೆ
ಕಡು ದುಃಖವನ್ನು ಆರಿಗೆ ಪೇಳಲಿನ್ನು
ಒಡಿಯನಾವನು ಪರಿಹರಿಸುವುದಕ್ಕೆ
ಪೊಡವಿಯೊಳಗೆನ್ನ ದೂರು ಕೇಳುವುದಕ್ಕೆ
ಹುಡಿಕಿ ನೋಡಿದರನು ಒಬ್ಬರಿಲ್ಲ
ಜಡಜ ಸಂಭವ ಮುಖ್ಯ ಸುರರಾದಿ ಜೀವಿಗಳ
ಬಿಡದೆ ಸಾಕುವರಯ್ಯಾ ನಿಧಿಯು ಆವಾ
ಜಡಜ ಜಾಂಡವನ್ನು ನೇಮಿಸಿ ಸ್ಥಿತಿ ಮಾಡಿ
ಕಡೆಯನೈದಿಪದಕ್ಕೆ ಮುಖ್ಯ ಕರ್ತು ನಾವ
ಕಡಲಶಯನನೆ ನಿನ್ನಿಂದ ವ್ಯತಿರಿಕ್ತವಾದ
ಒಡೆಯರಿಲ್ಲವು ಆವ ಪರಿಯಲಿ ನೋಡಿ
ಸಡಲ ಬಿಡುವುದು ಸಮ್ಮತವೇನು ನಿನಗೆ
ಭಿಡಿಯ ಲೇಶವನ್ನು ಇಲ್ಲವೇನೋ
ಜಡಮತಿಯವನೆಂದು ಜರಿದು ನೋಡಲು ಆವ
ಮಡವು ದಾಟಿಪದಕ್ಕೆ ಆವ ಪೇಳೋ
ಒಡಿಯ ಎನಗೆ ನೀನೆ ಜನುಮ ಜನುಮದಲ್ಲಿ
ತೊಡರುಗಳೆಷ್ಟು ಒದಗೆ ಇದು ತಪ್ಪದೋ
ನುಡಿವರು ಇನ್ನೊಂದು ಪರಿಯಲ್ಲಿ ಸಜ್ಜನರೆಲ್ಲ
ಒಡಿಯು ಎನಗೆ ನಿನಗೆ ಅಗಲದೆಂದೂ
ಆಡುವ ವಚನಕ್ಕೆ ವ್ಯಾಹತಿ ತಾರದಲೆ

ಪಿಡಿಯೊ ಕರವ ಅವ್ಯವಧಾನದಿ
ಉಡುರಾಜ ನಾಮ ಗುರು ವಿಜಯ ವಿಠ್ಠಲ ಭವ
ಮಡುವಿನೊಳಗೆ ಬಿದ್ದು ಮೊರಿಯನಿಡುವೆ ೧

### ಮಟ್ಟತಾಳ

ಅರಸನಿಗೆ ಸಖನಾಗಿ ಅನ್ನ ಕಾಣದಲೆ
ತಿರಿಕಿಯ ಮನೆ ಮನೆ ತಿರುಗಿದೆ ಬಲು
ಅರಸಿಗೆ ಮಾನ್ಯತ್ವ ಬರುವದೆ ಜನರಿಂದ
ವರ ಪ್ರಖ್ಯಾತದಲಿ ದೃಷ್ಟಿಯ ಅವಗಿತ್ತು
ಎರಡರ ಮಧ್ಯದಲಿ ವ್ಯವಹರಿಸುವ ನೊಂದು
ಪರಮ ಪ್ರೀಯನೆಂಬ ವಚನವನ್ನುಡಿಸಲ್ಲ
(ಪರಮ ಪ್ರೀಯನಾಗೆ ತಿರಿಕಿಯ ಮನೆ ಮನೆ)
ತಿರುಗುವದೆ ಬಿಡಸಿ ಪ್ರೀತಿಯಿಂದಲಿ ಕರೆದು
ಪರಿಪರಿ ಸಂಪದ ಪಾಲಿಪ ತಡೆಯದಲೆ
ನರ ಸಖ ಸಿರಿ ಗುರು ವಿಜಯ ವಿಠ್ಠಲರೇಯ
ಎರಡರೊಳಗೊಂದು ನಿರ್ಧಾರವ ಮಾಡೊ ೨

### ತ್ರಿವಿಡಿತಾಳ

ಪರಿ ಪರಿ ದೇಹದಿಂದ ಆಯಾಸ ಬಡಬಹುದು
ಧರಣಿಪತಿಯ ಬಾಧೆ ಸ್ವೀಕರಿಸಬಹುದು
ನರರಿಂದ ಬಲು ಪರಿ ನಿಂದ್ಯವೈದಲಿಬಹುದು
ದಾರಿದ್ರ ದೋಷಾನುಭವಿಸಬಹುದು
ಪರಿಯು ಇನಿತಾದವೆಲ್ಲ ಬಾರಲೇಕೆ ನಿನ್ನ
ಸಿರಿಚರಣ ಹೃದಯದಲ್ಲಿ ಕಾಣದಿಪ್ಪ
ಪರಮ ದುಃಖವನ್ನು ದುಸ್ಸಹವಾಗಿದೆ
ಪರಿಮಿತವೇ ಇಲ್ಲ ನೀನೆ ಬಲ್ಲಿ
ಕರಣ ಪ್ರೇರಕನಿಗೆ ಪ್ರತ್ಯೇಕ ಪೇಳುವದೇಕೆ
ಕರುಣಾಸಾಗರನೇ ಕಮಲನಯನ
ಮರಳೆ ಛಿದ್ರಗಳೆಷ್ಟು ಇರಲಿ ಮತ್ತಿರಲಿ

ತರುಳನ ಅಪರಾಧ ಕ್ಷಮಿಸಬೇಕು
ಕರಿರಾಜ ವರದ ಗುರು ವಿಜಯ ವಿಠ್ಠಲರೇಯ
ಮೊರೆ ಹೊಕ್ಕೆನೊ ಪೊರಿಯಬೇಕೋ ಕರುಣಿ ೩

**ಅಟ್ಟತಾಳ**

ಅಪರಾಧ ಮಾಡಿದ ಭಕ್ತರಿಗೀಪರಿ
ಉಪಶಮನವಿಲ್ಲದಿರಲು ಜಗದೊಳು
ಕೃಪಣ ವತ್ಸಲನೆಂಬೊ ಬಿರಿದಿನ್ನು ಪ್ರಖ್ಯಾತ
ವಿಪಗಮನ ನಿನಗೆ ಬರುವದೆ ಎಲೋ ದೇವ
ಸಪರಿಮಿತವಾದ ಸುಖದ ಲೋಕಂಗಳು
ಉಪಗಮ್ಯವಾಗವು ಎಂದಿಗಾದರು ನೋಡಾ
ಅಪರಿಮಿತವಾದ ಆನಂದಪ್ರದವಾದ
ಸುಪವಿತ್ರ ಲೋಕವು ದೂರತಿ ದೂರವೆ ಸರಿ
ಶಫರಾದಿ ರೂಪನೆ ಗುರು ವಿಜಯ ವಿಠ್ಠಲರೇಯ
ಕೃಪಣ ಬುದ್ಧಿಯ ಬಿಡು ಕರುಣದಿಂದಲಿ ನೋಡೊ ೪

**ಆದಿತಾಳ**

ಭಕತರ ಅಪರಾಧ ಎಣಿಸುವ ನೀನಲ್ಲ
ಭಕತರ ಅಭಿಮಾನ ಸತತ ವಹಿಸಿ ಮೆರೆವ
ಭಕತ ವತ್ಸಲ ನೀನು ಭಕತರ ಭಾಗ್ಯನಿಧೆ
ಭಕತರ ಸುಖ ನೀನೆ ಭಜಕರ ಸುಖ ಗುರು
ಭಕತರಾಶ್ರಯ ನೀನೆ ನಿನಗಿಂದ ಅನ್ಯರಿಲ್ಲ
ಭಕತರ ಬಿಡೆನೆಂಬೊ ಶಪಥವೆ ನಿನ್ನದಯ್ಯಾ
ಭಕತರಿಗಾಗಿ ಸೃಷ್ಟಿ ನಿರ್ಮಿಸಿದ ನಂತರ
ಭಕತರ ವಾಸಕ್ಕೆ ಲೋಕಂಗಳು ರಚಿಸಿದಿ
ಭಕತರ ಸುಖಕಿನ್ನು ಸಕಲವು ನಿರ್ಮಿಸಿದಿ
ಭಕತರ ನಿಮಿತ್ಯ ಬಲು ವಿಧವಾಗಿದ್ದ
ಸಕಲವತಾರಗಳು ಧರಿಸಿದಿ ಪ್ರೀತಿಯಿಂದ
ಭಕತರ ಸಲಹಲು ಜಾರ ಚೋರನೆನಿಸಿದಿ

ಭಕತರ ಪ್ರಿಯನೆನಿಸಿ ಸಾರಥಿ ಮೊದಲಾದ
ಕುಕರ್ಮವಂಗೀಕಾರ ಮಾಡಿದಿ ಎಲೋ ದೇವ
ಭಕುತರ ವಶ್ಯ ನೀನು ಮಾಡುವ ವ್ಯಾಪಾರ
ಭಕುತರಿಗಲ್ಲದಲೆ ನಿನಗುಂಟೆ ಪ್ರಯೋಜನ ಈ
ಯುಕುತಿ ಎನ್ನದಲ್ಲ ಶ್ರುತಿ ಸ್ಮೃತಿ ವರಲುತಿವೆ
ವುಕುತಿಯ ಮನವಪ್ಪ ನೀನೇವೆ ಪ್ರೇರಿಸಿದಿ
ಈ ಕಲಿಕೃತ ಮಮಕಾರ ಜನಿತವಾದ ಭವಬಂಧ
ಮುಕುತನ ಮಾಡುವದು ಕ್ಷಣವನು ತಡಿಯದಲೆ
ಲಕುಮಿಯ ಆಣೆ ನಿನಗೆ ಸಕಲ ಸುರರ ಆಣೆ
ಭಕುತರ ಆಣೆ ಮತ್ತೆ ಎನ್ನಾಣೆ ಹೇ ಕರುಣಿ
ಈ ಕುಂಭಿಣಿಗೆ ಮುಖ್ಯ ಒಡೆಯ ನೀನಾದರು
ಭಕತರ ವಾಕ್ಯವನ್ನು ಪಾಲಿಸಿ ಸಲಹಬೇಕು
ಭಕತರಿಚ್ಛೆಯಗಾರ ಗುರು ವಿಜಯ ವಿಠ್ಠಲ ರೇಯ
ಭಕತರ ಮನೋಭೀಷ್ಟಗರೆವನು ನೀನೆ ದೇವ ೫

**ಜತೆ**

ಭಕತರ ಅಪರಾಧ ಸಾಸಿರವಿರಲಿನ್ನು
ಶಕತ ರಕ್ಷಿಸೊ ಗುರು ವಿಜಯ ವಿಠ್ಠಲರೇಯಾ ॥

## ೧೪೧

**ಧ್ರುವತಾಳ**

ಇಷ್ಟು ನಿರ್ದಯವ್ಯಾಕೊ ಎಲೆ ಎಲೆ ಆಪ್ತನಾದ
ಕೃಷ್ಣ ನಿನಗೆ ನಾನು ದೂರಾದವನೇ
ಘಟ್ಟಿ ಮನಸಿನವ ನೀನಲ್ಲ ಎಂದಿಗೂ ಎನ್ನ ಅ–
ದೃಷ್ಟ ಲಕ್ಷಣವೆಂತೊ ತಿಳಿಯದಯ್ಯಾ
ಸೃಷ್ಟಿಯೊಳಗೆ ಭಕುತ ವತ್ಸಲನೆಂಬೊ

ಶ್ರೇಷ್ಠವಾದ ಬಿರಿದು ಇಲ್ಲವೇನೋ
ಶಿಷ್ಟ ಜನರ ಸಂಗ ವರ್ಜಿತನಾಗಿ ನಿನ್ನ
ಮುಟ್ಟಿ ಭಜಿಸದಲಿಪ್ಪ ಹೀನನೆಂದೂ
ಬಿಟ್ಟು ನೋಡಿದರೆ ಮತ್ತಿಷ್ಟು ಅಧಿಕವಾದ
ದುಷ್ಟ ನಡತಿಯಿಂದ ಬಂಧನಾಹಾ
ಪ್ರೇಷ್ಟ ಯೋಗ್ಯವಾದ ಕಾಲವ ನಿರೀಕ್ಷಿಸೆ
ಎಷ್ಟು ಕಲ್ಪಗಳಿಗೆ ಭವದಲಿಂದ
ನಿಷ್ಟವಾಗುವನೇನೊ ಅಭೀಷ್ಟವೈದುವನೆಂತು
ದೃಷ್ಟಿಲಿ ನೋಡಿದರೆ ಅಜ ಭವಾದ್ಯರು
ಕಷ್ಟವೈದುವರು ನಿಜಸುಖವಿಲ್ಲದಲೆ
ವಿಷ್ಣು ನಿನ್ನಯ ಮಹಿಮೆ ಇನಿತು ಇರಲೂ
ಎಷ್ಟರವರಯ್ಯಾ ಮಿಕ್ಕಾದ ಭಕುತರೆಲ್ಲ
ತುಷ್ಟನಾಗಿ ನಿನಗೆ ನೀನೇ ಒಲಿದು
ದುಷ್ಟವಾದ ಕರ್ಮ ನೂಕಿ ಕಡಿಗೆ ಮಾಡಿ
ಪುಷ್ಟಗೈಸು ಜ್ಞಾನಾನಂದದಿಂದ
ತಟ್ಟಲೀಸದೆ ಕಲಿ ಬಾಧೆ ಎಂದೆಂದಿಗೆ
ಹೃಷ್ಟನಾಗು ಎನ್ನ ಸಾಧನಕ್ಕೆ
ದಿಟ್ಟ ಮೂರುತಿ ಗುರು ವಿಜಯ ವಿಠ್ಠಲ ರೇಯಾ
ಪೊಟ್ಟಿಯೊಳಗೆ ಜಗವಿಟ್ಟು ಸಲಹುವ ದೇವಾ ೧

## ಮಟ್ಟತಾಳ

ಕಾಳಿ ಸರ್ಪನು ನಿನ್ನ ಕಚ್ಚಿ ಬಿಗಿಯೆ ಅವನ
ಕೀಳು ನಡತೆಯನ್ನ ನೋಡದೆ ಕರುಣದಲಿ
ಮೇಲಾನುಗ್ರಹ ಮಾಡಿದಿ ಮುದದಿಂದ
ಫಾಲಲೋಚನ ಸುರಪ ಗುರು ಸತಿ ಭೃಗು ಭೀಷ್ಮ
ಶೀಲ ಭಕುತರೆಲ್ಲ ಕಲಿ ಕಲ್ಮಷದಿಂದ
ಕಾಲನಾಮಕ ನಿನ್ನ ಬಂಧಕ ಶಕುತಿಯಲಿ
ವ್ಯಾಳೆ ವ್ಯಾಳೆಗೆ ಅಪರಾಧವೆ ಮಾಡಿದರೂ
ಪಾಲಿಸಿದೆ ಹೊರ್ತು ಪ್ರದ್ವೇಷವ ಮಾಡಿದಿಯಾ

ಜಾಲ ಅಘವ ಮಾಡಿ ದೇಹಿ ದೇಹಿ ಎನಲು
ತಾಳುವರಲ್ಲದಲೆ ಛಿದ್ರಗಳೆಣಿಸುವರೆ
ಮೂಲ ನೀನೆ ಸುಖ ದುಃಖಾ (ಖ) ನುಭವಕ್ಕೆ
ಮೂಲೋಕಾಧಿಪ ಗುರು ವಿಜಯ ವಿಠ್ಠಲ ನಿನ್ನ
ಆಳುಗಳಗೊಬ್ಬ ಅಧಮನು ನಾನೇವೆ ೨

### ತ್ರಿವಿಡಿತಾಳ

ವಿದೇಶದವನಾಗಿ ಪಥದೊಳು ಒಂದು ಕ್ಷಣ
ಆದರ ಪರಸ್ಪರವಾಗಿ ಭಿಡಿಯಾ
ಹೃದಯದೊಳು ಮರಿಯದೆ ಸ್ಮರಿಸುವನೊಮ್ಮಿಗನ್ನ
ಪದುಮನಾಭನೆ ನಿನ್ನ ನಿರ್ಭಿಡೆಯತನಕೆ
ಆದಿ ಅಂತ್ಯವಿಲ್ಲ ಆಶ್ಚರ್ಯ ತೋರುತಿದೆ
ಉದದಿ ಪೋಲುವ ದಯ ಪೂರ್ಣನೆಂದು
ಸದಮಲವಾಗಿ ನಿನ್ನ ಧೇನಿಸಬೇಕೆಂತೊ
ವಿದೂರನೆನಿಪ ದೋಷರಾಶಿಗಳಿಗೆ
ಪದೋಪದಿಗೆ ಗುರುದ್ರೋಹ ಮಾಡಿದಿ ಎಂದು ಅ–
ವಧಿ ಇಲ್ಲದಲೆ ಹಂಗಿಸುವದು
ಮೋದವಾಗಿ ನಿನಗೆ ತೋರುತಲಿದೆ ನಿನ್ನ
ಚದುರತನಕೆ ನಾನು ಎದುರೇ ನೋಡಾ
ಪದುಮ ಸಂಭವ ಮುಖ್ಯ ದಿವಿಜರು ಸ್ವತಂತ್ರದಿ
ಪದವಾಚಲಣದಲ್ಲಿ ಸಮರ್ಥರೇ
ಹೃದಯದೊಳಗೆ ವಾಸವಾಗಿದ್ದ ಹರಿ ನಿನ್ನ
ಚೋದ್ಯ ನಡತೆ ನಡವದಾವ ಕಾಲ
ಇದು ಎನ್ನ ಮಾತಲ್ಲ 'ಎಥಾ ದಾರುಮಯಿ'
ಶುದ್ಧ ಭಾಗವತೋಕ್ತಿ ಪ್ರಮಾಣದಂತೆ
ಅದುಭೂತ ಬಿಂಬ ನೀನು ಪ್ರತಿಬಿಂಬ ಜೀವ ನಿನಗೆ ನೀ
ಮುದದಿಂದ ಮಾಡಿಸದಿಪ್ಪ ಕಾರ್ಯ ಎನಗೆ
ಒದಗಲು ಪೂರ್ವೋಕ್ತವಾದ ಪ್ರಮಾಣಗಳಿಗೆ
ಅಧಿಕಾರ ಸಿದ್ಧಾಂತ ಬರುವದೆಂತೋ

ಉದರಗೋಸುಗವಾಗಿ ಮಾಡಿದವನಲ್ಲ
ಉದಯಾಸ್ತಮಾನ ಎನ್ನ ಬಳಲಿಪುದು
ಇದು ಧರ್ಮವಲ್ಲ ನಿನಗೆ ಕರವ ಮುಗಿದು ನಮಿಪೆ
ಪದಕೆ ಬಿದ್ದವನ ಕೂಡ ಛಲವ್ಯಾತಕೊ
ಬದಿಯಲ್ಲಿ ಇಪ್ಪ ಗುರು ವಿಜಯ ವಿಠ್ಠಲರೇಯಾ
ಸದಾ ಕಾಲದಲಿ ನೀನೆ ಗತಿ ಎಂದು ಇಪ್ಪೆ ನೋಡಾ ೩

**ಅಟ್ಟತಾಳ**

ಬಲವಂತವಾಗಿದ್ದ ಪೂರ್ವದ ಕರ್ಮವು
ತಲೆಬಾಗಿ ಉಣಬೇಕು ಉಣದಿದ್ದರೆ ಬಿಡದು
ಜಲಜನಾಭನೆ ನಿನ್ನ ಸಂಕಲ್ಪ ಇನಿತೆಂದು
ತಿಳಿದು ಈ ದೇಹದ ಅಭಿಮಾನವಿದ್ದರು
ತಲೆದೂಗಿ ಸುಮ್ಮನೆ ಇರಲಾಗಿ ಎನ್ನಿಂದ
ಒಲ್ಲೆನೆಂದರೆ ಬಿಡದು ಎಲ್ಲಿ ಪೊಕ್ಕರನ್ನ
ನಳಿನಾಕ್ಷ ನೀನೆವೆ ಘನ ಕರುಣವ ಮಾಡಿ
ವಿಲಯಗೈಸುವ ಉಪಾಯಗಳಿಂದಲಿ
ನೆಲೆಯಾಗಿ ನಿಂತಿದ್ದು ಪಾಪರಾಶಿಗಳನ್ನು
ಸಲೆ ಇಂದಿನ ದಿನಕ್ಕೆ ಸರಿ ಹೋಯಿತುಯೆಂದು
ಕುಲವ ಪಾವನ ನೀನೆ ಪೇಳಿದ ಮಾತಿಗೆ
ಹಲವು ಬಗೆಯಿಂದ ಇನ್ನು ಬಳಲಿಪದಕ್ಕೆ
ಮಲತ ಮಲ್ಲರ ಗಂಡ ಗುರು ವಿಜಯ ವಿಠ್ಠಲರೇಯ
ಖಳದರ್ಪ ಭಂಜನ ಕೃಪೆಯಿಂದ ನೋಡೋದು ೪

**ಆದಿತಾಳ**

ಅನುಭವದಿಂದ ಇದು ತೀರಿಪೆನೆಂದೆನೆ
ವನಜ ಭವ ಕಲ್ಪಕ್ಕೆ ಎನ್ನಿಂದಾಹದಲ್ಲ
ಸನಕಾದಿ ಮುನಿವಂದ್ಯ ನೀನೆವೆ ದಯದಿಂದ
ಋಣವನ್ನು ತೀರಿಪುದು ಆಲಸ್ಯ ಮಾಡದಲೆ
ತೃಣದಿಂದ ಸಾಸಿರ ಹಣವನ್ನು ತೀರಿದಂತೆ

ಶಣಸಲಿ ಬೇಡ[1] ಇನ್ನು ಅಪರಾಧ ಮೊನೆ ಮಾಡಿ
ಕ್ಷಣ ಕ್ಷಣಕೆ ಇದು ಬೆಳ್ಳಿಸುವುದುಚಿತವೆ
ಮುನಿ ಮನಮಂದಿರ ಗುರು ವಿಜಯ ವಿಠ್ಠಲರೇಯ
ನಿನ್ನವನೆಂದರೆ ಎನಗಾವ ದೋಷ ಉಂಟು ೫

**ಜತೆ**

ಅಹಿತ ಮಾಡುವನಲ್ಲ ಭಕತರ ಸಮೂಹಕ್ಕೆ
ಲೋಹಿತಾಕ್ಷ ಗುರು ವಿಜಯ ವಿಠ್ಠಲರೇಯ ॥

## ೧೪೨

**ಧ್ರುವತಾಳ**

ಮಾಯಗಾರನೆ ನಿನ್ನ ಮಾಯ ತಿಳಿಯುವದಕ್ಕೆ
ಕಾಯಜಾದ್ಯಾದಿ ಸುರರು ಸಮರ್ಥರೆ
ಕಾಯ ನಿನ್ನದು ಎಂದು ನೆರೆ ನಂಬಿದವನನ್ನ
ಮಾಯಾ ಸಂಸಾರ ಪಾಶದಿಂದ ಬಿಗಿದು
ಹೇಯವಾದ ವಿಷಯ ಜಾಲದೊಳಗೆ ಹಾಕಿ
ನೋಯ ದಣಿಸಿದಯ್ಯಾ ಕೃಪೆ ಇಲ್ಲದೆ
ಮಾಯಾ ರಮಣ ನೀನು ಕಾಣಿಸಿಕೊಳ್ಳದಲೆ
ಆಯಾಸ ಬಡಿಸಿದಿ ಅಪರಿಮಿತಾ
ತಾಯಿ ಮಕ್ಕಳ ಕುರಿತು ವಂಚಿಸೆ ಇಚ್ಛಾ ಮಾಡೆ
ಬಾಯಿ ಅರಿಯದ ಅಣುಗಳಿಂದೇನಹದೋ
ರಾಯನೊಬ್ಬನು ತಾನು ಸ್ವಾತಂತ್ರ ಬಲಾರಾಧಿಪರ
ರಾಯನಾಗಿ ರಾಜ್ಯಲಕ್ಷ್ಮೀ ಅಪಹರಿಸೆ
ದಾಯಿಗಾರರು[2] ಬರಲು ಅಭಿಮಾನದಿ ಸೈನ್ಯಾ

---

೧. ದುಃಖಪಡಿಸಲಿಬೇಡ ೨. ವೈರಿಗಳಾದ (ದಾಯಾದಿಗಳು), ದಾಳಿಗಾರರು

ನಾಯಕರನ್ನ ಕೈಶೆರೆ ಕೊಡಲು ಅ-
ಪಾಯ ಕೃತ್ಯಗಳಿಂದ ದಂಡಣೆ ಮಾಡುತಿರೆ
ಆ ಎಂಬಂಥರನ್ನ ಲೆಕ್ಕಿಸದೆ ತನ್ನ
ರಾಯನಿಂದಲಿ ಇದು ನಿರ್ಹಣ[೧] ಎಂದು ತಿಳಿದು
ಭೂಯೊ ಭೂಯೊ ನಮಿತಿ ಪೇಳಿ ಕೇಳುವದು
ದ್ರೋಹಿ ಆದವನೆಂದು ಅಪರಾಧವನ್ನೇ ಹೊರಿಸಿ ಅ-
ಸೂಯದಿಂದಲಿ ಮನಕೆ ತಾರದಿರಲು
ರಾಯ ಮಾಡಿದ ಕರ್ಮ ಭೃತ್ಯರಿಂದಲಿ ಅದು
ಪರಿಯಾಪ್ತ[೨] ವೆನಿಸುವದೆ ಎಂದಿಗನ್ನ
ಶೌರ್ಯರ ಲಕ್ಷಣವೆ ಒಪ್ಪಿಸಿ ಕೊಡುವದು
ಧೈರ್ಯವೇನೋ ವೀರ ಸಂತತಿಗೆ ಅ-
ಕಾರ್ಯಕನ ಮೇಲೆ ಬರಿದೆ ಈ ಪರಿ ಮುನಿದು
ಕ್ರೂರ್ಯ ಮಾಡುವದಿದು ಘನತಿಯೇನೊ
ರಾಯ ರಾಯರ ಮಧ್ಯ ಮಾನ್ಯವೇನೊ ನಿನಗೆ ಅ-
ನ್ಯಾಯವೆಂದು ನಗರೇ ವಿಬುಧರೆಲ್ಲ
ಕಾಯಜ ಪಿತ ನಿನ್ನ ಚರಿತೆ ಇನಿತು ಸರಿ
ತೋಯಜಾಕ್ಷನೆ ಈ ನುಡಿದ ಯುಕ್ತಿ
ನ್ಯಾಯವಾಯಿತೆ ನೀ ಎನ್ನ ಮಾತಿಗೆ ಸೋಲು
ರಾಯ ದೃಷ್ಟಿಲಿ ನೋಡೊ ಕರುಣ ಮಾಡೊ
ಛಾಯಕ್ಕೆ ಸಮವಾದ ಯತನದಿಂದಲಿ ಕಡೆ
ಹಾಯಿಸು ವೇಗದಿಂದ ತಡ ಮಾಡದೇ
ಗಾಯಿತ್ರಿ ಪ್ರತಿಪಾದ್ಯ ಗುರು ವಿಜಯ ವಿಠ್ಠಲರೇಯ ಉ-
ಪಾಯವಿಲ್ಲವಯ್ಯಾ ನಿನ್ನ ಹೊರ್ತು ೧

**ಮಟ್ಟತಾಳ**

ಹಣೆಯಲ್ಲಿ ಬರದಿದ್ದ ಲಿಪಿಯಂತೊ ತಿಳಿಯೆ
ಅನುಮಾನಿಸಿ ನೋಡೆ ಎನಗಿಂದಧಿಕವಾದ

---

೧. ಪರಿಹಾರ್ಯ ೨. ಪೂರ್ಣ

ಹೀನರೊಬ್ಬರು ಕಾಣೆ ಈ ಪೃಥ್ವಿಯಲ್ಲಿ
ಗುಣನಿಧೆ ನಿನ್ನಿಂದ ಸುಖವೈದುವೆನೆಂದು
ಮನ ನಿರ್ಭರ[1]ವಾದ ಸಂತೋಷವ ತಾಳಿ
ಅನುದಿನದಲಿ ನಿನ್ನ ಅನುಸರಿಸಿ ಬಿಡದೆ
ತನು ಮನವೊಪ್ಪಿಸಿ ನಿಯಾಮಿಸಿದ ಕಾರ್ಯ
ಜನಕೆ ಸಮ್ಮತವಾಗೆ ಅಥವಾ ಅಸಮ್ಮತವಾಗೆ
ನಿನ್ನಾಜ್ಞವೆ ಮುಖ್ಯ ಇದರಲಿಂದಲಿ ಎನಗೆ
ಘನ ಪುರುಷಾರ್ಥಗಳು ನಿಜವೆಂದು ತಿಳಿದು
ಬಿನಗು ವಿಷಯದಲ್ಲಿ ಮಮತೆಯ ಮಾಡದಲೆ
ವನಜ ಪಾದಗಳನ್ನು ನೆರೆನಂಬಿದವನ
ಅನಿಮಿತ್ತವಾದ ಅಪರಾಧಕ್ಕೆ ಮುನಿದು
ಮನೆಯಿಂದಲಿ ಹೊರಗೆ ಹಾಕಿದ ತೆರದಂತೆ
ದನುಜ ಮರ್ದನ ನೀನು ಇನಿತು ಮಾಡಿದದಕೆ
ಏನೆಂಬೆನೋ ನಿನ್ನ ಔದಾರ್ಯತನಕಿನ್ನು
ಗುಣ ಗಣ ಪೂರ್ಣನೆ ಗುರು ವಿಜಯ ವಿಠ್ಠಲರೇಯಾ
ಮಣಿದು ಬೇಡಿಕೊಳಲು ದಯಬಾರದು ಏಕೆ(ಯಾಕೆ) ೨

**ತ್ರಿವಿಡಿತಾಳ**

ಹೆದರಿದವನ ಮೇಲೆ ಬ್ರಹ್ಮಾಸ್ತ್ರ ಹಾಕಿದಂತೆ
ಮೊದಲೆ ನಿನ್ನಯ ದೊರೆತನಕೆ ಅಂಜಿ
ಅದುಭೂತ ಕಾರ್ಯದಲ್ಲಿ ನೇಮಿಸಬೇಡವೆಂದು
ಪಾದಕೆ ಬಿದ್ದು ನಿನ್ನ ಬೇಡಿಕೊಂಡೆ
ಪದುಮನಾಭನೆ ನಿನಗೆ ಕರುಣ ಪುಟ್ಟದುದಕೆ
ಪದೋ ಪದಿಗೆ ಈಗ ಬಳಲಿಸುವದು
ಇದು ಘನತಿಯೆ ನಿನ್ನ ಮಾತು ಕೇಳುವವರಿಗೆ
ಆದರ ಇರುವಂತೆ ಮಾಡುವದು
ಉದಯಾರ್ಕ ತೇಜ ಗುರು ವಿಜಯ ವಿಠ್ಠಲರೇಯ
ಬುಧರ ಸಮ್ಮತ ನಡೆವ ಸ್ವಾತಂತ್ರನೆ ೩

---

೧. ಸಂಪೂರ್ಣ ಭಾರ, ಬಹಳ, ಅತಿಶಯ

## ಅಟ್ಟತಾಳ

ರಾಜಾಜ್ಞಾ ನಡೆಸದ ಭೃತ್ಯರಿಗೆ ತತ್ಕಾಲ
ರಾಜನಿಂದಲಿ ಶಿಕ್ಷಿತನಾಗುವ
ಮೂಜಗತ್ಪತಿ ನಿನ್ನ ಶಾಸನದಿಂದಲಿ
ಪ್ರಜ್ವಲನವಾದ ನರಕವೈದುವೆನೆಂದು
ನೈಜವಾಗಿ ಶ್ರುತಿ ಶಾಸ್ತ್ರ ವರಲಿ ಪೇಳಾ
ರಾಜಾಜ್ಞ ನಡಿಸಿದ ಜನರಿಗೆ ಪೂರ್ವೋಕ್ತ
ವ್ಯಾಜ್ಯವೊದಗಲು ನ್ಯಾಯದ ಸೊಬಗು
ಸೋಜಿಗವಾಗಿ ತೋರುತಿದೆ ನೋಡಲು
ರಾಜೀವ ನೇತ್ರ ಸದ್ಧರ್ಮ ಪರಿಪಾಲ
ಭೋಜ ಕುಲೋತ್ತಮ ಗುರು ವಿಜಯ ವಿಠ್ಠಲರೇಯ
ಈ ಜೀವಿಗಳ ಮುಖ್ಯ ಪಾಲಿಸುವವ ನೀನೆ ೪

## ಆದಿತಾಳ

ಪಾಲಿಪ ಇಚ್ಛೆ ಮಾಡೆ ಪಾಪದ ಕರ್ಮಗಳ
ಜಾಲಗಳಿರಲಿ ಪುಣ್ಯವಾಗಿ ಫಲಿಸೋವು
ಸೋಲಿಪ ಇಚ್ಛೆ ಮಾಡೆ ಪುಣ್ಯದ ರಾಶಿಗಳು ಕೇ–
ವಲ ಇರಲಿ ಫಲಕ್ಕವು ವೊದಗವು
ಲೀಲೆ ಇನಿತು ಇದೆ ಹಲವು ಮಾತುಗಳ್ಯಾಕೆ
ಸ್ಥೂಲಕ್ಕೆ ಸ್ಥೂಲ ಗುರು ವಿಜಯ ವಿಠ್ಠಲರೇಯಾ
ಮೂಲವು ನೀನೆವೆ ಎನ್ನ ಅಪರಾಧಗಳಿಗೆ ೫

## ಜತೆ

ನಿನ್ನ ಆಜ್ಞವ ನಡಿಸಿದನೆಂಬೊ ಅಭಿಮಾನ
ಮನ್ನದಿ ಮರಿಯದಿರೋ ಗುರು ವಿಜಯ ವಿಠ್ಠಲರೇಯ ॥

## ೧೪೩

### ಧ್ರುವತಾಳ

ಹರಿ ನಿನ್ನ ನಿರ್ಘಣತನ[1]ಕೆ ಎಣೆಯುವುಂಟೆ
ಪರಮ ನಿರ್ಭಾರಕ[2] ಕರುಣಾರ್ದ್ರ ಹೃದಯಾ
ಚಿರಕಾಲ ವೀರ ಸಹಜ ವಿದ್ಯಾ ಸಂಪಾದಿಸಿ
ನಿರುತ ಮನಿಯಲ್ಲಿದ್ದ ವೃದ್ಧ ತರುಣಿಯಲ್ಲಿ
ಉರು ಪರಾಕ್ರಮವನೆ ತೋರಿದ ತೆರದಂತೆ
ಹರಿ ನೀನೆ ಗತಿಯೆಂದು ಮನ ಮೊದಲಾದ ಸಕಳ
ಕರುಣಾದಿ ಧನ ಸತಿ ಸುತರು ಮಿಕ್ಕಾದವೆಲ್ಲ
ಚರಣಕರ್ಪಿಸಿ ಕೊಟ್ಟು ಆರ್ತನಾಗಿ
ಕರವ ಮುಗಿದು ನಿನಗೆ ನಮೊ ನಮೊ ನಮೊ ಎಂದು
ಮೊರೆಯ ಹೊಕ್ಕವನ ಮೇಲೆ ಮರಳೆ ಮರಳೆ
ಮರಿಯ ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರ ಹಾಕಿದಂತೆ
ಹರಿಯೆ ಇನಿತು ಮಾಳ್ಪುದುಚಿತವೇನೊ
ಪರಿಪೂರ್ಣ ಕೃಪಾನಿಧೆ ಗುರು ವಿಜಯ ವಿಠ್ಠಲರೇಯ
ಸುರರ ಶಿರೋರನ್ನ ತ್ರಿಜಗನ್ಮಾನ್ಯಾ ೧

### ಮಟ್ಟತಾಳ

ಧರೆಯಲಿ ನಿರ್ಮಿಸಿದ ಪರಿ ಪರಿ ಪ್ರತಿಬಂಧ
ಪರಿವ್ರತಗಳೆಲ್ಲ ಪ್ರಾಮುತವಾದರು
ಕರಣಗಳು ಅದಕೆ ಶೆಣಿಸೆ ಎಂದಿಗು
ಹರಿ ನಿನ್ನಗಲಿದ ಕ್ಷಣ ವಂದ್ಯುಗವಾದ
ಮೀರಿದ ಪ್ರತಿಬಂಧ ಸಮ್ಮತದಲಿ ಉಂಬ
ಸುರ ನರರ ಮಧ್ಯ ಓರ್ವ ನಲ್ಲವು ಕೇಳಿ

---

೧. ದಯಾಶೂನ್ಯ, ನಿರ್ದಯ ೨. ಸಂಪೂರ್ಣ ಭಾರವೊಹಿಸುವ

ಪರಮ ದುಸ್ಸಹವಯ್ಯಾ ಪರಮಾತ್ಮ ನಿನ್ನಾಣೆ
ಸರಸಿಜ ಭವ ನಾಮ ಗುರು ವಿಜಯ ವಿಠ್ಠಲರೇಯಾ
ಸೈರಿಸಲಾರೆನೊ ಅಗಣಿತ ದುಃಖಗಳ ೧

## ತ್ರಿವಿಡಿತಾಳ

ದ್ವಿಜ ಕುಲೋತ್ತಮ ತಾನು ಶುಚಿಯಾಗಿ ವಿಧಿಯಿಂದ
ವಿಜಯ ಮೂರುತಿಯನ್ನೇ ಅರ್ಚಿಸುವ
ವ್ಯಾಜದಿಂದಲಿ ಸ್ನಾನ ಸಂಧ್ಯಾದಿ ಜಪ ತಪ
ಯಜಿಪ ಸಮಯದಲ್ಲಿ ಸೈರಿಸದೆ
ಕುಜನನೋರ್ವನು ಶ್ವಪಚನಾದ ಅಧಮ ಬಂದು
ದ್ವಿಜ ಕುಲ ಮಣಿಯನ್ನ ಸ್ಪರಶ ಮಾಡೇ
ಭಜಕರ ಸುಖ ನೋಡು ಅವನ ದುಃಖಕೆ ಸಮ
ತ್ರಿಜಗದೊಳಗೆ ಆವದೈಯ್ಯ ದೇವ
ವಿಜಯ ಸಖನೆ ಕೇಳೊ ಉದಯ ಮೊದಲು ಮಾಡಿ
ರಜನಿ ಮುಖ ಕಾಲ ನಿರೀಕ್ಷಿಸಿ
ನೈಜವಾದ ಸತ್ವಗುಣ ಕ್ರೀಯಮಾಣಗಳಿಗೆ
ಕುಜನ ಶಿರೋಮಣಿ ಕಲಿಯು ತಾನು
ನಿಜ ಪರಿವಾರದಿ ಪ್ರತಿಕೂಲನಾಗಿ ತನ್ನ ಸ-
ಹಜವಾದ ಕೃತ್ಯಗಳ ಚರಿಸುತಿರೆ
ದ್ವಿಜ ವರೂಥಿಯೆ ನೀನು ಜರಿದು ನೋಡುತ ನಿಂದು
ಕುಜನ ತತಿಗೆ ಸಹಾಯವಾಗುವುದು
ಸೋಜಿಗ ತೋರುತಿದೆ ಸಖನೆಂತೊ ಕೃಪಾನಿಧೆ
ತ್ಯಜನೆ ಮಾಡುವ ಶಕ್ತನಲ್ಲವೇನೋ
ಭುಜಗ ಭೂಷಣ ವಂದ್ಯ ಗುರು ವಿಜಯ ವಿಠ್ಠಲರೇಯ
ರಜ ತಮೋ ಗುಣಗಳಿಗೆ ಪ್ರೇರಕ ನೀನೆ ೨

## ಅಟ್ಟತಾಳ

ತಮೋ[೧]ಗುಣ ವೆಂಬ ಹೀನಾಶ್ರಯದಿಂದ
ಕಾಮ[೨] ವೆಂಬೊ ಪಂಥ ಗಹನಾರಣ್ಯದಿ ಬಿದ್ದು
ಆ ಮಹ ಕ್ರೋಧಾಖ್ಯ ವ್ಯಾಘ್ರ[೩] ಬಾಧಿಸುತಿದೆ
ವ್ಯಾಮೋಹ[೪]ವೆಂಬುದು ವರಹ ಬೆನ್ನಟ್ಟಿ
ನೇಮದಿ ಲೋಭದ ಸರ್ಪ[೫] ನುಂಗುತಲಿದೆ
ಆ ಮದ[೬]ವೆಂಬಂಥ ಅಷ್ಟ ಗಜಂಗಳು
ವ್ಯೋಮ ಲಂಘಿಸಿದರು ಬಿಡದೆ ಬೆನ್ನಟ್ಟಿರೆ
ಕುಮತ್ಸಿರಿ[೭]ಯಾದ ಕಂಟಕಗಳನಟ್ಟು
ಭೀಮ ರೂಪ[೮]ವಾದ ಮಾಯಾಂಧಕಾರದೊ
ಳೀಮನವೆಂಬುವ ವೃಶ್ಚಿಕ[೯] ಸ್ಪರಶದಿ
ದಾಮರೂಪ[೧೦]ವಾದ ಅಜ್ಞಾನ ಪಾಶದಿ
ಸಮಸ್ತ ಕರಚರಣಾದಿ ದೇಹವ ಕಟ್ಟಿ
ಆ ಮುಂದಣ ಮಾರ್ಗ ಕಾಣಗೊಡದಲಿಪ್ಪ
ಸ್ತೋಮ ವೈರಿಗಳೆಲ್ಲ ಮುನಿದೇಕ ಕಾಲದಿ
ನೇಮದಿ ಎನ್ನನು ಬಾಧೆ ಬಡಿಸುತಿರೆ

---

೧. ಸಂಸಾರದಲ್ಲಿ ಬಾಧಿಪ ಕಾಮಕ್ರೋಧಾದಿಗಳು ಯಾವೆಂದರೆ, ತಮೋಗುಣ ಹೆಚ್ಚಿಸುವ ಅನ್ಯಥಾ ಮತಿಗಳ ಸಹವಾಸವೇ ಹೀನ ಆಶ್ರಯ.

೨. ವಿಷಯೇಚ್ಛಾ ಕಾಮವೆಂಬ ಗಹನ ಆರಣ್ಯ.

೩. ಕಾಮದಿಂದ ಕ್ರೋಧ = ಸಿಟ್ಟು ಎಂಬ ಹುಲಿ ನುಂಗಿ ಬಾಧೆ ಬಡಿಸುವುದು.

೪. ಅನಿತ್ಯ ವಸ್ತುಗಳಲ್ಲಿ ನಿತ್ಯವೆಂದು ಪ್ರೀತಿ ಮಾಡುವದೆ ವ್ಯಾಮೋಹ – ಎಂಬ ಕಾಡು ಹಂದಿ ಬೆನ್ನುಹತ್ತಿದೆ.

೫. ಇದ್ದದರಲ್ಲಿ ಒಬ್ಬರಿಗೂ ಕೊಡದ ತಾನೂ ಉಣದ ಸರ್ಪದ ಸಮಾನ, ಲೋಭ, ಕೃಪಣತೆ ನುಂಗಹತ್ತಿದೆ.

೬. ಅನ್ನಾದಿ ಅಷ್ಟಮದಗಳೇ ಅಷ್ಟಗಜಗಳು ಬೆನ್ನಟ್ಟಿವೆ.

೭. ಸಜ್ಜನರಲ್ಲಿ ಕೆಟ್ಟ ಮತ್ಸರವೆಂಬೊ ಮುಳ್ಳುಗಳು ನಡುತ್ತವೆ.

೮. ಅಜ್ಞಾನಾಂಧಕಾರವಾದಲ್ಲಿ

೯. ಕೆಟ್ಟ ವಿಷಯಾದಿಗಳಲ್ಲಿ ಚರಿಸುವ ಕೆಟ್ಟ ಚೇಳು ಕಡಿತದಿಂದ

೧೦. ಸಂಸಾರ ಪಾಶದಿಂದ ಕಟ್ಟಿ ಹಾಕಿರುವುದನ್ನು ಬಿಡಿಸು.

ಈ ಮಹಾ ಪ್ರತಿಬಂಧ ತೊಲಗಿಪರಿಲ್ಲವೊ
ಪ್ರೇಮ ನೀನೆ ಎಂದು ಎಷ್ಟು ಕೂಗಿದರು
ಸಾಮಜ ರಕ್ಷಕ ಸುಮ್ಮನಿರುವದು
ಭೂಮಂಡಲದಲ್ಲಿ ಧರ್ಮ ಪದ್ಧತಿ ಏನೋ
ತಾಮರಸ ನಯನ ಗುರು ವಿಜಯ ವಿಠ್ಠಲರೇಯ
ಧಾಮವ ಸೇರಿಪ ಭಾರ ನಿನ್ನದಯ್ಯಾ ೬

## ಆದಿತಾಳ

ಧರಣಿಯ ಚಕ್ರದಲ್ಲಿ ಆರ್ತರನ ರಕ್ಷಿಸುವ
ಬಿರಿದು ನಿನ್ನದಯ್ಯಾ ಅನ್ಯರ್ಗೆ ಸಲ್ಲದೆಂದು
ಮೆರೆವುತಿದೆ ಶ್ರುತಿ ಶಾಸ್ತ್ರ ಪುರಾಣಗಳಲ್ಲಿ
ಹರಿ ನಿನ್ನ ಪದಗಳ ಜನುಮದೊಳಗೆ ಒಮ್ಮೆ
ಸ್ಮರಿಸಿದ ನರನಲ್ಲ ಗುಣದಿಂದ ಹೀನವಾಗಿ
ಪರಧನ ಪರಸತಿ ಪರನಿಂದ್ಯದವನಾಗಿ
ಬರಿದೆ ಕಾಲ ಕಳೆದೆ ಪರಲೋಕ ದೂರನಾಗಿ
ಕುರಿ ತನ್ನ ಮರಣದ ಕುರುಹವ ಕಾಣದಲೆ
ವರ ಭೂಷಣವಾದ ತೋರಣ ಬಯಸಿದಂತೆ
ಶಾರೀರ ಕೇವಲ ಅನಿತ್ಯವೆಂದು ತಿಳಿದು
ಪರಮೇಷ್ಠಿ ಕಲ್ಪ ತನಕ ಆಲೋಚನೆ ಮಾಡಿ
ದುರುಳವಾದ ನಡತಿಯಿಂದ ವಿಷಯವ ಸಂಪಾದಿಸಿ
ನರನೆಂದುದಾಸೀನ ಮಾಡದೆ ಕೃಪೆಯಿಂದ
ತ್ವರಿತದಿ ಬಂದೊದಗಿ ನಿಃಶತ್ರುರಮಾಡಿ ಎನ್ನ
ಕರವ ಪಿಡಿದು ಪರಿಪೂರ್ಣ ದಯಾನಿಧೆ
ನರ ಸಖನಾದ ಗುರು ವಿಜಯ ವಿಠ್ಠಲರೇಯ
ಸೈರಿಸಲಾರೆನಯ್ಯಾ ಈ ವಿಧ ತಾಪಗಳ ೭

## ಜತೆ

ಅನಿಮಿತ್ಯ ಬಾಂಧವನೆನಿಪ ದೇವರ ದೇವ
ಚಿನುಮಯ ಮೂರುತಿ ಗುರು ವಿಜಯ ವಿಠ್ಠಲರೇಯಾ ॥

## ೧೪೪

### ಧ್ರುವತಾಳ

ತಂದೆ ನಿನ್ನಯ ಪಾದ ಸಂದರುಶನದಿಂದಾ
ನಂದವಾಯಿತು ಎನಗೆ ಅಮರೇಂದ್ರನೆ
ವೃಂದಾರಕರಂದು ಇತ್ತ ತ್ರಿವಿಧ ಶಾಪದಿ ಈ ವ-
ಸುಂಧರೆ ಎಂಬೊ ಮಹಾ ಕಾರಾಗೃಹ
ಬಂಧನದಲಿ ಸಿಲ್ಕಿ ದೈತ್ಯರ ವಶನಾಗಿ
ಅಂಧಕಾರವೆಂಬೊ ಅಜ್ಞಾನದಿ
ವೃಂದ ದುಃಖಿಗಳುಂಡು ಬಂಧು ಬಳಗ ಮಿತ್ರ
ರಿಂದ ಬಾಹಿರನಾಗಿ ಸಕಲ ದೋಷ
ವೃಂದಗಳಿಗೆ ನಾನು ಮಂದಿರ ಸ್ಥಾನನಾಗಿ
ನಿಂದಿತನಾದೆ ನೈಜ ಜನರಿಂದ
ಮಂದಹಾಸದಿ ಮಾತ ನಡಿಸಿಕೊಳ್ಳದೆ ಮುಖ್ಯ
ಬಂಧುನಾದ ಹರಿಗೆ ವಿಮುಖನಾಗಿ
ಅಂಧಕನಾಗಿ ಈ ಭೂ ಪ್ರದೇಶವೆಂಬೊ
ಅಂಧಂತಮಸ್ಸಿನಲ್ಲಿ ನೊಂದು ದುಃಖ-
ದಿಂದ ದಾಂಟುವುದಕ್ಕೆ ಇನ್ನು ಸಂದೇಹ ಉಂಟೆ
ಕಂದು ಕಂಧಾರ[1] ನ್ನ ಪ್ರೀತ್ಯಾಸ್ಪದನೆ
ಇಂದ್ರನಾಮಕ ಗುರು ವಿಜಯ ವಿಠ್ಠಲನ್ನ
ತಂದು ತೋರಿಸು ಎನಗೆ ತಡ ಮಾಡದೆ ೧

### ಮಟ್ಟತಾಳ

ಅತಿಶಯವಾದಂಥ ಹಿತದಿಂದಲಿ ನೀನು
ದ್ವಿತಿಯ ರೂಪ[2]ವಾದ ಯತಿರೂಪದಿ ಬಂದು

---

೧. ಕಪದಪ್ಪು ಕಂಧರ = ಕಂಠವುಳ್ಳ ಮಹರುದ್ರ ದೇವರ. ೨. ಇಂದ್ರಾಂಶರಾದ ಜಯತೀರ್ಥರಾಗಿ ಎರಡನೇ ರೂಪದಿ ಅವತರಿಸಿದಾಗ್ಗೆ ಅನುಗ್ರಹಿಸಿದ್ದ ಕಥಾ.

ಆತ್ಮಜನೆ ನೀನು ಅಖಿಳ ಸೌಖ್ಯಗಳಿಂದ
ಕ್ಷಿತಿಯಲಿ ಸುಖವೈದು ಎಂತೆಂತು ನುಡಿದು
ಹಿತ ಮಾಡಿದಿ ನಿನ್ನ ಕರುಣಕ್ಕೆ ನಮೊ ನಮೊ
ಮತಿಯಲಿ ಇದ್ದಂಥ ಮರ್ಮವ ಪ್ರಾರ್ಥಿಸುವೆ
ಸುತರಲಿ ಪಿತ ಮಾಳ್ಪ ಹಿತದ ತೆರದಂತೆ
ಸತಿಯಲಿ ಪತಿ ಮಾಳ್ಪ ಪರಮ ಕರುಣದಂತೆ
ಮಿತಿಯಿಲ್ಲದಲಿಪ್ಪ ಮಿತ್ರತ್ವವ ಮಾಡಿ
ವ್ರತತಿ ಜಾಸನ ಮುಖ್ಯ ಸುರರ ಸಂತತಿಗಳ
ಚಿತ್ತಕೆ ನಿಲುಕದ ಅಗಣಿತ ಮಹಿಮನ್ನ
ಸಥೆಯಿಂದಲಿ ಎನ್ನ ಸಖನೆಂದು ಬಗೆದ[1]
ಖತಿ ಎಣಿಸಿದೆ ಎನ್ನ ಹಟ ನಡೆಸುತ ಪೊರೆದು
ವೃತತಿ ಜಾಂಡಕೆ ಮುಖ್ಯ ತಾನೇ ಜೀವನಾಗಿ
ಅತಿಶಯದಲಿ ಎನ್ನ ಪ್ರಾಣನೆಂದು ನುಡಿದು
ದಿತಿಜನ ವಧೆಗಾಗಿ ಆನಿಲ್ಲದಿಪ್ಪ
ಕ್ಷಿತಿ ನೋಡಲು ಒಲ್ಲೆನೆಂದು ನುಡಿದಂಥ
ಮಿತ್ರನಿಂದಲಿ ಅಗಲಿ ಬಹುಕಾಲವ ಕಳದೆ
ವ್ಯರ್ಥ ಬಾಳಿದಂತಪರಾಧವೆಣಿಸದಲೆ
ಕರ್ತೃನೆನಿಪ ಗುರು ವಿಜಯ ವಿಠಲನ್ನ
ಹೃತ್ಕಮಲದಿ ತೋರಿ ಸುಖದಾಯಕನಾಗು ೨

## ತ್ರಿವಿಡಿತಾಳ

ಕೃಷ್ಣನಿಂದಲಿ ಎನಗೆ ಉತ್ಕೃಷ್ಟ ಸುಖವಯ್ಯಾ[2]
ಕೃಷ್ಣನಿಂದಲಿ ಎನಗೆ ಆನಂದವೊ
ಕೃಷ್ಣನಿಂದಲಿ ನಾನು ಅಸಮ ಬಲಾಢ್ಯನು
ಕೃಷ್ಣನಿಂದಲಿ ಎನಗೆ ಶೌರ್ಯ ಧೈರ್ಯ
ಕೃಷ್ಣನೆ ಎನಗೆ ಪ್ರಾಣ ಕೃಷ್ಣ ಎನ್ನಗೆ ಬಂಧು

---

೧. ಪಾರ್ಥರಾಗಿ ಅವತರಿಸಿದ ಕಾಲ.

೨. ಪಾರ್ಥ ಅರ್ಜುನನಾದಾಗ್ಗೆ ಕೃಷ್ಣನು ಅನುಗ್ರಹಿಸಿದ ಚರಿತೆ ಪ್ರಮೇಯ.

ಕೃಷ್ಣನಿಂದಲಿ ಎನಗೆ ಸುಖ ದುಃಖವೊ
ಕೃಷ್ಣನಿಂದಲಿ ಎನಗೆ ನಿತ್ತೈಶ್ವರ್ಯವು ದೇವ
ಕೃಷ್ಣನಿಂದಲಿ ನಾನು ಮಾನ್ಯನಾಹೆ
ಎಷ್ಟು ಮಾತುಗಳ್ಯಾಕೆ ಕೃಷ್ಣನ ವ್ಯತಿರಿಕ್ತ
ಅಷ್ಟೈಶ್ವರ್ಯವು ಎನಗೆ ಇಷ್ಟವಿಲ್ಲ
ಜಿಷ್ಣು ಸಖನೆಂಬೊ ವಾಕ್ಯ ಸಫಲ ಮಾಡಿ
ಕೃಷ್ಣನ ತಂದು ತೋರೆ ತಡ ಮಾಡದೆ
ವಿಷ್ಣು ನಾಮಕ ಗುರು ವಿಜಯ ವಿಠ್ಠಲರೇಯ ಸಂ–
ತುಷ್ಟನಾಗುವಂತೆ ಮಾಡುವದೂ ೩

### ಅಟ್ಟತಾಳ

ದಾರುಮಯವಾದ ಪ್ರತಿಮದಿ ಗುಣದೋಷ
ಧಾರಕ ನಿಂದಲ್ಲೆ ಜನಿಸುವ ತೆರದಂತೆ
ಸರಸಿಜ ಭವ ಮಿಕ್ಕ ಸುರರಲ್ಲಿ ತನ್ನಾಮ ತತ್ಸ್ಯ(ಚ್ಚ)
ರೀರವ ಧರಿಸಿ ತತ್ತಿಯಗಳ ಮಾಡಿ
ಪರಮ ಸುಖ ಉಣಿಪಿ ಆವಾವ ಕಾಲದಿ
"ನಿತ್ಯೋತ್ಸವ ಭವತ್ಯೇಷಾಂ ನಿತ್ಯ ಶ್ರೀ ನಿತ್ಯಶೋಜಯಃ
ಏಷಾಂ ಹೃದಯಸ್ತು ಭಗವಾನ್ ಮಂಗಳಾಯತನಂ ಹರಿಃ"
ಈ ಪರಿಯಾದ ಸಿರಿಪತಿ ಹೃದಯದಲ್ಲಿ ನಿಲ್ಲೆ
ಕೊರತೆ ಯಾವದು ಎನಗೆ ಮನೋರಥ ಸಿದ್ಧಿಗೆ
ಸುರಧೇನು ಸುರವೃಕ್ಷ ಚಿಂತಾಮಣಿ ಎನಿಪ
ಪರಿಪೂರ್ಣ ಕೃಪಾನಿಧೆ ಗುರು ವಿಜಯ ವಿಠಲನ್ನ
ತ್ವರಿತದಿಂದಲಿ ತೋರೆ ತಡಮಾಡದೆ ದೇವ ೪

### ಆದಿತಾಳ

ಅಂದಿನ ಕಾಲದಲ್ಲಿ ಅವತಾರ ಕಾರ್ಯವನ್ನು
ಒಂದುಳಿಸದಂತೆ ಮಾಡಿ ಮಂದಮತಿಗಳಿಗೆ
ಕುಂದು ತೋರುವಂತೆ ಅಂದವ ತೋರಿ ನಿಜ
ಮಂದಿರವ್ಯೆದಿದ ನಂತರದಲಿ ದುಃಖ

ಸಿಂಧುವಿನೊಳಗೆ ಮುಳುಗಿ ಮಹದೈಶ್ವರ್ಯವನ್ನು
ಒಂದು ತೃಣಕೆ ಬಗೆದು ಯುಗ ಪಂಚ ದಿವಸಕ್ಕೆ
ಬಂಧುಗಳಿಂದ ಕೂಡಿ ಈ ದೇಹ ಪರಿತ್ಯಾಗ
ಅಂದು ಮಾಡಿದದ್ದು ಪ್ರತ್ಯಕ್ಷ ಸಿದ್ಧವಿದೆ
ಇಂದೆನ್ನ ಸೌಖ್ಯಕ್ಕೆ ಸಿರಿ ಕೃಷ್ಣನಲ್ಲದೆ ಇ-
ನ್ನೊಂದು ಮತ್ತುಂಟೆ ಎಂದೆಂದಿಗಾದರಿದೆ
ಕಂದರ್ಪ ಪಿತ ಗುರು ವಿಜಯ ವಿಠ್ಠಲನ್ನ
ತಂದು ತೋರಿಸು ಮನದಿ ತ್ವರಿತದಿ ಕೃಪೆಯಿಂದ ೫

## ಜತೆ

ಸುಖವೈದು ಎಂದು ನೀನು ಅನುಗ್ರಹ ಮಾಡಿದದಕೆ
ಸಖನಾದ ಗುರು ವಿಜಯ ವಿಠ್ಠಲನ್ನ ತೋರಿಪದೊ ॥

(ಶೋಭನ ಸಂ ಆಶ್ವೀಜ ಶುದ್ಧ ೧೦ ಗುರುವಾರ)

## ೧೪೫

## ಧ್ರುವತಾಳ

ಅಂದು ಶರತಲ್ಪ[೧]ದಲ್ಲಿ ಮಲಗಿಸಿದದರಿಂದ
ಇಂದು ದುಃಖದ ಶಯ್ಯಾಲೊರಗಿಸಿದಿಯಾ
ಅಂದು ಶಸ್ತ್ರಾಸ್ತ್ರದಿಂದ ನೊಂದಿಸಿದದರಿಂದ
ಇಂದು ನುಡಿ ಅಂಬಿ[೨]ಲೇತಿಸಿದೆಯಾ
ಅಂದು ಮಾನ್ಯನೆನಿಸಿ ವಂದಿಸಿ ಜನರಿಂದ
ಇಂದು ಖಳರಿಂದ ನಿಂದಿಸಿದೆಯಾ
ಅಂದೆನ್ನ ಪಕ್ಷವೊಹಿಸಿ ಸಖ್ಯನೆನಿಸಿ ಈಗ

---

೧. ಬಾಣಗಳ ಹಾಸಿಗೆ (ಮಂಚ) ೨. ನುಡಿ ಅಂಬು = ವಾಕ್ಯವೆಂಬ ಬಾಣ

ನಿಂದು ನೋಡದಂತೆ ದ್ವೇಷಿಸಿದೆಯಾ
ಅಂದು ಜ್ಞಾನದಿಂದ ಅಧಿಕನೆನಿಸಿ ಈಗ
ಮುಂದೆ ತಿಳಿಯದಂತೆ ಮಾಡಿದಿಯಾ
ಅಂದು ಬಲದಿಂದ ಶೂರನೆನಿಸಿ ಈಗ
ಮುಂದೆ ತಿಳಿಯದಂತೆ ಮಾಡಿದಿಯಾ
ಇಂದು ಕರವನೆ ಎತ್ತಸಮರ್ಥನೆ
ಅಂದು ಶತ್ರುಗಳು ಮೊಗವೆತ್ತಿ ನೋಡುವುದಕ್ಕೆ
ಸಂದೇಹ ಬಡುವರು ಎನ್ನ ಕಡೆ
ಇಂದು ದುಷ್ಟರೆಲ್ಲ ಘುಡು ಘುಡಿಸುತ ಹೃದಯ
ಮಂದಿರದೊಳು ಸೇರಿ ದಣಿಸುವರು
ಇಂದಿರೆ ಪತಿ ನಿನ್ನಿಂದ ಮಾಡಿದ ಕ್ಲಪ್ತ
ಸಿಂಧುಜಾದ್ಯ[1]ರೆಲ್ಲ ಮೀರಲೊಶವೆ
ಕಂದರ್ಪಪಿತ ನಿನ್ನ ನೆರೆನಂಬಿದವರಿಗೆ
ಕುಂದು ಮಾಡುವದು ಛಂದವೇನು
ಬಂಧು ಅನಿಮಿತ್ಯ ಗುರು ವಿಜಯ ವಿಠ್ಠಲರೇಯ
ಇಂದು ಎಂದೆಂದು ನೀನೆ ಗತಿಯೋ ೧

## ಮಟ್ಟತಾಳ

ಕುರುವೃದ್ಧನ ದುಃಖ ಕಾರಣಾಗಿದ್ದ
ವರ ಸತಿ ನಿರ್ಮಿಸಿದಾ ತೆರ ಇಂದಿಗೆ ಎನ್ನ
ಗರುವ ನೀಗುವದಕ್ಕೆ ಇವಳ ನೇಮಿಸಿ ಇನಿತು
ಶರ ಸಮ ನುಡಿ ಮಂಚದಲ್ಲೊರಗಿಸಿದೆಲೊ ದೇವ
ಸುರರೆಲ್ಲರು ಅಂದು ಮುನಿದು ಶಾಪವನೀಯೆ
ಪರಿ ಮೂರರಲಿಂದ ಸರಿ ಮಾಡಿದಿ ಸ್ವಾಮಿ
ಹರಿ ನಿನ್ನಿಂದಲೆ ಪರ ಸ್ವಪ್ನದಿ ತಿಳಿದು
ಮರಹು ಪುಟ್ಟಿತು ನಿನ್ನ ಬಂಧಕ ಶಕ್ತಿಯಲಿ
ಸರಿ ಹೋಯಿತು ಪೂರ್ವದ ಕರ್ಮದ ಫಲವೆಲ್ಲ

---

೧. ಲಕ್ಷ್ಮ್ಯಾದಿಗಳು

ಮರಳೆ ಮರಳೆ ಇದನು ಹಂಗಿಪದು ಸಲ್ಲ
ನರ ಸಾರಥಿ ಗುರು ವಿಜಯ ವಿಠ್ಠಲರೇಯ
ಕರುಣ ಮಾಡಲಿಬೇಕು ಇನ್ನು ಕರ ಪಿಡಿದು ೨

## ತ್ರಿವಿಡಿತಾಳ

ಪರಲೋಕಕ್ಕೆ ಬಾ ಎಂದು ಸೂಚಿಸಲಾಗಿ
ವರಭೂಮಿ (ಪರಭೂಮಿ) ವಾಸನಾ ತ್ಯಜಿಸಿದಾಗಿ
ಪರಿಯು ಇನಿತು ಮಾಡಿ ಇರಲಿ ವಲ್ಲೆನೊ ಎಂದು
ವರಲುವಂತೆ ಮಾಡಿ ನೋಡಿದಿಂದು
ಬರುವ ಹೋಗುವದಕ್ಕೆ ಸ್ವಾತಂತ್ರ್ಯ ಎನಗುಂಟೆ
ಹರಿ ನೀ ನಡಿಸಿದಂತೆ ನಡೆವರೆಲ್ಲ
ಸರಿ ಹೋಯಿತೇ ನಿನ್ನ ಅನಿಮಿತ್ಯ ಸಖತನ
ಸ್ಥಿರವಾಗದಿರೆ ನಿನ್ನ ವಚನ ವ್ಯಭಿ-
ಚಾರವಾಗದೇನೊ ವಿಬುಧರಿಗಸಮ್ಮತ
ತೋರದಂತೆ ಮಾಡು ಕೃಪೆಯ ನೀಡು
ಪರಮ ಪುರುಷ ಗುರು ವಿಜಯ ವಿಠ್ಠಲರೇಯ
ಜರಿದು ನೋಡಲಿ ಬೇಡ ಕಠಿಣತ್ವ ಬಿಡು ಬಿಡು ೩

## ಅಟ್ಟತಾಳ

ಹಿಂದೊಂದು ಬಗೆಯಿಂದ ಗುರುದ್ರೋಹ ಘಟಿಸಿದಿ
ಇಂದೊಂದು ಪರಿಯಲ್ಲಿ ಒದಗಿಸಿದೆ ಅದೆ
ಮುಂದೆ ತಿಳಿಯದ ಮಂದ ಮನುಜಂಗೆ
ಪೊಂದಿದ ಪ್ರಾರಬ್ಧ ಜಾರಿ ಪೋಗುವದೆ
ಒಂದಾದರು ನಿನ್ನಿಂದ ವಿಹಿತವಾಗಿ
ಎಂದಿಗಾದರು ಮಾಡಿ(ಡ)ದ್ದು ನಿಜವಿತ್ತೆ
ಹಿಂದೆ ಇಂದು ಮುಂದೆ ಬಂದ ಪಾಪ ಪುಣ್ಯಾ
ತಂದೆ ನಿನ್ನ ಪಾದ ದ್ವಂದ್ವಾರವಿಂದಕ್ಕೆ
ಸಂದೇಹವಿಲ್ಲದೆ ಸಮರ್ಪಣೆ ಮಾಡಿದೆ
ಕುಂದುಗಳೆಣಿಸದೆ ಪೊರಿಯಬೇಕೆನ್ನನು ಮು-

ಕುಂದ ಮುರಾಂತಕ ಗುರು ವಿಜಯ ವಿಠ್ಠಲರೇಯ
ಪೊಂದಿಸು ಭಕ್ತರ ಸಂಗ ಸುಖದಲ್ಲಿ ೪

**ಆದಿತಾಳ**

ಮಮಕಾರದಿಂದಲೆ ಅಂಶಿ[೧]ಗೆ ಭಿನ್ನನಾದೆ
ಮಮಕಾರದಿಂದಲೆ ಅಂಶಕ್ಕೆ[೨] ಭಿನ್ನನಾದೆ
ಮಮಕಾರದಿಂದಲೆ ಪದವಿಗೆ ದೂರನಾದೆ
ಮಮಕಾರದಿಂದಲೆ ಜನುಮವೆನಗೊದಗಿತು
ಮಮಕಾರದಿಂದಲೆ ಸೌಖ್ಯವ ತೊಲಗಿತು
ಮಮಕಾರದಿಂದಲೆ ಜ್ಞಾನತಿರೋ ಭಾವ
ಮಮಕಾರದಿಂದಲೆ ಸಕಲ ದುಃಖಾಶ್ರಯ
ಮಮಕಾರದಿಂದಲೆ ನಾಖತಿ[೩]ಯಿಲ್ಲ ಜೀವನಕ್ಕೆ
ನಮಮ ನಮಮ[೪] ಎಂದು ದೃಢವಾಗಿ ತಿಳಿದರ್ಗೆ
ಶ್ರಮವಿಲ್ಲ ಶ್ರಮವಿಲ್ಲ ಶ್ರುತಿ ಸ್ಮೃತಿ ಸಮ್ಮತ
ಅಮರವಂದಿತ ನಿನ್ನ ಮಾಯವೆಂಬೊ ಪಾಶದಲ್ಲಿ
ಅಮರಾಧ್ಯಕ್ಷರೆಲ್ಲ ಪ್ರವಿಷ್ಟರಾಗುವರು
ಕುಮತಿಯು ಎನ್ನಿಂದ ದಾಟುವ ಬಗೆಯೆಂತೊ
ಕಮಲಾಪ್ತ ತೇಜ ತವಪಾದಕ್ಕೆ ನಮೊ ನಮೊ
ಮಮಕಾರ ಕೊಡದಿರು ಇನ್ನಿಂದಿಗಾದರು
ಶ್ರೀ ಮನೋಹರ ಗುರು ವಿಜಯ ವಿಠ್ಠಲರೇಯ
ಶಮ ದಮಾದಿಗಳಿತ್ತು ಸೇರಿಸು ನಿಜ ಸ್ಥಾನ ೫

**ಜತೆ**

ಸತ್ಯ ಸಂಕಲ್ಪಕ್ಕೆ ಹಾನಿ ಎಂದಿಗೂ ಉಂಟೆ
ನಿತ್ಯ ತೃಪ್ತನೆ ಗುರು ವಿಜಯ ವಿಠ್ಠಲರೇಯ ॥

(ರಾಕ್ಷಸ ಸಂ ॥ ಭಾದ್ರಪದ ಶುದ್ಧ ೧೦ ಶುಕ್ರವಾರ)

---

೧. ಮೂಲ ರೂಪಕ್ಕೂ ೨. ಅವತಾರ ರೂಪಕ್ಕೂ ೩. ಖತಿ = ಕೋಪ, ಸಿಟ್ಟು. ನಾಖತಿ = ಶಾಂತಿ ೪. ನಾನಲ್ಲ, ನನ್ನದಲ್ಲ

# ೧೪೬

[ಭಾರತ ಕಥಾ, ಹಿಂದಿನ ಜನುಮದಲ್ಲಿ ಹರಿ ಕೃಪೆ ಮಾಡಿದ್ದು, ಇಂದಿನ ಜನುಮದಲ್ಲಿ ಆ ಚತುರ್ದಶ ವರುಷ ಕಾಲ ಕಳೆದದ್ದು, ಅನಂತರ ಲೌಕಿಕದಲ್ಲಿ ಪಾಪಘಟನೆಯಾದದ್ದು ಕ್ಷಮಿಸು ತನು-ಮನ-ಧನ ನಿನಗೆ ಸಮರ್ಪಣೆಗೈವೆ. ಶ್ರೀಹರಿಯೇ ಕೃಪೆ ಮಾಡೆಂದು ಪ್ರಾರ್ಥನಾ.]

## ಧ್ರುವತಾಳ

ಅಂದು ಮಾನ್ಯರನ್ನು ಆವಾವ ಬಗೆ
ಯಿಂದ ನಿಂದ ನಿರ್ಘ್ರಣವಾದ ವೃತ್ತಿಯಲ್ಲಿ
ಕೊಂದ ಕಾರಣದಿಂದ ಈ ದೇಹದಲ್ಲಿ ನಿನಗೆ
ವೃಂದ ದುಃಖಗಳ ವುಣಿಸಿ ಕೊನಿಗೆ
ತಂದೆ ಲೋಕ[1]ವನ್ನು ತ್ವರಿತದಿ ಐದಿಸುವೆ
ನೆಂದು ನುಡಿದ ಮಾತು ನಿನಗೆ ಮಾತ್ರ
ಛಂದವಾಗಿದೆ ನೋಡು ಮರುಳೆ ನೋಡುವರಿಗೆ
ಅಂದವಾಗದಯ್ಯಾ ಅಧರ್ಮವಿದು
ಒಂದು ಕಾರ್ಯವ ಮಾಡಿ ಅದರ ಫಲವನ್ನು
ಬಂದು ಕೂಡಲಿಯೆಂಬ ಭ್ರಾಂತಿಯಾಗೆ
ಕುಂದು ಲೇಶಗಳು ಎಲ್ಲಿ ಪೊಕ್ಕರು ಬಿಡದೆ ಸಂ-
ಬಂಧವಾಗವು ಸಹಜವಿದು
ತಂದೆ ಈ ಪರಿ ಎನಗೆ ಇಲ್ಲದಿರಲು ಆವ
ವೃಂದ ದುಃಖವನುಣಿಪ ದಾವ ಸೊಬಗೊ
ಮಂದರೋದ್ಧರ ಧರ್ಮ ಮರ್ಯಾದಿಯಿಂದ ನೋಡೆ
ಸಂಧಿಸಿಕೊಳ್ಳದಯ್ಯಾ ದೋಷ ಎನಗೆ
ಇಂದಿರ ಪತಿ ನಿನ್ನ ಸ್ವಾತಂತ್ರವಾದ ಶಕುತಿ
ಇಂದಲ್ಲಿ ಬಂದು ಕೂಡೆ ಯತನವೇನೊ

---

೧. ಐತಿಹಾಸಿಕ, ಇಂದ್ರನ ಲೋಕ

ಮಂದನಾದವ ನಾನು ತಪ್ಪಿಸಿಕೊಂಡೆನೇನೊ
ಕಂದರ್ಪ ಕೋಟಿ ರೂಪ ಸುಪ್ರತಾಪಾ
ಹಿಂದಿನ ಕಾಲದಲ್ಲಿ ವಲ್ಲೆನೆಂದರೆ ಎನಗೆ
ಪೊಂದದಿದ್ದಡೆ ಈಗ ನುಡಿದ ಮಾತು ಎ–
ನ್ನಿಂದಲಿ ಪರಿಹಾರ ಮಾಡಿಕೊಂಬುವೆನು
ಹಿಂದೆ ಇಂದು ಮುಂದೆ ಯೆಂದೆಂದಿಗೆ
ಬಂಧು ನಿನ್ನಿಂದಲೆ ಪ್ರೇರಿತನಾಗಿ ಸಕಲ
ವೃಂದ ಸುಖ ದುಃಖವುಂಟೆ ದೇವಾ
ಸಿಂಧುಶಯನ ಗುರು ವಿಜಯ ವಿಠ್ಠಲ ನಿನಗೆ ಸರಿ
ಬಂದದ್ದು ಮಾಡೊ ನಿನ್ನ ನಂಬಿದವನೊ ೧

## ಮಟ್ಟತಾಳ

ತನು ಮನ ಕರಣಗಳು ಕರಣಜ ವ್ಯಾಪಾರ
ಮನೆ ಧನ ಮೊದಲಾದ ಕೀರ್ತ್ಯಪಕೀರ್ತಿಗಳು
ವನಜ ಪಾದಗಳಿಗೆ ನಿರುತ ವೊಪ್ಪಿಸಿಕೊಟ್ಟು
ನೀನೆ ಗತಿಯೆಂದು ನೆರೆ ನಂಬಿದವನ
ವನ[1] ದೊಳಗೆ ಅದ್ದು ಕ್ಷೀರದೊಳಗೆ ಅದ್ದು
ತನು ಮನ ನಿನ್ನದು ಗುರು ವಿಜಯ ವಿಠ್ಠಲರೇಯ
ಮನ ಬಂದದ್ದು ಮಾಡೊ ಏನಾದರು ಒಳಿತು ೨

## ತ್ರಿವಿಡಿತಾಳ

ಜನುಮಾರಭ್ಯವಾಗಿ ಚತುರ್ದಶಬ್ದವು ಕರ್ಮ
ಅನಿಯಮ್ಯನಾಗಿ ಮರದೆ ನಿನ್ನ
ಇನಿತು ಕಾಲ[2]ದಿಂದ ಯವ್ವನ ಮದದಿ ಪರ
ವನತೇಯ ಅಭಿಲಾಷದಲ್ಲಿ ಶಿಲ್ಕಿ ವರ
ಣನಾಪೇಕ್ಷದಿಂದ ಅವರ ಉತ್ತಮರೆನದೆ
ಘನವಾದ ದೋಷವೆಂಬ ಪರಿಜ್ಞಾನವಿಲ್ಲದಲೆ

೧. ನೀರು ೨. ಪೂರ್ವ ೪೦ ವರ್ಷ ಪರಿಯಂತರ ಆದ ಕೃತ್ಯಗಳ ಕ್ಷಮಾಪನೆ.

ಇನಿತು ಕಾಲವ ಕಳದೆ ಕೆಲವು ಕಾಲ
ಧನದಾಶದಿಂದಲಿ ಲೌಕಿಕ ಅನುಸರಿಸಿ
ಜನರ ಹಿಂಸವ ಮಾಡಿ ಪಾಪ ಪುಣ್ಯ
ಮನದೊಳು ಸ್ಮರಿಸದೆ ಇಪ್ಪ ಕುನರರಿಗೆ
ಇನಕೋಟಿ ತೇಜ ನನ್ನ ಸ್ಮರಣೆ ಎಂತೊ
ಅನಿತು ಕಾಲದ ಮಧ್ಯ ಮಾಡಿದ ಅಘರಾಸಿ
ಗಣನೆ ಮಾಡುವುದಕ್ಕೆ ನೀನೆ ಬಲ್ಲಿ
ಎಣೆ ಯಾವುದಯ್ಯಾ ಎನ್ನ ದೋಷ ಸಮೂಹಗಳಿಗೆ ಬ-
ವಣೆ ಬಟ್ಟೆನು ಇನಿತು ಭವದಿ ಬಂದು
ಮನುಜರ ಕಂಗಳಿಗೆ ಭಕತನ ತೆರದಿ ತೋರಿ
ಮನದಿ ನಿನ್ನ ಕುರುಹ ಪಥವ ತಿಳಿದೆ
ಬಿನಗು[೧] ಡಂಬಕನಾಗಿ ಚರಿಸಿದೆ ಕೆಲವು ಕಾಲ ಕ-
ರಣಗಳು ಎನಗೆ ಪ್ರತಿಕೂಲವಾಗಿ
ಕನಸಿನಲ್ಲಾದರು ನಿನ್ನ ಕಾಣದೆ ಪೋದೆ
ಮುನಿಗಳ ಶಿರೋರನ್ನ ಗುಣಪೂರ್ಣನೆ
ಅನುಜನ ವಿಯೋಗ ಜನಿತವಾದ ದುಃಖ
ಕ್ಷಣಕ್ಷಣಕೆ ಹೃದಯ ಭೇದಿಸುತ್ತ
ಶಣಿಸುವರು ಇದನು ಮನೆ ಮಾಡಿ ದೈತ್ಯರು
ಇನಿತರೊಳು ಒಂದು ವ್ಯಾಜದಿಂದ
ಜನರಿಂದ ನಿಂದಿಸಿದಿ ತೃಣಕ ಸಮಾನ ಮಾಡಿ
ಶಣಸಿದಿ[೨] ಬರಿದೆ ನೀನು ಮುನಿದು ನೋಡಿ
ಜನುಮಾರಭ್ಯವಾಗಿ ಇಂದಿನ ಪರಿಯಂತ
ಖಣಿಯಾದ ನಿರ್ದಯ[೩] ತಾಳಿ ನೀನು
ವನಜಾಕ್ಷ ನಿನ್ನ ಮುಖದಿ ನುಡಿದ ತೆರದಿ ಎನಗೆ
ಉಣಿಸಿದಿ ದುಃಖಗಳ ಅಪರಿಮಿತ
ನೀನೆವೆ ಗತಿ ಎಂದು ನೆರೆ ನಂಬಿದವನ
ಜನುಮ ಜನುಮದ ಪುಣ್ಯ ರಾಶಿಗಳನು

---

೧. ಕುತ್ಸಿತ, ಕೆಟ್ಟ ೨. ದುಃಖ ಪಡಿಸಿದಿ ೩. ನಿರ್ದಯವಾದ ಖಣಿ = ನೀನು ದಯಾಪೂರ್ಣನಾದರೂ, ನಿರ್ದಯ ಉತ್ಪತ್ತಿಗೆ ಸ್ಥಾನನಾದಿ

ಹನನ ಮಾಡುವದು ಇದು ಘನತಿಯೇ ದೇವ
ಸನಕಾದಿ ಮುನಿನುತ ಸಾರ್ವಭೌಮಾ
ತನು ಮನದೊಡಿಯ ಗುರು ವಿಜಯ ವಿಠ್ಠಲರೇಯ
ಏನು ಬಂದರು ನಿನ್ನ ಬಿಡಲಿಲ್ಲವೋ ೩

## ಅಟ್ಟತಾಳ

ಒಡಿಯನು ಕೋಪಿಸಿ ಅಡಿಗಳರ್ಚಿಪರ
ತಡಿಯದ ಕಾರಾಗೃಹದಲ್ಲಿ ಸೇರಿಸಿ ನಿ–
ರ್ಭಿಡಿಯದಿಂದಲಿ ಕ್ರೂರ ದೈತ್ಯರಿಗೊಪ್ಪಿಸಿ
ಕಡು ಕೋಪದಿಂದಲಿ ಶಿಕ್ಷವ ಮಾಡಿಸಿ
ಬಿಡಿಸಿಕೊಂಬುವರಾರು ಹಿತ ಮಾಡುವವರಾರು
ಸಡಗರದಿಂದಲಿ ನೋಡೆ ಕರುಣ ಮಾಡುವಾಗ
ಎಡಬಲದಲಿ ಆಪ್ತರಾಗಿಹರೆಲ್ಲ
ಸಡಲ ಬಿಡುವಾಗ ಅವರೆಲ್ಲ ಎನ್ನನು
ಕಡೆಗಣ್ಣ ನೋಟದಿ ನೋಡರೊಮ್ಮಿಗೆ ದೇವ
ಮೃಡ ಮುಖ್ಯ ಸುರರನ್ನ ಶಿಕ್ಷ ರಕ್ಷಕ ನಿನ್ನ
ಒಡಿಯತನದ ಶಾಸನವನ್ನು ಇನಿತಿರೆ
ಬಿಡಿಸಿಕೊಂಬುವರಾರು ಭವದಿಂದಲ್ಲಿ ಎನ್ನ
ಗೂಢ ಕರುಣಿ ನಿನ್ನ ಮನ ಬಂದುದು ಮಾಡೊ
ಜಡಜ ಸಂಭವ ನುತ ಗುರು ವಿಜಯ ವಿಠ್ಠಲರೇಯ
ಜಡಮತಿ ನಾ ನಿನ್ನ ತುತಿಸಬಲ್ಲೆನೆ ಹರೆ ೪

## ಆದಿತಾಳ

ಆವಾವ ಕಾಲದಲ್ಲಿ ದೇಹ ನಿನ್ನದೆಂಬೊ ಮಾತು
ಕೇವಲ ದೃಢವಾಗಿ ನುಡಿದದ್ದು ನಿಜವಾಗೆ
ಧಾವತಿಗೊಳಿಸದಲೆ ಈ ವ್ಯಾಳ್ಯಗೊದಗುವದು
ಸೇವಕನಾದ ಮೇಲೆ ದೂರ ನೋಡುವದೇ(ದ್ಯಾ)ಕೆ
ಪಾವನ್ನ ಮೂರ್ತಿ ಗುರು ವಿಜಯ ವಿಠ್ಠಲರೇಯಾ
ಕಾವದು ಅಪರಾಧ ಸಾಸಿರವಿರಲ್ಯಾಕೆ ೫

ಜತೆ

ಗಾತ್ರ ನಿನ್ನದು ದೇವಾ ಮನ ಬಂದ ತೆರ ಮಾಡೊ
ಸೂತ್ರಧಾರನೆ ಗುರು ವಿಜಯ ವಿಠ್ಠಲ ಪ್ರೀಯಾ ॥

(ನಳ ನಾಮ ಸಂ ॥ ಚೈತ್ರ ಬ ॥ ೧೦ ಬುಧವಾರ)

## ೧೪೭

[ಅಪರೋಕ್ಷ ತಿರೋಧಾನ ಕಾಲ ಶ್ರೀಹರಿಯು ಮೃದು ನುಡಿಯಿಂದ ಸಂತೈಸಿ, ಆನಂದವಾದರೂ ಶ್ರೀ ಬಿಂಬನನ್ನು ಹೃದಯದಿ ಕಾಣದಿಪ್ಪದು ಮಹಾ ದುಃಖ ತಮವು. ತ್ವರಿತ ಸಂದರುಶನ ಕೊಡು. ಇಹದ ಸೌಖ್ಯ ಒಲ್ಲೆ. ಹಿಂದೆ ಎರಡು ಜನ್ಮದಲ್ಲಿ ಸಲಹಿದಂತೆ ಒದಗು. ವರವಿತ್ತದ್ದು ಸತ್ಯ ಮಾಡು. ನಿನ್ನ ಕಾಣದಿಪ್ಪ ಕಾಲ ಬ್ರಹ್ಮಕಲ್ಪವಾಗಿ ಕಳೆದೆ. ನಿನ್ನ ನೋಡುವ ಸುಖ ಮುಕ್ತಿ ಸುಖವೆಂಬ ಸ್ತೋತ್ರ.]

ಧ್ರುವತಾಳ

ಇಂದು ಎನಗೆ ನೀನು ನುಡಿದ ಮಾತುಗಳಿಂದ ಆ-
ನಂದವಾಯಿತು ಮನಕೆ ಅಂಬುಜಾಕ್ಷ
ಕುಂದು ಮಾಡಿದಿ ಎಂಬ ಕಾರಣದಿಂದ ಮನಕೆ
ಸಂದೇಹ ಎಳ್ಳಿನಿತು ಇಲ್ಲವಯ್ಯಾ
ಒಂದು ಮಾತ್ರವು ಉಂಟು ವೈಶೇಷವಾದದ್ದು
ಇಂದಿರಾಪತಿ ನಿನ್ನ ಕಾಣದಿಪ್ಪ
ವೃಂದ ದುಃಖವು ಮಾತ್ರ ಸಂದು ಸಂದುಗಳಲ್ಲಿ
ನಿಂದು ವ್ಯಾಪಕವಾಗಿ ಬಾಧಿಸುವದು
ಸಿಂಧು ಕರುಣಿ ನಿನಗೆ ನೀನೆ ಒಲಿದು ಎನ್ನ
ದಂಧನ[1] ಮಾಡದಲೆ ದಯದಿ ನೋಡಿ
ಸಂದರುಶನವಿತ್ತು ತ್ವರಿತದಿಂದಲಿ ಎನ್ನ
ಮಂದಿರ ಸೇರುವಂತೆ ಮಾಡುವದು

೧. ದಂಧನ = ದಹಿಸದಲೆ, ಪಾಪಗಳಿಂದ ಬಾಧಕವಾಗದಂತೆ

ಮಂದರಧರ ಗುರು ವಿಜಯ ವಿಠ್ಠಲರೇಯಾ
ಬಂಧು ನೀನೆವೆ ಅನ್ಯ ಚಿಂತೆ ಯಾಕೆ ೧

## ಮಟ್ಟತಾಳ

ಇಹ ಸೌಖ್ಯವು ಎನಗೆ ಆವಾವದು ಬರಲು
ನೇಹವಾಗದು ಕೇಳಿ ನಿನ್ನ ಪಾದವೆ ಸಾಕ್ಷಿ ಹೃ-
ದ್ಗುಹವಾಸಿಗೆ ಆನು ಪೇಳುವದೇನೊ
ಮೋಹ ಮಾತ್ರಕ ಉಂಟು ಜಾರಿ ಪೋದವನಲ್ಲಿ
ಶ್ರೀಹರಿ ನಿನ್ನಯ ಇಚ್ಛೆಯಲಿಂದಲಿ
ಅಹರ್ನಿಶದಲ್ಲೆನ್ನ ಬಾಧಿಪದು ಮಮತೆ
ಮಹ ಮಹಿಮನೆ ನಿನ್ನ ಶಾಸನದಲ್ಲಿ ಎನ್ನ
ದೇಹದ್ವಯದಲ್ಲಿ ತಪ್ಪದೆ ಒದಗಿಸಿದೆ
ಗಹನ ಕರುಣಿ ನಿನ್ನ ಬಂಧಕ ಶಕುತಿಯನು
ಕುಹಕ ಮಾನವ ನಾನು ಮೀರಲಿ ಬಲ್ಲೆನೆ ವ್ಯ-
ವಹಿತ[1] ನೀನಾಗಿ ನೋಳ್ಪ ಕಾರಣದಿಂದ ತಿ-
ರೋಹಿತವಾದ ಜ್ಞಾನವುಳ್ಳವನಾಗಿ
ಮೋಹ ಜಾಲದಲ್ಲಿ ಸಿಲ್ಕಿದೆನೊ ಮಿಕ್ಕ
ಅಹಿಕ ಸುಖದಿ ಎನಗೆ ಸ್ಪೃಹವಾಗದೊ ಹರಿಯೇ
ವಿಹಿತ ಮಾಳ್ಪೆನೆಂಬ ಕೃಪೆ ನಿನ್ನಲ್ಲಿತ್ತೆ
ಇಹಪರ ಸೌಖ್ಯಕ್ಕೆ ನೀನೆ ಗೋಚರನಾಗೆ
ಬೃಹತಿ ನಾಮಕ ದೇವ ಗುರು ವಿಜಯ ವಿಠ್ಠಲರೇಯ
ಅಹರಹದಲಿ ಇದನೆ ಅಪೇಕ್ಷವ ಮಾಳ್ಪ ೨

## ತ್ರಿವಿಡಿತಾಳ

ಇಂದಿರಾಪತಿ ಕೇಳೊ ಎನ್ನ ವೃತ್ತಾಂತವ
ಸಂದೇಹವಿಲ್ಲದಲೆ ಬಿನ್ನೈಸುವೆ
ಒಂದು ಕ್ಷಣ ನಿನ್ನ ಕಾಣದಲಿಪ್ಪ ಕಾಲ

---

೧. ವ್ಯವಹಿತ = ಬೇರೆ ಇರುವವನಾಗಿ, ದೂರನಾಗಿ

ಮಂದಜಾಸನ ಕಲ್ಪವಾಗಿ ಕಳೆವೆ
ಸಿಂಧುಶಯನ ನಿನ್ನ ಕಾಣುತಲಿಪ್ಪ ನಿರಯಾ
ಎಂದೆಂದು ಎನಗಿರಲಿ ನಿನ್ನ ಸಾಕ್ಷಿ
ಮಂದಿ ಮಾತಿಗೆ ನೀನು ಮುನಿದ ಕಾರಣದಿಂದ
ವೃಂದ ಸುಖವನೀವ ಭರತಖಂಡ
ಇಂದು ಸಾಧನಿ ಭೂಮಿ ನರಕ ಸಮಾನವೆನಿಸಿ
ವೃಂದ ದುಃಖವನುಂಬೆ ಪ್ರತಿದಿನ
ತಂದೆ ಎನಗೆ ಇತ್ತ ವರ ಸತ್ಯ ಮಾಳ್ಪನಾಗಿ ಹೃ–
ನ್ಮಂದಿರದೊಳಗೆ ಪೊಳೆದು ಆನಂದವೀಯೊ
ಕಂದರ್ಪ ಕೋಟಿ ರೂಪ ಗುರು ವಿಜಯ ವಿಠ್ಠಲರೇಯಾ
ಬಂಧು ನೀನಲ್ಲದಲೆ ಅನ್ಯನೇನೋ ೩

## ಅಟ್ಟತಾಳ

ನಿನ್ನ ನೋಡುವ ಸುಖ ಮುಕ್ತಿಯ ಸುಖವಯ್ಯಾ
ನಿನ್ನ ನೋಡುವ ಕಾಲ ಮುಕ್ತಿಯಾದ ಕಾಲ
ನಿನ್ನ ನೋಡುವ ಮನುಜ ತ್ರೈಲೋಕದಲಿ ಪೂಜ್ಯ
ಘನ್ನಮಹಿಮ ಗುರು ವಿಜಯ ವಿಠ್ಠಲರೇಯಾ
ನಿನ್ನ ನೋಳ್ಪ ಭಾಗ್ಯ ಎಣಿಕೆ ಮಾಡುವನಾರೊ ೪

## ಆದಿತಾಳ

ಪಾಹಿ ಪಾಂಡವ ಪಾಲ ಸೌಜನ್ಯ ಮಂದಾರ
ಪಾಹಿ ಗಜರಾಜ ಮಹಾ ಭಯ ನಿವಾರ
ಪಾಹಿ ಭುವನ ರಕ್ಷ ಔದಾರ ಗಂಭೀರ
ಪಾಹಿ ಅಣುಮಹ ಸಮಸ್ಥಿತ ಸಾಕಾರ
ಪಾಹಿ ಸಮಾಧಿಕ ವರ್ಜಿತ ಶುಭಕಾರ
ಪಾಹಿ ಅಣಿಮಾದಿ ಐಶ್ವರ್ಯ ಆಪೂರ್ಯ
ಪಾಹಿ ಏಕಮೇವ ದ್ವಿತೀಯ ಧುರ (ದೂರಾ) ಧೀರ
ಪಾಹಿ "ಯೋನಃ ಪಿತಾ ಜನಿತಾ ಯೋ ವಿಧಾತ"

ಪಾಹಿ ಲೋಕಾತೀತ ತ್ರೈಗುಣ್ಯ ವರ್ಜಿತ
ಪಾಹಿ ಭೂತ ಭವ್ಯ ಭವನ್ನಾಥ ಸುಖ್ಯಾತ
ಪಾಹಿ ಪಾರ್ಥ ಪ್ರಿಯ ಪರಮಾಪ್ತ ಸಾರಥ್ಯಾ
ಪಾಹಿ ಪಾಹಿ ಆರ್ತ ರಕ್ಷಾಮಣಿ ತತ್ಪರ
ಪಾಹಿ ಯುಗಾದಿ ಕೃದ್ಯುಗವರ್ತ ವಿಜ್ಞೇಯ
ಪಾಹಿ ಪಾಹಿ ನಾಸತು ನಾ ಅಸತು[1]
ಪಾಹಿ ಸ್ಥೂಲ ಭುಕು ನಿರಾಮಯ ನಿರ್ಗುಣ
ಪಾಹಿ ಲೋಕವತು ಕ್ರೀಡಾಗುಣ ವಿಶಿಷ್ಟ
ಪಾಹಿ ಶಫರಾದಿ ಅನಂತಾನಂತವತಾರ
ಪಾಹಿ ಪಾಹಿ ತವ ಚರಣಕ್ಕೆ ನಮೊ ನಮೊ
ಲೋಹಿತಾಕ್ಷ ಗುರು ವಿಜಯ ವಿಠ್ಠಲ ರೇಯಾ
ಅಹರಹದಲ್ಲಿ ಎನ್ನ ಮನದಲ್ಲಿ ನಿಲ್ಲುವದು ೫

**ಜತೆ**

ಅಪೇಕ್ಷೆ ಎನಗಿದೆ ನಿನ್ನ ಪಾದವೇ ಸಾಕ್ಷಿ
ಉಪೇಕ್ಷೆ ಮಾಡದಲೀಯೋ ಗುರು ವಿಜಯ ವಿಠ್ಠಲರೇಯ ॥

(ಪಿಂಗಳನಾಮ ಸಂ ॥ ಚೈತ್ರ ಶುದ್ಧ ೫ ಗುರುವಾರ)

## ೧೪೮

[ಅರ್ತಿವಮೇಪ್ರಿಯ ಎಂಬ ನುಡಿಯು ಸುಖಪ್ರದವಾದರೂ ಎನ್ನ ಮನಸ್ಸಿಗೆ ಆನಂದವಾಗದು. ನಿನ್ನ ಕಾಣದಿಪ್ಪದೆ ದುರ್ದಿನ. ನಿನ್ನ ಕಾಣುವದೆ ಮುಕ್ತಿ ಸುಖವು. ಇನ್ನಾದರು ಮನ್ನಿಸಿ ರಕ್ಷಿಸು. ಅಪರೋಕ್ಷ ಕೊಡು, ನಿನ್ನ ಸಂದರುಶನ ಮಾಡಿಸು.]

---

೧. ಸತ್ಪದಾರ್ಥದಿಂದ ಭಿನ್ನ, ನಾ ಅಸತು = ಶಶಿ ವಿಷಾಣಾದಿ ಅಸತ್ಪದಾರ್ಥದಿಂದ ಭಿನ್ನ, ಅಥವಾ ಮೂರ್ತಾ ಮೂರ್ತ ಪದಾರ್ಥಗತ. ಮೂರ್ತಂ = ಸದತಿ ಸಂಪ್ರೋಕ್ತಮ ಮೂರ್ತಂ ತ್ವ ಸದುಚ್ಯತೆ.

## ಧ್ರುವತಾಳ

"ಭವಾಮಿ ನ ಚಿರಾತ್ಪಾರ್ಥ" ಎಂತೆಂದು ನುಡಿದ ನುಡಿ
ಕೇವಲ ಸುಖಪ್ರದವಾದದೇನು
ಭಾವದಲ್ಲಿ ಹರುಷ ಪುಟ್ಟದಾಯಿತು ಎನಗೆ
ಸಾವಧಾನದಿ ಕೇಳೊ ಬಿನ್ನೈಸುವೆ
ಸಾವಿರ ವೃಶ್ಚಿಕದ ಸ್ಪರ್ಶದಂತೆ ದುಃಖ
ಪ್ರವಹದೊಳಗೆ ಮುಳುಗಿ ಆಪ್ತನೆಂದು
ದೇವ ದೇವನೆ ನಿನ್ನ ಕೂಗಿ ಕಾಣದದಕೆ ಅ–
ವ್ಯವಧಾನ[1] ದಿಂದ ಬಂದು ಎನ್ನ
ನೋವುಗಳೋಡಿಸಿ ಆದರಿಸದೆ ಬರಿದೆ
ನೀ ಔಪಚಾರದಿಂದ ನುಡಿವದೇನೊ ಹರಿಯೇ ಅ–
ತೀವಮೇ ಪ್ರೀಯನೆಂದು ನೀ ನುಡಿದ ವಾಕ್ಯವನ್ನು
ಆವಾವ ಕಾಲದಲ್ಲಿ ಸಫಲ ಮಾಡು
ಕಾವ ಕರುಣಾನಿಧೆ ಗುರು ವಿಜಯ ವಿಠ್ಠಲ ರೇಯ
ಅವ್ಯವಹಿತವಾದ ವಿಭವ ಪೂರ್ಣ ೧

## ಮಟ್ಟತಾಳ

ನಿನ್ನಿಂದಲೆ ಬೆರದ ಯುಗ ಒಂದು ಕ್ಷಣ
ನಿನ್ನಗಲಿದ ಕ್ಷಣ ಒಂದ್ಯುಗವಾಗಿ
ಬನ್ನ ಬಡುತಲಿಪ್ಪೆ ನಿನ್ನ ಪಾದವೆ ಸಾಕ್ಷಿ
ಇನ್ನೀ ದುಃಖವನು ಅನಂತ ಜನುಮಕ್ಕು ಅನುಭವಿಸಲಾರೆ
ಎನ್ನಾಳುವ ಧೊರಿಯೆ ಮುನ್ನೆ ನೋಡು
ನಿನ್ನ ವಿಯೋಗದಲಿಂದ ಘನ್ನ ವಿಭವ ತೃಣ ಸಮವಾಗಿ ಬಗಿದು
ಎನ್ನವರಿಂದಲಿ ಯುಗ ಪಂಚ ದಿನಕ್ಕೆ
ನಿನ್ನಗಾಗಿ ಪ್ರಾಣ ಕೊಟ್ಟಿದನು ಮರತೇ
ಚಿನ್ಮಯನೆ ನಿನ್ನ ನಿರ್ಘೃಣ ವೃತ್ತಿ[2]ಗೆ
ಇನ್ನಾವುದು ಸಮ ಈ ಪೃಥ್ವಿಯಲ್ಲಿ ಪಾ–

---

೧. ತಡ ಮಾಡದೆ ೨. ಸಂಸಾರದಿಂದ ಬಿಡುಗಡೆ ಹೊಂದಲು

ವನ್ನ ಮೂರುತಿ ಗುರು ವಿಜಯ ವಿಠ್ಠಲರೇಯಾ
ಸನ್ನುತ ಗುಣಪೂರ್ಣ ಸಕಲಂತರ್ಯಾಮಿ ೨

## ತ್ರಿವಿಡಿತಾಳ

ಮುಕ್ತಾರ್ಥ[೧] ಬಿನ್ನೈಸುವೆ ಚಿತ್ತಕ್ಕೆ ತರಲಿಬೇಕು
ವ್ಯರ್ಥ ಮಾಡದಲೆ ಕರುಣಾ ಮಾಡು
ಉತ್ತಮ ಸುಖಾಪೇಕ್ಷ ಭೋಕ್ತೃತ್ವ ಫಲವನ್ನು ಧಾ–
ರಿತ್ರ್ಯಸ್ಥ ಸೌಜನ್ಯ ಸಹಜವೆನ್ನು ಪ್ರ–
ಕೃತಿ ಜನಿತವಾದ ವಸ್ತುಗಳಿಂದಲಿ
ಉತ್ತಮೋತ್ತಮ ಸುಖವಾಹದೇನೊ
ಭಕ್ತರ ಶಪಥ ಕೇಳೊ ನಿನ್ನ ವ್ಯತಿರಿಕ್ತವಾಗಿ
ಮುಕ್ತಿ ಸುಖವು ಅಧಿಕವೆನ್ನರಯ್ಯಾ
ಸತ್ಯಲೋಕಾದಿ ಪದ ಮೊದಲಾದ ಸಂಪದವ
ಹತ್ತದು ಎಂಬೋದು ಅನಪೇಕ್ಷ[೨]ದಿ
ಪ್ರತ್ಯಕ್ಷವಾಗಿದೆ ನೋಡು ಸಕಲ ಜ್ಞಾನಿಗಳಲ್ಲಿ
ಭೃತ್ಯವತ್ಸಲನೆನಿಪ ಭಾವಾಧೀಶ[೩]
ವಿತ್ತಪ ನಾಮರೂಪ ಗುರು ವಿಜಯ ವಿಠ್ಠಲರೇಯ
ನಿತ್ಯ ಸುಖವು ನೀನೆ ಭಕ್ತರಿಗೆ ೩

## ಅಟ್ಟತಾಳ

ನಿನ್ನಭಿಮುಖವಾದ ಯುಗ ಒಂದು ಕ್ಷಣವಯ್ಯಾ
ನಿನ್ನನಗಲಿದ ಕ್ಷಣ ಯುಗವಾಗಿ ಕಳೆವೆ
ಮನೋಭಿಮಾನಿಗಳಾದ ಸುರರಿದಕೆ ಸಾಕ್ಷಿ
ಅನಾಥ ಬಾಂಧವನೆಂಬ ಬಿರಿದು ನಿನಗೆ
ಕ್ಷೀಣವಾಗದಯ್ಯಾ ಆವಾವ ಕಾಲಕ್ಕೆ

---

೧. ಅಂತಃಕರಣ, ಶೂನ್ಯ = ಕಟುಕ ೨. ಅಪೇಕ್ಷಿಸದಲೆ, ಬಯಸದಲೆ
೩. ಸವಾಂತರ್ಯಾಮಿ

ಜ್ಞಾನಾಂಬುಧಿ ಚಂದ್ರ ಗುರು ವಿಜಯ ವಿಠ್ಠಲರೇಯ
ನೀನಲ್ಲದೆ ಯಿದ್ದ ನಿಮಿಷ ಕಲ್ಪವು ದೇವಾ ೪

### ಆದಿತಾಳ

ನಿನ್ನಿಂದ ರಹಿತವಾದ ದುಃಖವೇನೆಂಬುವದು
ಅನಂತ ಜನ್ಮಕ್ಕಿದು ವಲ್ಲೆ ಇದು ವಲ್ಲೆ
ನಿನ್ನಿಂದ ಸಹಿತನಾಗಿ ಘನ್ನ ನರಕದೊಳು
ಜನುಮಂತವಾಗಿ ಇಪ್ಪದು ಲೇಸು
ಇನ್ನೀ ಜನ್ಮದಿಂದ ಭಜಿಸಿದ ಕಾಲಕ್ಕೊ
ಮುನ್ನಿನ ಪುಣ್ಯಶೇಷವನ್ನು ಮನಿಯ ಮಾಡಿ
ನಿನ್ನಿಂದ ಸಹಿತನಾಗಿ ಇರುವಂತೆ ಮಾಡುವದು
ಪನ್ನಗಚಲವಾಸ ಗುರು ವಿಜಯ ವಿಠ್ಠಲರೇಯಾ
ಬಿನ್ನಪವನು ಕೇಳಿ ಸಂತುಷ್ಟನಾಗುವದು ೫

### ಜತೆ

ನಿನ್ನ ಕಾಣದೆ ಕಳೆವ ದಿನವೆ ದುರ್ದಿನ ದೇವಾ
ಮನ್ನಿಸಿ ರಕ್ಷಿಪದು ಗುರು ವಿಜಯ ವಿಠ್ಠಲರೇಯಾ ॥

(ಪಿಂಗಳನಾಮ ಸಂವತ್ಸರ ಚೈತ್ರ ಶುದ್ಧ ೧೧. ಆದಿತ್ಯವಾರ)

## ೧೪೯

[ಅತಿ ಆಪ್ತನಾದ ಹರಿಯೆ, ಸಕಲ ಚರಾಚರ ಜಗತ್ತು ಸೃಜಿಸಿ, ಜೀವರ ಯೋಗ್ಯತೆಯಂತೆ ಸುಖ ದುಃಖಾದಿಗಳನ್ನು ಕೊಡುವನೆ. ನಿನ್ನ ಆಜ್ಞಾದಲ್ಲಿರುವವನಿಗೆ ನಿಷ್ಕರುಣದಿಂದ ಅಜ್ಞಾನ ದುಃಖದೊಳಿಡಿಸುವುದು ನ್ಯಾಯವೆ ? ಸಕಲ ಕಾಲದಲ್ಲಿ ಪ್ರಾಣನೆಂದೆನಿಪ ಹರಿಯೆ ರಕ್ಷಿಸು.]

## ಧ್ರುವತಾಳ

ಅತಿ ಹಿತ ಮಾಡುವಂಥ ಆಪ್ತನಾದವನಾಗಿ
ಅತಿಶಯ ನಿರ್ಘ್ರಣ್ಯ ವರ್ತಿಯಿಂದ
ಅತಿ ಘೋರತರವಾದ ದುಃಖವ ಬಡಿಸುವದು
ವಿತತ ಪ್ರಖ್ಯಾತ[1]ನಿಗೆ ಘನತಿ ಏನೋ ಅ–
ಶಿತ (ಶೀತಿ) ನಾಲ್ಕು ಲಕ್ಷ ಸಂಖ್ಯ ಜೀವರಾಶಿಗಳು ಸ–
ದ್ಗತಿಯ ಚಿಂತನೆಯಿಂದ ಸೃಷ್ಟಿ ಮಾಡಿ (ಮಾ) "ಮಯಾ
ತತ ಮಿದಂ ಸರ್ವಂ ಜಗದವ್ಯಕ್ತ ಮೂರ್ತಿನಾ"
ಅತಿ ವ್ಯಾಪ್ತ ರೂಪನಂತೆ ದಿಂದನಿಂದು ಪ್ರ–
ಕೃತಿ ಕಾಲ ಕರ್ಮ ಜೀವ ಯೋಗ್ಯತಿಯಂತೆ
ಕೃತಿಸಿ ಸತತ ಪೊರೆವೊ ಬಂಧುನಾಗಿ
ಈ ತೆರ ಮಾಡುವದು ಸಮ್ಮತವಾಗಿ ತೋರೆ
ಯತನವೇನಯ್ಯಾ ಅಲ್ಪ ಜೀವರಿಂದ
ಖತಿಯುಕ್ತ ಜೀವರಿಗೆ ದುರ್ಗತಿಯ ಚಿಂತಿಸುವದು
ಶ್ರುತಿಗೆ ಸಾರ್ಥಕವೆಂದು ಅನ ಸಲ್ಲದು
ಪ್ರತಿ ಪ್ರತಿ ಕಾಲ ನಿನ್ನಾಜ್ಞಾಧಾರಕನಾಗಿ
ಕ್ಷಿತಿಯೊಳು ಚರಿಸುವ ನರನಿಗೆ
ಗತಿ ಯಾವದುಂಟೊ ಪೇಳೊ ಎಂದೆಂದಿಗಾದರು
ವೃತತಿ ಜಾಸನ ಮುಖ್ಯ ನಿರ್ಜರೇಶ ಪ–
ದ್ಧತಿ ತಪ್ಪದಂತೆ ನೋಡು ನ್ಯಾಯವ ಬಿಡದಲೆ
ಈ ತೆರ ನಿಗ್ರಹಕ್ಕೆ ನಾನರಹನಾಗೆ
ಅತಿ ವಾಮ ಪ್ರೀಯನೆಂಬದು ಸಾರ್ಥಕವೆನಲ್ಯಾಕೆ
ಸತ್ಯ ಸಂಕಲ್ಪನಾದ ಸಾರ್ವಭೌಮಾ
ಸತಿ ಪತಿ ಗಿರಿ ನಿಲಯಾ ಗುರು ವಿಜಯ ವಿಠ್ಠಲ ರೇಯಾ
ಯಾತಕ್ಕೆನ್ನನು ಬರಿದೆ ಬಳಲಿಸುವಿ ೧

---

೧. ವಿಸ್ತಾರವಾದ, ಸಕಲ ಬ್ರಹ್ಮಾಂಡಗಳಲ್ಲಿ ಪ್ರಖ್ಯಾತನಾದವನಿಗೆ.

## ಮಟ್ಟತಾಳ

ನಿನ್ನಯ ಸಮ್ಮುಖವೇ ಅನಂತ ಸುಖವಯ್ಯಾ
ನಿನ್ನ ಪರಾಙ್ಮುಖವೆ ಘನ್ನ ದುಃಖವೇ ಹರಿಯೇ
ಮನ್ನಿಸಿ ಕೇಳುವದು ನಿನ್ನಿಂದ ನಿಯಾಮಿಸಿದ
ಇನ್ನೀ ಧರೆಯಲ್ಲಿ ಉನ್ನಹ ದುಃಖಗಳು
ಅನಂತವಿರಲಿನ್ನು ಇನ್ನು ಇದರೊಳು
"ಕಳಾನಾರ್ಹಂತಿ ಷೋಡಶೀಂ"
ನಿನ್ನ ವಿರಹಿತವಾದ ಸ್ಥಾನದ ಸ್ಥಿತಿಯಿಂದ
ಘನ್ನ ನರಕ ಎನಗೆ ಬಹು ಲೇಸು ಬಹು ಲೇಸು
ಬಿನ್ನಪವನು ಕೇಳಿ ಅವ್ವವಧಾನದಲಿ
ಮನ್ಮನದೊಳು ಪೊಳೆದು ಬನ್ನಗಳೋಡಿಸಿ
ಅನಂತ ಭೂಷಣಾದ್ರಿ ನಿಲಯ ಗುರು ವಿಜಯ ವಿಠ್ಠಲರೇಯಾ
ಎನ್ನಪರಾಧಕ್ಕೆ ನೀನೆ ಮೂಲವು ಕಾಣೋ ೨

## ತ್ರಿವಿಡಿತಾಳ

ಪರಮ ಬಲಿಷ್ಠನಾದ ಧರಣಿಪತಿಯ ಸುತನ
ನರರು ಬಾಧಿಪರುಂಟೆ ಎಂದೆಂದಿಗೂ
ಹರಿ ಪಕ್ಕ ಸೇರಿದಂಗೆ ಕರಿಗಳ ಭಯ ಉಂಟೆ
ವೀರ ಪತ್ನಿಯ ಶೀರಿ ಶಳೆವ ಧೀರರುಂಟೆ
ಹರಿ ನಿನ್ನ ಪೊಂದಿದರ್ಗೆ ದುರಿತದ ಲೇಪ ಉಂಟೆ ಈ
ತೆರವಾಗಿ ಶ್ರುತಿ ಸ್ಮೃತಿ ವರಲುತಿರೆ
ಪರಮಾಶ್ಚರ್ಯವಾಗಿ ತೋರುತಲಿದೆ ನಿನ್ನ
ಚರಿಯಕ್ಕೆ ನಮೊ ನಮೊ ಕರುಣಾನಿಧೆ
ನರಕಕ್ಕೆ ಸಮವಾದ ಮನುಜ ಲೋಕದಲ್ಲಿ
ಸೇರಿಸಿ ದೃಢವಿದ್ಯ ಕವಚ ತೊಡಿಸಿ
ಪರಮ ಬಲಿಷ್ಠರಾದ ಕಲಿ ಮುಖ್ಯ ದೈತ್ಯ ವರ್ಗ
ಅರಿಗಳ ಸಂಗದಲಿ ನಿಯಾಮಿಸೆ
ದುರುಳರೆಲ್ಲರು ಅತ್ಯಹರ್ಷಿತರಾಗಿ ಸದಾ ಧಿ–

ಕ್ಕರಿಸುತ ದೂರರಾಗಿ ದುಃಖ ಬಡಿಸೆ
ಪರಿಹರಿಸುವ ಶಕ್ತರಾರನ ಕಾಣದಲೆ
ಹರಿ ನೀನೆ ಗತಿ ಎಂದು ಕೂಗಿದರೂ
ಪರಮಾಪ್ತನಾಗಿ ಈಗ ಆರಿಗಾರಂತೆ ನೋಡಿ
ವರಲುವ ವಾಕ್ಯವನ್ನು ವಹಿಸದಲೇ
ಪರಮ ಕಾಠಿಣ್ಯ ವೊಹಿಸಿ ಜರಿದು ನೋಳ್ಪರಿಂದ
ಹರಿಯೆ ಎನಗೆ ನಿನಗೆ ಘಟಣವಾದ
ಪರಿ ಪರಿ ಸಂಬಂಧ ಮರಿಯಾದಿಗಳು ಇಂದು
ಸರಿದು ಪೋದವೇನೊ ನಿಃಶೇಷವಾಗಿ
ಗಿರೀಶಾದ್ರಿ ನಿಲಯ ಗುರು ವಿಜಯ ವಿಠ್ಠಲರೇಯಾ
ದರುಶನವಾಗದಿಪ್ಪ ದಿನವೆ ದುರ್ದಿನವೆನಗೆ ೩

### ಅಟ್ಟತಾಳ

ಕಪಟ ಮಾನವನೊಬ್ಬ ಕಾಮ್ಯುದೇಶವಾಗಿ
ನೃಪ ಮೊದಲಾದ ಮಹಾ ಧನಿಕರಾಶ್ರಯ ಮಾಡಿ
ಕೃಪೆಯ ಸಂಪಾದನಗೋಸುಗ ಇಲ್ಲದ
ವಮ ಸಂಬಂಧಗಳು ಬಲು ಪರಿ ಕಲ್ಪಿಸಿ
ಉಪವಾಗಲಿದಕೆಲ್ಲ ಸಹಿಸಲಾರೆನೆಂಬ
ಅಪೂರ್ವವಾಗಿದ್ದ ವಿನಯೋಕ್ತಿಯಿಂದಲಿ
ಸ್ವಪ್ರಯೋಜನವ ಸಂಘಟಣಾ ನಂತರ
ಸಪ್ನದಲ್ಲಾದರು ಸ್ಮರಿದಿರುವದು
ಚಪಳ ಮಾನವರಿಗೆ ಸಹಜವೆಂದೆನಿಪದು ನಿ–
ಷ್ಕಪಟನಾದ ನಿರ್ಮಲಾತ್ಮಗೆ ಇದು
ವಿಪುಳವಾದ ಕೀರ್ತಿ ಎನಿಪದು ಎಲೊ ದೇವ
ಕಪರ್ದಿಗಿರಿ ನಿಲಯಾ ಗುರು ವಿಜಯ ವಿಠ್ಠಲರೇಯಾ
ಈ ಪರಿ ಮಾಳ್ಪುದುಚಿತವೆಂದೆನಿಪದೊ ೪

### ಆದಿತಾಳ

ಸತ್ಯ ಸಂಕಲ್ಪ ನಿನ್ನ ಗುಣ ರೂಪ ಕ್ರೀಯಂಗಳು

ಅತ್ಯಂತ ಸತ್ಯವಯ್ಯಾ ಶ್ರುತಿ ಸ್ಮೃತಿ ಸಮ್ಮತಾದಿ
ಭೃತ್ಯನ ವಾಕ್ಯವನು ವ್ಯರ್ಥವ ಮಾಡದಲೆ
ಚಿತ್ತಕ್ಕೆ ತಂದು ಇದಕೆ ಉತ್ತರ ಪೇಳುವದು
ಈ ತೆರ ಮುನಿವದಕ್ಕೆ ಆತ್ಮಾರ್ಥವಾದ ಅಪ-
ಕೃತ್ಯಗಳಿಲ್ಲವಯ್ಯಾ ವಿದ್ವತ್ಸಮ್ಮತಾದಿ
ಭರ್ತೃಜ್ಞಾ ನಡಿಸುವ ಪತ್ನಿಯು ಸರ್ವಕಾಲ ಪ-
ವಿತ್ರಳೆನಿಪಳು ಪುಣ್ಯ ಪಾಪ ಕರ್ಮದಿಂದ
ಈ ತೆರದಲಿ ನೋಡು ಪ್ರತ್ಯಙ್ಮುಖನಾಹದಕ್ಕೆ ನಿ-
ಮಿತ್ಯ ಏನುಂಟು ಭೃತ್ಯ ವತ್ಸಲ ಪೇಳು ಧಾ-
ರಿತ್ರಿಯ ಪತಿ ತಾನು ಭೃತ್ಯರ ದೋಷವೆಣಿಸೆ
ನಾಸ್ತಿ ಎಂದೆನ್ನ ಸಲ್ಲ ಲೌಕಿಕ ನ್ಯಾಯದಿಂದ
ಚಿತ್ತವೆ ಮೊದಲಾದ ಇಂದ್ರಿಯ ಗ್ರಾಮಗಳಿಗೆ
ಕರ್ತು ನೀ ಮಾಡಿಸೆ ನಾತ್ಯಜನಿಗೆ ಯೋಗ್ಯನೇನೊ
ದುಸ್ತ್ಯಜವಾದ ಒಂದು ದುಷ್ಕೃತ್ಯವಿರಲ್ಯಾಕೆ
ಚಿತ್ತಜಪಿತ ನಿನ್ನ ನಾಮಸ್ಮರಣೆಯನ್ನು ವಿ-
ಜಿತ್ತವಾದ ಪಾಪ ಸಂಘ ಎಂದಿಗಾದರಿಲ್ಲ
ಯತ್ಕಿಂಚದ್ದೋಷವನ್ನು ಅಪಹಾರ ಮಾಡುವಂಥ
ಮಿತ್ರನಾದ ನಿನ್ನಿಂದ ಗತವಾದ ಜನ್ಮದಲ್ಲಿ
ಉತ್ಕೃಷ್ಟ ಅನುಗ್ರಹ ಮಾಡದೆ ಪಡಲಿಲ್ಲ
ಸತ್ಪುಣ್ಯ ರೂಪ ನೀನು ಸಥಿಯಿಂದ ಸಲಹುತಿರೆ
ಶತ್ರುರೂಪವಾದ ಪಾಪ ಎನ್ನೇನು ಮಾಳ್ಪುದಯ್ಯಾ
ಸತ್ಯವಾಗಿ ನುಡಿವೆ ಗ್ರಹಿಸು ಅನಾವೃಷ್ಟಿಮಯವಾದ ಭೂಮಿ[೧]
ಸ್ಥಿತಿಯಿಂದ ಈ ದೇಹ ಪತನವೆ ಸುಖವಯ್ಯಾ
ಸತ್ಯ ಸತ್ಯ ಪುನಃ ಸತ್ಯ ಚಿತ್ತೈಸು ಇದನ್ನೇವೆ
ವ್ಯರ್ಥವಾಗಿ ಎನ್ನನು ಬಳಲಿಸಿ ನೋಳ್ಪದ್ಯಾಕೆ
ಮುಕ್ತವಾದ ಎರಡರೊಳು ಒಂದನು ಪಾಲಿಪದು
ಕೃತ್ತಿವಾಸಾದ್ರಿ ನಿಲಯ ಗುರು ವಿಜಯ ವಿಠ್ಠಲರೇಯಾ
ಹೊತ್ತು ಹೋಗಾಡಿ ಘೋರ ದುಃಖವ ಬಡಿಸದಿರು ೫

---

೧. ಮಳೆ ಬಂದರೂ ಬಿತ್ತಲಿಕ್ಕೆ ಯೋಗ್ಯವಾಗದಿದ್ದ ಭೂಮಿಯಂತೆ.

**ಜತೆ**

ಪ್ರಾಣನೆಂದೆನಿಸುವಿ ಎನಗಾವ ಕಾಲದಲ್ಲಿ
ಸ್ಥಾಣು ಪರ್ವತವಾಸ ಗುರು ವಿಜಯ ವಿಠ್ಠಲ ॥

## ೧೫೦

[ಹಿಂದಿನ ಕಾಲದಲ್ಲಿ ಸಖನೆಂದೆನಿಸಿ ಕಿಂಚಿತ ಜಡವಾದ ಪ್ರಾರಬ್ಧಕರ್ಮ ನೆವನ ಮಾಡಿ ಜ್ಞಾನ ತಿರೋಭಾವ ಐದಿಸಿ ಮಹಾದುಃಖ ಬಡಿಪದುಚಿತವಲ್ಲ. ಹಿಂದೆ ಘನ್ನತೆ ಎಂದವನೆನಿಸಿ ಈಗ ಅತಿ ಕನಿಷ್ಠನನ್ನಾಗಿ ಬಳಲಿಪದುಚಿತವಲ್ಲ. ಕೃಷ್ಣಾ ನೀನೆ ಸಲಹಿ ಅಪರೋಕ್ಷ ಕೊಡು ಇತ್ಯಾದಿ.]

**ಧ್ರುವತಾಳ**

ಪ್ರಾರಬ್ಧ ಕರ್ಮವೆಂಬೊ ಸ್ತಂಭ ನಿಮಿತ್ಯ ಮಾಡಿ
ನೀರಜಾಕ್ಷನೆ ನೀನು ತದ್ರೂಪಾದಿ
ನೀರಧಿ[1] ಸಮ ಪೋಲ್ವ ಕರುಣಿ ನೀನಾದರಾಗ
ವೈರತನವ ಮಾಳ್ಪ ಕುಜನರಂತೆ
ಘೋರವಾದ ದುಃಖ ವೃಂದಗಳುಣಿಸಿದಿ
ಸ್ಮರಣೆ ಮಾತ್ರ ಹೃದಯ ಭೇದಿಸುವದೊ
ಪ್ರಾರಬ್ಧ ಉಣಿಪೆನೆಂದು ಇಚ್ಛಾ ಮಾಡಿದ ಮಾತ್ರ
ಕಾರಾಗೃಹಕ್ಕೆ ಸಮ ಪೃಥ್ವಿಯಲ್ಲಿ
ಸೌರಭಯುಕ್ತವಾದ ದೇಹ ಇದ್ದವನಾಗಿ
ನಾರುವ ದುರ್ಗಂಧ ದೇಹ ಧರಿಸಿ
ವಿರಾಜಿತವಾದ ಜ್ಞಾನ ಪ್ರಕಾಶವನ್ನು
ತಿರೋಧಾನವೈದಿ ಅಜ್ಞಾನಾಂಧ
ಕಾರದೊಳು ಮುಳುಗಿ ಕಾಮ ಕ್ರೋಧಾದಿ ಮೋಹ

---

೧. ಸಮುದ್ರ

ವೈರಿಗಳಿಂದ ಆಶ್ರೈಸಿಕೊಂಡು
ವಾರವಾರಕೆ ಬಳಲಿ ದುಃಖವ ಬಡುವದು
ಆರಿಗೆ ವದರಿದರು ಕೇಳ್ವರಿಲ್ಲ
ಧಾರುಣಿ ಪತಿಯಾಗಿ ನರರಿಂದ ಮಾನ್ಯನೆನೆಸಿ
ನಾರಾಯಣನೆ ನಿನ್ನ ಇಚ್ಛಾದಿಂದ
ದಾರಿದ್ರ ದೋಷವೈದಿ ಮನೆ ಮನೆ ಭಿಕ್ಷಾ ಬೇಡೆ
ಆರಾದವರನ ಕಂಡು ಹಾ ಹಾ ದೈವವೆ ಎಂದು
ಕರುಣದಲಿ ಅವನ ಆದರಿಪರೋ
ಶ್ರೀ ರಮಣನೆ ಎನ್ನ ಈ ಪರಿ ಮಾಡಿದರು
ಕಾರುಣ್ಯ ಎಳ್ಳನಿತು ಪುಟ್ಟಲಿಲ್ಲ
ಸ್ವರೂಪದಲ್ಲಿ ನೀನು ಇತ್ತ ಗುಣಗಳ ಮಧ್ಯ ವಿ–
ಚಾರಿಸಿ ನೋಡಿದರು ವಂದಿಲ್ಲದೆ
ನರಾಧಮ ನಾನು ಸ್ವಪಚನಿಂದಧಿಕ ಕಷ್ಟ
ಬಾರಿ ಬಾರಿಗೆ ಐದಿ ದುಃಖದಿಂದ
ಶಾರೀರ ದಂಡಿಸಿ ಬಲು ಪರಿ ಬಳಲಿದರು
ಸಾರ ಹೃದಯ ಆದ್ರಾವಾಗಲಿಲ್ಲ
ಭೂರು ಕರುಣನಿಧಿ ಗುರು ವಿಜಯ ವಿಠ್ಠಲ ನಿನ್ನ
ಸಾರಿದವರಿಗೆ ಇನಿತು ಬಾಧೆಯುಂಟೆ ೧

## ಮಟ್ಟತಾಳ

ಪ್ರಣಕೆ ಸಮನೆನಿಪ ಸಖನಿಂದಗಲಿದೇ
ರಣಮಧ್ಯದಿ ಎನ್ನ ಸ್ವನ ಕೇಳಿಸದಿಪ್ಪ
ಕ್ಷಣ ಸಹಿಸದೆ ಎನ್ನ ಹಿತವನು ಬಯಸುವ
ಅನುಜ ಭ್ರಾತೃಗಳಿಂದ ಅತಿ ದೂರವೈದಿದೆ
ಧನು (ಧನ) ಪಶು ಗಜ ಅಶ್ವರಥ ಸಂಕುಲವಾದ
ಕ್ಷೋಣಿಯು ಮೊದಲಾದ ಐಶ್ವರ್ಯವು ಬಿಟ್ಟು
ಮನುಜಾಧಮರೊಳು ಅಧಮನು ನಾನಾಗೆ
ಶ್ರೀನಾಥನೆ ನಿನಗೆ ಕರುಣ ಪುಟ್ಟದಿರೆ

ಏನೆಂಬೆನೊ ನಿನ್ನ ಗುರು ವಿಜಯ ವಿಠ್ಠಲ ನೀನು
ಪ್ರೀಣನಾಗದಿರಲು[೧] ತೊಲಗುವದೇ ಕರ್ಮ ೨

**ತ್ರಿವಿಡಿತಾಳ**

ಘನರಿಂದ ಮಾನ್ಯನೆನಿಸಿ ದುರ್ಜೀವಿಗಳ ಕೈಯ್ಯ
ಅನುಪಮವಾದ ನಿಂದ್ಯವೈದಿಸಿದಿ
ಧನ ಕನಕ ವಸ್ತುಗಳ ನಿಕ್ಷೇಪ[೨] ಉಳ್ಳವನ್ನ
ಘನೀಭೂತ ದಾರಿದ್ರನೆಂದೆನಿಸಿದಿ
ಪಣವ ಗೋಮುಖ ವಾದ್ಯದಿಂದ ಎಚ್ಚರಿಪನ್ನ
ದಿನಾಂಧ ಶಬ್ದಗಳು ಎಚ್ಚರಿಪವೋ
ಹೀನಾ ಮತಾದ್ರಿ ಕುಲಿಶವೆನಿಸಿ ಜಗದಿ ಮೆರೆವ
ವಾಣಿ ನಿನ್ನಯ ನಾಮ ಉಚ್ಚರಿಸದು
"ತತ್ರ ಶ್ರೀ ವಿಜಯೋಭೂರ್ತಿ" ಎಂದು ಸಾರುತಲಿದೆ
ಈ ನುಡಿ ವ್ಯತಿರೇಕಗಳನ್ನೈದಿದೆ
ಘನೀಭೂತವಾದ ಬಲದಿ ಅಸಮನೆನಿಸುವನ್ನ
ತೃಣವ ಚಲಿಸುವ ಶಕ್ತನಾಗದಾದೆ
ಮನದಲ್ಲಿ ರೂಪಾನಂತ ಸಂತತ ನೋಡಿ ಬಲು
ಆನಂದದಿಪ್ಪುವಂಥ ಮನವ ತ್ಯಜಿಸಿ
ಹೀನ ವಿಷಯಗಳಿಂದ ದಣಿಸುವ ಸರ್ವಕಾಲ
ಇನಿತು ಮಾಡಿದರಾಗ ಕರ್ಮವನ್ನು
ಕೊನೆ ಐದಿಸುವೆನೆಂಬ ಇಚ್ಛಾ ಪುಟ್ಟದಲಿರೆ
ಏನೆಂಬೆ ನಿನ್ನ ನಾನು ಕರುಣ ನಿಧಿಯೇ
ಅನಂತ ಜನುಮದಿ ಮಾಡಿದ ನಿನ ಕೃಪೆ ಈ
ಬಿನಗು ಕರ್ಮದ ಪ್ರಾಂತ್ಯವೈದಿಸದಿಪ್ಪದೆ
ವನಜನಾಭನೆ ಎನ್ನ ಬರಿದೆ ದಣಿಸುವದು
ಘನತೆಯೇ ನಿನಗಿದು ಕರುಣಾನಿಧಿಯೆ

---

೧. ಪ್ರೀತನಾಗದಿರಲು, ತೃಪ್ತನಾಗದಿರಲು
೨. ಗುಪ್ತಧನ, ಇಡುಗಂಟು, ಇಡಲ್ಪಟ್ಟ ದ್ರವ್ಯ.

ಮನಸಿಜ ಪಿತ ಗುರು ವಿಜಯ ವಿಠ್ಠಲ ನಿನ್ನ
ಮನಸಿಗೆ ಬಾರದ್ಯಾಕೊ ಇನಿತು ಕೂಗೆ ೩

### ಅಟ್ಟತಾಳ

ನಿನ್ನಿಂದ ನುಡಿವೆ ನಿನ್ನಿಂದ ಕೇಳುವೆ
ನಿನ್ನಿಂದ ಪೋಗುವೆ ನಿನ್ನಿಂದ ಬರುವೆ
ನಿನ್ನಿಂದ ಮಾಡುವೆ ಸಕಲ ಕರ್ಮಾ ಕರ್ಮ
ನಿನ್ನ ವ್ಯತಿರಿಕ್ತ ಶ್ವಾಸೋಚ್ಛ್ವಾಸಕ್ಕೆ
ಎನ್ನ ಸ್ವಾತಂತ್ರವು ಯಿಲ್ಲವೆಂತೆಂದು
ಅನಂತ ಜನುಮದಿ ಮಾಡಿದ ಪುಣ್ಯದಿ
ಇನ್ನೀ ಕರ್ಮದ ಪ್ರಾಂತ್ಯವನೈದಿಸಿ
ನಿನ್ನಿಂದೆ ನುಡಿದಂಥ ವಾಕ್ಯ ಸಫಲ ಮಾಡಿ
ಮನ್ಮನದಲಿ ತೋರೊ ತಡಮಾಡದೆ ಇನ್ನು
ಘನ್ನ ಮಹಿಮ ಗುರು ವಿಜಯ ವಿಠ್ಠಲರೇಯಾ
ಮನ್ಮನೋಭೀಷ್ಟಿಯ ಸಲಿಪದೊ ಕೃಪೆಯಿಂದ ೪

### ಆದಿತಾಳ

ಪಾಹಿ ಪಾಹಿ ನಿನ್ನ ರೂಪಕ್ಕೆ ನಮೊ ನಮೊ
ಪಾಹಿ ಪಾಹಿ ನಿನ್ನ ಸುಗುಣಕ್ಕೆ ನಮೊ ನಮೊ
ಪಾಹಿ ಪಾಹಿ ನಿನ್ನ ಕ್ರೀಯಕ್ಕೆ ನಮೊ ನಮೊ
ಪಾಹಿ ಪಾಹಿ ನಿನ್ನ ಇಚ್ಛೆಕ್ಕೆ ನಮೊ ನಮೊ
ಪಾಹಿ ಪಾಹಿ ನಿನ್ನ ಕರುಣಕ್ಕೆ ನಮೊ ನಮೊ
ಪಾಹಿ ಪಾಹಿ ಎನ್ನ ಅಪರಾಧವೆಣಿಸದೆ
ಪಾಹಿ ಪಾಹಿ ಗುರು ವಿಜಯ ವಿಠ್ಠಲ ನಿನಗೆ
ದೇಹಿ ಎಂದವನಿಗೆ ಉಳಿವದೆ ದುಷ್ಕರ್ಮ ೫

### ಜತೆ

ಕೃಷ್ಣಾ ಎನಗೆ ನೀನು ಪ್ರೀತನಾಗುತಲಿರೆ
ದುಷ್ಟ ಕರ್ಮಗಳುಂಟೆ ಗುರು ವಿಜಯ ವಿಠ್ಠಲ ॥

## ೧೫೧

[ಭಾರತ ಕಥಾ ದೃಷ್ಟಾಂತ ಪೂರ್ವಕ ಶರಣಾಗತ ರಕ್ಷಕನೆಂಬ ಬಿರುದುಳ್ಳ ಹರಿಯೆ ಈ ಶರಣಗೆ ಬಂದೊದಗಿದ ದುರುಳ ಬಾಧೆ (೫೨ ದಿನ ದುಃಖ ಬಟ್ಟದಕಿಂತ) ಬಹು ಬಾಧಿಸುತಿದೆ. ಇದು ಸ್ವತಂತ್ರವೇ ನೀ ಸರ್ವ ಸ್ವತಂತ್ರ, ಮಿತ್ರನೆಂದು ಪೇಳಲು ಲಜ್ಜೆ ಬರುವದು, ಕರುಣಾನಿಧೆ ರಕ್ಷಿಸು, ಭಕ್ತರ ದೋಷವೆಣಿಸುವುದುಚಿತವಲ್ಲ.]

### ಧ್ರುವತಾಳ

ಯಾಕೆ ಮುನಿಸು ನಿನಗೆ ಎಲೊ ಎಲೋ ಸಖ್ಯನೆ
ಕಾಕು ನರನ ಕೂಡ ಕಠಿಣತನವೆ
ಲೋಕದೊಳಗೆ ಒಬ್ಬ ನಾನೆವೆ ಪಾಪಿ ಏನೋ
ಹೇ ಕರುಣಾಬ್ಧಿಯೆ ಆರ್ದ್ರ ಹೃದಯ
ಸೌಖ್ಯ ನಿಮಗ್ನ ನರಗೆ ಪರರ ದುಃಖದ ಪರವೇನೊ
ಏಕಮೇವನೆ ನೀನು ಇನಿತು ನೋಡೆ
ಲೋಕಾ ಲೋಕವನೆಲ್ಲ ನೇಮಿಸಿ ಜೀವರಿಗೆ
ಸುಖ ಸಂಜ್ಞವಾದ ವಿಷಯಗಳ ಅ–
ನೇಕ ಬಗೆಯಾಗಿ ಸೃಜಿಸಿ ನಾಮ ರೂಪ
ಸುಕ್ರೀಯಗಳ ಮಾಡಿ ಪ್ರಾಕೃತರ್ಗೆ
ಬೇಕಾದ ಈಪ್ಸಿತಗಳನು ಸಲಿಸುತ್ತ
ಸಾಕುವ ಪರಾರ್ಥಿಗೆ ಇನಿತು ಮಾತೆ
ಶೋಕ ಮೋಹಾದಿಗಳ ಕಲ್ಪಿಸಿ ಅಜ್ಞಾನದಿ
ವ್ಯಾಕುಲ ಬಡಿಪದಕ್ಕೆ ಇದೆ ಸಮಯವೇ
ಈ ಕಲಿಯುಗವೆಂಬ ಘೋರಾರಣ್ಯ ಮಧ್ಯ
ವಾಕು ಕೇಳುವರಿಲ್ಲ ಎಷ್ಟು ಕೂಗೆ
ಲೌಕೀಕ ಅನುಬಂಧದವರ ಹೊರತಾಗಿ
ಬೇಕಾದ ಜನರಿಲ್ಲ ಒಬ್ಬರನ್ನ
ಸೂಕರ ಮೊದಲಾದ ಯೋನಿಗಳಲ್ಲಿ ಬಿಡದೆ
ಜೋಕೆ ಮಾಡುವ ಶಪಥ ನಿನ್ನದಯ್ಯಾ

ನೋಕನೀಯನೆ ಚಲುವ ಗುರು ವಿಜಯ ವಿಠ್ಠಲರೇಯಾ
ಗೋಕುಲಾಂಬುಧಿ ಚಂದ್ರ ಸುಗುಣ ಸಾಂದ್ರಾ ೧

### ಮಟ್ಟತಾಳ

ಪರರ ದುಃಖವ ನೀನು ಪರಿಹರಿಸದಿರಲು
ಶರಣ ರಕ್ಷಿಕನೆಂಬೊ ಬಿರಿದು ಸುಮ್ಮನೆ ನಿನಗೆ
ಬರುವದೆ ಎಲೊ ದೇವ ಭಾಗ್ಯೋದಯ ಪೂರ್ಣ
ಪರಿಹಾಸದಿ ಒಮ್ಮೆ ಸ್ಮರಿಸಿದ ನರರನ್ನು
ಕರವ ಪಿಡಿದು ಪೊರೆವ ಘನ ಮಹಿಮನು ಎಂದು
ವರ ವೇದ ಶಾಸ್ತ್ರಗಳು ಒದರುತಲಿರಲಾಗಿ
ತಿರುಗಿ ನೋಡದಲಿಪ್ಪದು ಘನತೆಯೆ ಹರಿಯೆ
ಚಿರಕಾಲದಿ ನಿನ್ನ ಅನುಸರಿಸಿ ಮುಖ್ಯ
ಪರಿ ಪರಿ ಅನುಬಂಧ ನಿಮಿತ್ಯವು ಇರಲು
ಆರ ಲವ ಮಾತಿಗೆ ಇನಿತು ಮುನಿವದಿದು
ಪರಮ ಸಮ್ಮತವೇನೊ ಪರಿಪೂರ್ಣ ಕೃಪಾನಿಧೆ
ಮೀರಿದ ಅಪರಾಧ ಮಾಡಿದವನಲ್ಲ
ದೂರ ನೋಡದಲಿರೋ ಅನ್ನಿಗನೋಪಾದಿ
ನರ ಸಾರಥಿ ಗುರು ವಿಜಯ ವಿಠ್ಠಲರೇಯ
ಕುರುಹು ಕಾಣಿಸಿ ನಿಜ ಪುರವನೆ ಸೇರಿಸೊ ೨

### ತ್ರಿವಿಡಿತಾಳ

ಪ್ರತ್ಯಕ್ಷವಾದ ಶಸ್ತ್ರ ಇನಿತು ಬಾಧೆಯ ಕೊಡದು
ಪ್ರತ್ಯಕ್ಷ ಅಸ್ತ್ರದ ವ್ಯಥೆಯಿಂದಧಿಕವಯ್ಯಾ
ಪ್ರತ್ಯಕ್ಷವಾದ ನಿಶಿತಾ[೧] ವಿಶಿಖಾತಲ್ಲಾದಕಿಂತ[೨]
ದುಸ್ತರವಾಗಿ ಕಾಣುತಲಿದೆ ವೈಮನಸು
ಪ್ರತ್ಯಕ್ಷ ರಣಭೂಮಿ ಪತಿತನಾದುದಕಿಂತ
ಮೃತ್ಯು ಸಂಸಾರ ದುಃಖ ಅಧಿಕವೆನಗೆ

---

೧. ನಿಶಿತ = ತೀಕ್ಷ್ಣವಾದ ೨. ಬಾಣದಿಂದ ಆದ ಗಾಯ.

ಪ್ರತ್ಯಕ್ಷ ಶಂಖ (ಧನಸು) ಘೋಷ ಸ್ವನದಕಿಂತ
ಭೀತಿಗೊಳಿಸುತಿದೆ ದುರುಳ ಬಾಧೆ
ಶತ ಅರ್ಧದ್ವಯ ದಿನ ದುಃಖಬಟ್ಟದಕಿಂತ
ಶತಕಲ್ಪವೆನಿಸಿ ದಿನ ಕಳೆವೆನಿಂದು
ಯತ್ನದಿಂದಲಿ ಇದು ಪ್ರಾಪ್ತವಾದುದಲ್ಲ
ಕರ್ತೃ ನಿನ್ನಿಂದಲೆ ಘಟಿಸಿದದಕೆ
ಶತ್ರುಗಳಂತೆ ಪ್ರತ್ಯುಪಕಾರ ತೀರಿಸಿದಿ
ಚಿತ್ತಕ್ಕೆ ಬಂದದಕ್ಕೆ ಮಾಳ್ಪದೇನೊ
ನಿತ್ಯಮುಕ್ತಳಾದ ಲಕುಮಿ ಬೊಮ್ಮಾದಿಗಳಿಗೆ
ತುತ್ತು ಮಾಡಿ ಸುಖ ಉಣಿಸುವವನೆ
ಜತ್ತಾಗಿ ಮಾಡಿಸಿದ್ದು ಅನುಭವಿಸಲಿ ಯನ್ನೆ
ಮುಕ್ತರಾಗುವರೇನೊ ಎಂದಿಗನ್ನ
ಮಿತ್ರನೆಂದು ನಿನ್ನ ಬಳಿಸಿಕೊಂಬುವದಕ್ಕೆ
ಚಿತ್ತದಿ ಲಜ್ಜೆ ಎನಗೆ ಪುಟ್ಟುವದೊ
ಭಕ್ತರಲ್ಲಿ ನಿನಗೆ ಮತ್ಸರ ಎಂದಿಗಿಲ್ಲ
ಭೃತ್ಯರ ಅಪರಾಧ ಎಣಿಸದಲೆ
ಸತ್ಯ ಸಂಕಲ್ಪ ಗುರು ವಿಜಯ ವಿಠ್ಠಲರೇಯಾ
ಉಧೃತ್ಯನ ಮಾಡುವದು ಬಂಧದಿಂದ ೩

## ಅಟ್ಟತಾಳ

ಪುಣ್ಯ ಪಾಪಾದರೆ ಹೊನ್ನು ಲೋಹವಾಗೆ
ವನ್ನಜ ಸಖ ತಾಪ ಉರಿವ ಅಗ್ನಿಯು ಆಗೆ
ಪುನ್ನಿತರ ಮಾಡುವ ಕ್ಷೇತ್ರ ಪಾಪವ ನೀಯೆ
ಮನ್ನುಜರಿಂದಲಿ ಮಾಳ್ಪ ಕೃತ್ಯವೇನೊ
ಪನ್ನಂಗ ತಲ್ಪ ನೀ ಇನಿತು ಮಾಡಲು ಆ-
ಪನ್ನ ಜನರೆಲ್ಲ ಪ್ರತಿಕೂಲರೇ ಕೇಳು
ನಿನ್ನ ದ್ವೇಷಿಗಳಾದ ದನ್ನುಜ ಸಂಹಾರ
ಪುಣ್ಯಾತಿಶಯವೆಂದು ಶ್ರುತಿ ತತಿಯನು ಪೇಳಾ
ಜನುಮದ್ವಯದಲ್ಲಿ ಎರಡು ಬಗೆಯಿಂದ

ಮನುಜಾಧಮರನ್ನು ಅಳಹಿದ ಕರ್ಮಕ್ಕೆ
ಧನ್ಯನ್ನ ಮಾಡದೆ ಕಡಿಗೆ ದೂರ ಮಾಡಿ
ಕಣ್ಣಿಲೆ ನೋಡದೆ ಖಿನ್ನನ ಮಾಳ್ಪುದು
ಸನ್ನ್ಯಾಯವೇನೆಲೊ ಚಿನ್ನುಮಯ ದೇವ
ಪನ್ನಗಚಲ ವಾಸ ಗುರು ವಿಜಯ ವಿಠ್ಠಲರೇಯಾ
ಇನ್ನಾದರೂ ಕೃಪೆ ಚನ್ನಾಗಿ ಮಾಡೋದ್ಧು ೬

**ಆದಿತಾಳ**

ಆವಾವ ಸುಖಾ ಸುಖ ಏನೇನು ಒದಗಲು
ಕಾವ ಕೊಲ್ಲುವ ನೀನೆ ಸಂಶಯ ಎನಗಿಲ್ಲ
ಜೀವನಕ್ಕೆ ನಾನಾ ಜನ್ಮ ಅನಾದಿ ನಿರ್ಮಿತವು
ನೋವ ನೋವಾದರು ಇದರಂತೆ ತಿಳಿಯಬೇಕು
ಪಾವನ ಇದಕಾಗಿ ಪ್ರಾರ್ಥಿಸಿದವನಲ್ಲ
ಭಾವ ಶುದ್ಧದಿ ನಿನ್ನ ಬೇಡುವೆನಿಂದು ಒಂದೆ
ದೇವ ನಿನ್ನಗಲಿದ ದಿನ ಒಂದು ಕಲ್ಪವಾದ
ನೋವು ಮಾತ್ರ ಕೊಡದಿರು ಅನಂತ ಕಲ್ಪಕ್ಕೆ
ಸೇವಕನ ಅಪರಾಧ ಸಾವಿರ ಇರಲಿ
ಈ ವರವನ್ನೆ ಇತ್ತು ಪಾಲಿಸು ತೋಷದಿಂದ
ಪಾವನ್ನ ಮೂರ್ತಿ ಗುರು ವಿಜಯ ವಿಠ್ಠಲರೇಯಾ
ಮೂವರಲ್ಲಿ ಸಮನೆನೆಪ ನಿರ್ಘೃಣ್ಯ ದೋಷ ದೂರಾ ೭

**ಜತೆ**

ಭಕ್ತರಲ್ಲಿ ದೋಷ ಎಣಿಪದುಚಿತವಲ್ಲ
ಸೂತ್ರಧಾರಕ ಗುರು ವಿಜಯ ವಿಠ್ಠಲರೇಯಾ ॥

## ೧೫೨

# ಗೀತಾ ಸುಳಾದಿ

[ಸ್ತೋತ್ರ ಭಾಗ ಜೀವ ಜಡಗಳು ನಿಮಿತ್ತರೇ ಹೊರ್ತಾಗಿ ಜೀವರದ್ವಾರಾ ಸಕಲವೂ ಹರಿ ಮಾಡಿ ಮಾಡಿಸುವನೆಂಬ ಪೂರ್ವ ಜನ್ಮದ ಸಂಸ್ಮರಣ ಪೂರ್ವಕ ಸರ್ವಕರ್ತಾ ಕರಾಯಿತಾ ಹರಿ ಎಂಬ ಸ್ತೋತ್ರ.]

## ಧ್ರುವತಾಳ

"ತಸ್ಮಾತ್ ತ್ವಮುತ್ತಿಷ್ಟ ಯಶೋಲಭ ಸ್ವ–
ಜಿತ್ವಾ ಶತ್ರೂನ್ ಭುಕ್ಷ್ವಂ ರಾಜ್ಯಂ ಸಮೃದ್ಧಂ
ಮಯ್ಯೈ ವೈತೇ ನಿಹತಾಃ ಪೂರ್ವಮೇವ
ನಿಮಿತ್ತ ಮಾತ್ರಂ ಭವ ಸವ್ಯ ಸಾಚಿನ್"
ಎನ್ನಿಂದ ಆದ ಕೃತ್ಯ ಅವಜ್ಞ ಮಾಡದಲೆ
ಉತ್ತರ ಪೇಳುವದು
ಭಾವಾಭಿಜನ್ಯವಾದ ಅಹಂಕಾರವಾದರೂ
ಶ್ರೀವರ ನಿನ್ನಿಂದೇ ಪುಟ್ಟಿತೆನಗೆ
ಪಾವನ ಮಹಿಮ ಗುರು ವಿಜಯ ವಿಠ್ಠಲರೇಯಾ
ಆವಪರಾಧ ಉಂಟು ತಿಳಿಸಿ ಪೇಳೊ ೧

## ಮಟ್ಟತಾಳ

"ದ್ರೋಣಂಚ ಭೀಷ್ಮಂಚ ಜಯದ್ರಥಂಚ
ಕರ್ಣಂ ತಥಾ ನ್ಯಾನಪಿ ಯೋಧ ವೀರಾನ್
ಮಯಾ ಹತಾಂ ಸ್ತ್ವಂ ಜಹಿ ಮಾ ವ್ಯಥಿಷ್ಟಾ
ಯುದ್ಧಸ್ವ ಜೇತಾಸಿ ರಣೇ ಸಪತ್ನಾನ್"
ಪ್ರಾಣನಾಥ ಗುರು ವಿಜಯ ವಿಠ್ಠಲರೇಯಾ
ಎನಗಾವದು ಕೃತ್ಯ ಇದರೊಳಗೆ ೨

## ತ್ರಿವಿಡಿತಾಳ

ವೀರನಾದವ ಒಂದು ಕರಗಸ ಕೈಯಲ್ಲಿ
ಧರಿಸಿ ಶತ್ರುಗಳನ್ನು ಹನನ ಮಾಡೇ
ಪರಿ ಪ್ರಾಪ್ತವಾದ ಘನತಿ ಪುರುಷಗಲ್ಲದೆ ಜಡ
ಕರಗಸಕೆ ಕೀರ್ತಿ ಬರುವದೆಂತು
ತುರಗ ಬಿಗಿದ ರಥ ಗಮನಾಗಮನದಿಂದ
ಪರಿಖ್ಯಾತಿ ವೈದಿದ್ದಾ ಕೀರ್ತಿಯನ್ನು
ತುರಗ ಶ್ರೇಷ್ಠಕೆ ಹೊರತು ಜಡಕೆ ಬರುವದುಂಟೆ ಈ
ತೆರದಿ ಬರುವದಯ್ಯಾ ಎನಗೆ ಕೀರ್ತಿ
ಹರಿ ನೀವೊಲಿದು ಎನ್ನ ನಾಮರೂಪವ ಧರಿಸಿ
ಧರಣಿ ಭಾರವನಿಳುಹಿ ಮೆರೆದ ದೇವಾ
"ಎ ಏನಂ ವೇತ್ತಿಹಂತಾರಂ ಯಶ್ಚೈನಂ ಮನ್ಯತೇ ಹತಂ
ಉಭೌ ತೌ ನ ವಿಜಾನೀತೋ ನಾಯಂ ಹಂತಿನಹನ್ಯತೇ"
ಕರುಣಾನಿಧಿಯೇ ಗುರು ವಿಜಯ ವಿಠ್ಠಲರೇಯಾ
ಹರಣ ಮಾಡುವ ಕರ್ತು ನೀನೆ ದೇವಾ ೩

## ಅಟ್ಟತಾಳ

"ನ ಜಾಯತೇ ಮ್ರೀಯತೇ ವಾ ಕದಾಚಿನ್
ನಾಯಂ ಭೂತ್ವಾ ಭವಿತಾವಾ ನ ಭೂಯಃ
ಅಜೋ ನಿತ್ಯಃ ಶಾಶ್ವತೋ ಅಯಂ ಪುರಾಣೋ
ನ ಹನ್ಯತೇ ಹನ್ಯ ಮಾನೇ ಶರೀರೇ"
ವಿಜಯ ಸಾರಥಿ ಗುರು ವಿಜಯ ವಿಠ್ಠಲರೇಯಾ
ಸೋಜಿಗವೇ ಸರಿ ಎನ್ನ ಅಪರಾಧವ ೪

## ಆದಿತಾಳ

"ಲೇಲೀಹ್ಯಸೇ ಗ್ರಸಮಾನಃ ಸಮಂ ತಾ–
ಲೋಕಾನ್ ಸಮಗ್ರಾನ್ ವದನೈರ್ಜ್ವಲದ್ಭಿಃ
ತೇಜೋ ಭಿರಾ ಪೂರ್ಯ ಜಗತ್ ಸಮಗ್ರಂ

ಭಾಸಸ್ತವೋಗ್ರಾಃ ಪ್ರತಪಂತಿ ವಿಷ್ಣೋ"
ಬಾಲಾರ್ಕ ಕೋಟಿ ಪ್ರಭ ಗುರು ವಿಜಯ ವಿಠ್ಠಲರೇಯಾ
ಆಲೋಚಿಸಿದರೆ ಎನಗಿಲ್ಲಪರಾಧವಾ ೫

## ಜತೆ

ಬ್ರಹ್ಮಸ್ತು ಬ್ರಹ್ಮ ನಾಮಾ ಸೌ ರುದ್ರಸ್ತು ರುದ್ರನಾಮಕಃ
ಎಮ್ಮ ನಾಮವು ನೀನೆ ಗುರು ವಿಜಯ ವಿಠ್ಠಲರೇಯಾ ॥

## ೧೫೩

[ಗೂಢನಾದ ಹರಿಯೆ ಸಕಲ ಕ್ರಿಯಾದಲ್ಲಿ ನೀನು ಜೋಡಾಗಿ ನಿಂದು ಮಾಡಿ, ಋಣಕ್ಕೆ ಮಾತ್ರ ಎನ್ನನು ಗುರಿ ಮಾಡುವಿ. ಈ ಋಣ ವಿಮೋಚಕನು ನೀನೆ. ೪೦ ವರ್ಷ ಸಂತತವಾಗಿ ಅನೇಕ ಲೌಕಿಕ ವ್ಯವಹಾರದಲ್ಲಿ ಮಾಡಿದ ಪಾಪಕೃತ್ಯ ಋಣ ವನ್ನು ಪೋಗಾಡಿಸಲು ನೀನೇ ಯುಕ್ತಿವಂತರಲ್ಲಿ ಶ್ರೇಷ್ಠ. ಋಣ ಪೋಗಾಡಿಸಿ, ನೀನೇ ಕರುಣಿಸಿ ಪ್ರತ್ಯಕ್ಷನಾಗು ಎಂದು ಪ್ರಾರ್ಥನೆ.]

### ಧ್ರುವತಾಳ

ಮಾಡಿದ ಋಣವನ್ನು ತೀರಿಸದಲೆ ಬಿಡದು
ನಾಡೊಳು ಎಣಿಸಿ ಗುಣಿಸೆ ವಿಧಿಗಾದರೂ
ಗಾಢವಾದ[1] ಋಣ ಮಾಡಲೊಲ್ಲೆನು ಯೆಂದು
ಗಾಡಿಕಾರನೆ[2] ನಿನ್ನ ಪದಕೆ ಬಿದ್ದು
ಬೇಡಿಕೊಂಡದಕ್ಕೆ ಇದರ ಬಾಧ್ಯತ್ವ ನಿನಗೆ
ಬೇಡವೆಂದು ಅಭಯವನ್ನು ಪೇಳೆ
ಮಾಡುವ ಕಾಲದಲ್ಲಿ ಜೋಡಾಗಿ ನಿಂದು ಮಾಡಿ

---

೧. ಅತಿಶಯ, ಬಹಳವಾದ.

೨. ಸೋಸುಗಾರ, ಚಲುವ, ಎನ್ನ ದೇಹಾಖ್ಯಬಂಡಿ ನಡಿಸುವ.

ಈಡು ಯಿಲ್ಲದ ಲಾಭ ನಿನ್ನದಾಗಿ
ಕೇಡು ಮಾತ್ರಕ್ಕೆ ಎನಗೆ ಸಂಬಂಧಿಸಿದಿ ನಿನ್ನ
ಗೂಢ ಯುಕ್ತಿಗೆ ಸಮ ಆವದಯ್ಯಾ
ಕೇಡು ಲಾಭಂಗಳು ಕಾರಣಯಿಲ್ಲವೆಂದು ನೀ
ನಾಡಿದ ವಚನವು ಇಲ್ಲವೇನೋ
ನೋಡು ಪ್ರಖ್ಯಾತವಾಗಿ ಮೆರೆವುತಿದೆ ಜಗದಿ
ಕೂಡಿದ ಮೇಲೆ ಕುಲವನೆಣಿಪದೇನೋ
ಕ್ರೀಡಾದಿ ಗುಣ ವಿಶಿಷ್ಟ ಕುಂಭಿಣಿ ಭಾರಹರ
ಕಾಡೊಳು ತುರುಗಳ ಕಾಯ್ದರಸೇ
ಕ್ರೋಡಾದಿ ರೂಪ ಗುರು ವಿಜಯ ವಿಠ್ಠಲರೇಯಾ
ಕೂಡದಯ್ಯ ಕೋಪ ಎನ್ನ ಮೇಲೆ ೧

## ಮಟ್ಟತಾಳ

ಬಲವಂತನ ಸಹವಾಸ ಮಾಡುವ
ಕಾಲದಲ್ಲಿ ಮಾಡಿದ ಮೇಲೆ ಮರಳೆ ಮಾತುಗಳೇಕೆ
ಕೆಲಕಾಲ ನಿನ್ನ ಆಜ್ಞಾಧಾರಕನೆನೆಸಿ
ಜಲಜ ಪಾದಕೆ ಎನ್ನ ತಲೆ ಬಾಗುವನಾಗಿ
ಜಲಜ ಜಾಂಡದ ದೊರೆಗೆ ಮಾರು ನುಡಿವರಾರು
ತಿಳಿದು ಈ ಪರಿಯಲ್ಲಿ ಋಣವ ತೀರಿಸಲು
ಇಳಿಯೊಳಗೆ ಬಂದು ದ್ವಿವಿಂಶತಿ (೪೦) ವತ್ಸರ
ಬಲು ಸಂಭ್ರಮದಲ್ಲಿ ದುಡದಿತ್ತೆನೊ ದೇವ
ಕೆಲವು ಕಾರಣದಿಂದ ಕೆಲವು ಗಾತ್ರದಿಂದ
ಕೆಲವು ಪುಣ್ಯದಿಂದ ಕೆಲವು ಪಾಪದಿಂದ
ಹಲವು ಬಗೆಯಿಂದ ತೀರಿಸಿದದಕ್ಕಿನ್ನು
ಜಲಜ ನೇತ್ರದಿಂದ ನೋಡದ ಬಗೆ ಏನು
ಕುಲ ಪಾವನ ಮೂರ್ತಿ ಗುರು ವಿಜಯ ವಿಠ್ಠಲರೇಯಾ
ಒಲಿದು ಪಾಲಿಸದಿರಲು ಮೋಚನೆಯಾಗುವದೇ ೨

### ತ್ರಿವಿಡಿತಾಳ

ಕರಗಸದಲಿ ಶಿರವ ಕತ್ತರಿಸಿಕೊಳಬಹುದು
ನರಕದಲ್ಲಿ ವಾಸ ಮಾಡಬಹುದು
ಪರಿ ಪರಿ ಶ್ರಮಗಳ ಅನುಭವಿಸಲಿಬಹುದು
ಪರಿ ಪರಿ ದಾರಿದ್ರ ಚರಿಸಬಹುದು
ಹರಿ ನಿನ್ನ ಕೃಪಾ ಕಟಾಕ್ಷ ವಿರಹಿತವಾಗಿ
ಧರೆಯೊಳಗೆ ಬಂದು ಅಲ್ಪರೊಡನೆ
ಪರಮ ಪ್ರಖ್ಯಾತವಾದ ನಿನ್ನ ಮಹಿಮೆಗೆ
ಸರಿ ಇಲ್ಲವೆಂದು ಡಂಗುರವ ಹೊಯ್ದು
ಮೆರೆಸಿದೆ ಗೂಢವಾದ ಚೋರನಂದದಿ ತಿರುಗಿ
ಮರಳಿ ಪೋಗುವಂತೆ ಮಾಡಿದಂಥ
ವರವಾದರು ಸಹ ಕರ್ಮವನುಣಿಸಿದಿ
ಹರಿಯೆ ನಿನ್ನಿಚ್ಛೆಗೆ ಪೇಳ್ವರಾರು
ಸುರಲೋಲ ಮಹದ್ಧೃತಿ ಗುರು ವಿಜಯ ವಿಠ್ಠಲರೇಯ
ಸರಿಗಾಣೆ ಸರಿಗಾಣೆ ನಿನ್ನ ಸಂಕಲ್ಪಕ್ಕೆ ೩

### ಅಟ್ಟತಾಳ

ನೀನು ಮಾಡಿದ ಮರಿಯಾದಿ ಮೀರುವವರಿಲ್ಲ
ವನಜ ಜಾಂಡದ ಮಧ್ಯ ಎಣಿಸಿ ಗುಣಿಸಿ ನೋಡೆ
ವನಜನಾಭನೆ ನಿನ್ನ ಮಹಿಮೆಗೆ ನಮೊ ನಮೊ
ಸನಕಾದಿ ಮುನಿನುತ ಗುರು ವಿಜಯ ವಿಠ್ಠಲರೇಯಾ
ಋಣದಿಂದ ಮುಕ್ತನ್ನ ಮಾಡಿ ಸಲಹೊ ಎನ್ನ ೪

### ಆದಿತಾಳ

ಕರುಣ ಮಾಡುವಾಗ ಅಪರಾಧ ಮಹಾಗುಣ
ಕರುಣವ ಮಾಡದಿರೆ ಸುಗುಣವೆ ಅಪರಾಧ
ಹರಿ ನಿನ್ನ ಚಿತ್ತಕ್ಕೆ ಬಂದದ್ದೆ ಮುಖ್ಯವಯ್ಯಾ
ಸರಸಿಜ ಭವಹರ ಸುರರಾದಿಗಳ ದೊರಿಯೆ

ನರ ಸಖನಾದ ಗುರು ವಿಜಯ ವಿಠ್ಠಲರೇಯಾ
ಪರಮಾಪ್ತಾ ನಿರ್ಲಿಪ್ತಾ ನಿರ್ಮಲ ನಿತ್ಯ ತೃಪ್ತಾ ೫

**ಜತೆ**

ಯುಕುತಿವಂತರ ಮಧ್ಯ ನಿನಗಿಂದಧಿಕರಲ್ಲ
ನಖ ಶಿಖ ಪರಿಪೂರ್ಣ ಗುರು ವಿಜಯ ವಿಠ್ಠಲರೇಯಾ ॥

## ೧೫೪

[ಎನ್ನ ಪಕ್ಷವೊಹಿಸಿ ಹಿಂದಿನ ಕಾಲದಲ್ಲಿ ಅಭಿಮುಖನಾಗಿ ಕೃಪೆ ಮಾಡಿದ್ದಕ್ಕೆ ಸಕಲ ಸುರರು ಮನ್ನಿಸಿದರು. ಈಗ ನೀನು ನಿರ್ದಯನಾಗಿ ದೃಷ್ಟಿಯಲಿ ಸಹ ನೋಡದ್ದಕ್ಕಾಗಿ ಮಹಾ ಅಪರಾಧಿ ಎನಿಸಿ ದುರುಳರಿಗೆ ಒಪ್ಪಿಸುವದು ನ್ಯಾಯವಲ್ಲ. ನಿನ್ನ ಕಾಣದೆ ಮಹಾ ದುಃಖ ಸಾಗರದಿ ಮುಳುಗಿಪ್ಪನ ಮೇಲೆ ಕರುಣಿಸು, ಎಷ್ಟು ಅಪರಾಧ ಮಾಡಿದ್ದರೂ ಕ್ಷಮಿಸಿ ಪೊರೆಯೋ ಕಷ್ಣ ನಿನಗೆ ತಪ್ಪಿದ್ದಲ್ಲ ಎಂದು ಪ್ರಾರ್ಥನಾ.]

**ಧ್ರುವತಾಳ**

ದೃಷ್ಟಿಲಿ ನೋಡದಂಥ ಅಪರಾಧವೆನ್ನ ಕಡೆ
ಎಷ್ಟೆಷ್ಟು ನೋಡಿದಯ್ಯಾ ಕೃಷ್ಣರಾಯಾ
ದೃಷ್ಟಾಂತದಿಂದ ನೋಡು ಅವನಿಪತಿಯು ನರರ
ಕಷ್ಟ ಬಡಿಸುವನಾಗೆ ಅಪರಾಧವ
ಗಟ್ಯಾಗಿ ಉಚ್ಚರಿಸೆ ಪ್ರಾಂತ್ಯ ಭಾಗದಲಿ ಉ–
ತ್ಕೃಷ್ಟವಾದ ಬಾಧಿ ಬಡಿಸುವನು
ದೃಷ್ಟಿಗೆ ವಿಲಕ್ಷಣವಾಗಿದ್ದ ಅಪರಾಧ
ಮುಟ್ಟಿ ಬಾಧಿಪದು ಪೇಳಲೇನು
ದೃಷ್ಟಿಗೋಚರವಾದ ಅಪರಾಧ ಎನ್ನಿಂದ
ಎಷ್ಟು ಮಾತ್ರವಿಲ್ಲ ಎಣಿಸೆ ಗುಣಿಸೆ
ಸೃಷ್ಟೇಷ್ಟ ನಿನ್ನ ಆಜ್ಞ ಪಾಲಿಸುವದು ಅ–

ನಿಷ್ಟವಾಗುತಿದೆ ಬ್ರಹ್ಮೇಶಾದಿ
ಶಿಷ್ಟರೆಲ್ಲರು ಪರಮ ಭಕುತಿಯಿಂದಲೆ ಇದನೆ
ನಿಷ್ಠಿಯಿಂದಲಿ ಮಾಳ್ಪರ್‍ಯಾತಕ್ಕಯ್ಯಾ
ಶಿಷ್ಟ ಕರ್ಮದಿಂದ ನಿಷ್ಟವಾಗಿ
ಶಿಷ್ಟ ಕರ್ಮಕ್ಕೆ ಪರಮ ಶಿಷ್ಟತ್ವವೆನಲ್ಯಾಕೆ
ಶಿಷ್ಟಾಚಾರದಿಂದ ಅನಿಷ್ಟವಾಗುತಿರೆ
ದುಷ್ಟ ಕರ್ಮ ತೀರದ ಶಿಷ್ಟವಾಗೇ
ಶಿಷ್ಟ ಕರ್ಮಕೆ ಪರಮ ಶ್ರೇಷ್ಠತ್ವ ಪೇಳ್ವದ್ಯಾಕೆ
ದುಷ್ಟ ಪ್ರವರ್ತಿಗಳಿಗೆ ಶಿಕ್ಷವ್ಯಾಕೆ
ಇಷ್ಟು ಸಹಜವಾಗೆ ಶ್ರುತಿಗೆ ಪ್ರಾಮಾಣ್ಯವ್ಯಾಕೆ
ಎಷ್ಟು ಬಿನ್ನೈಸೆ ನೀನು ಸುಮ್ಮಗಿರೆ ಕಾಲ
ಹೃಷ್ಟಾ ಪುಷ್ಟಾನೆ ನಿನ್ನ ಕರುಣಿ ಎಂಬುವದೇಕೆ
ಕೊಟ್ಟ ಮಾತನು ತಪ್ಪದೆಂಬೊದೇಕೆ
ದುಷ್ಟವಾದ (ನಿಶ್ಶೇಷ) ಕರ್ಮ ಪುಣ್ಯ ಲೇಶವೆಂದು
ಇಷ್ಟು ಮಾತ್ರಕೆ ಎನಗೆ ಪೇಳಿದೇಕೆ
ವೃಷ್ಣಿ ಕುಲಾಬ್ಧಿಚಂದ್ರ ಗುರು ವಿಜಯ ವಿಠ್ಠಲ ನಿನ್ನ
ಮುಟ್ಟಿ ಭಜಿಸುವರಿಗೆ ಅಘವಿಲ್ಲದೆಂಬೊದ್ಯಾಕೆ ೧

## ಮಟ್ಟತಾಳ

ಆರಿಗೆ ಪೇಳಲಿ (ಕೇಳಲಿ) ಎನ್ನ ವೃತ್ತಾಂತವನು
ಕಾರುಣ್ಯದಲಿ ಪೊರೆವ ಘನ ಮಹಿಮನೆ ನೀನು
ಕಾರಣವಿಲ್ಲದಲೇ ಮುನಿದು ನೋಡುವದಕ್ಕೆ
ಶ್ರೀರಮಣ ನಿನಗೆ ಪೇಳಿ ಕೇಳುವರಿಲ್ಲ
ಧಾರುಣಿ ಮಧ್ಯದಲ್ಲಿ ಇರುವ ದೃಷ್ಟಾಂತರದಿ
ನರಾಧಿಪರಿಂದ ಜನಪತಿಯಿಂದಲಿ
(ನರಾಧಿಪ ಮಾರೆ ಗರ್ವರಾಗಿ)
ಕಾರುಣ್ಯಾ ಮಾಡಿ ಪರಮಾನುರಾಗದಲ್ಲಿ
ನಾರಾಯಣ ನಿನ್ನ ಕರ್ತೃತ್ವ ಮಹಿಮಿಗೆ
ಸರಿಯಿಲ್ಲ ಸರಿಯಿಲ್ಲ ಅತ್ಯದ್ಭುತವಯ್ಯಾ

ಮುರಹರನೆ ನೀನು ಅಭಿಮುಖನಾಗಿರಲು
ನೀರಧಿ ಪೋಲ್ವ ಕೃಪೆ ಮಾಡುವನಾಗಿ
ದೂರ ತೊಲಗದಂತೆ ಇರುತಿಪ್ಪರು ಅಂದು
ನೀರಜಾಕ್ಷನೆ ನೀನೆ ನಿರ್ದಯ ಮಾಡಿರಲು
ನಿರೀಕ್ಷಿಸಿ ನೋಡರು ಸುರರೆನ್ನಯ ದಿಕ್ಕು
ಗಾರು ಮಾಡದಲೆ ಬೇಗ ಪರಿಪಾಲಿಸುಯೆಂದು
ಬಾರಿ ಬಾರಿಗೆ ನುಡಿದು ಭ್ರಮಗೊಂಡಿತು ಮನಸು ಅ-
ಪಾರ ದಯಾನಿಧೆ ನೀ ಸುಮ್ಮನಿರಲು
ಆರನ ಕಾಣೆನೊ ಪ್ರತಿಬಂಧ ತೊಲಗಿಸಲು
ಭಾರಕರ್ತನಾದ ಗುರು ವಿಜಯ ವಿಠ್ಠಲರೇಯಾ
ದಾರಿದ್ರ ಭಂಜನನೆ ಸನ್ಮುಖನಾಗುವದು ೨

## ತ್ರಿವಿಡಿತಾಳ

ಎನ್ನ ಪಕ್ಷವು ನೀನೆ ಆವಾವ ಕಾಲದಲಿ
ಮನ್ನಾದಿ ಗ್ರಹಿಸುವದು ಮರಿಯದಲೇ
ಉನ್ನತಾಗ್ರಣಿಯೆಂದು ಸಹ ಯಾಚಿಸ ಬರಲು
ಘನ್ನ ಯುಕುತಿಯಿಂದ (ಯುಗಳಾಪೇಕ್ಷ) ಯುಗಳ ಪಕ್ಷ
ನ್ಯಾಮಿಸಿ ನಿಮ್ಮ ನಿಮ್ಮ ವಿಶ್ವಾಸದಂತೆ
(ನಿಮ್ಮ ನಿಮ್ಮ ಈಪ್ಸಿಸಿದಂತೆ)
ಸನ್ಮುದದಲಿ ಕೊಂಡು ಪೋಗಿರೆನಲು
ಘನ್ನ ಕೃಪೆಯ ಪಡೆವ ತನ್ನಿಮಿತ್ಯದಿ
ನಿನ್ನ ಅನಂತ ಜನ್ಮದಿ ಅರ್ಚಿಸಿದ
ಪುಣ್ಯದ ಫಲದಿಂದ ನೀ ಎನ್ನ ಪಕ್ಷವೆಂದು
ಸನ್ನುತಿಸಿ ಬೇಡಿಕೊಂಡ ಕಾರಣದಿಂದ ನೀ
(ಎನ್ನ ಪಕ್ಷವೆಂದು ಸನ್ನುತಿಸಿ ಬೇಡಿಕೊಂಡ ಕಾರಣದಿ)
ಎನ್ನ ಪಕ್ಷವು ನೀನೆ ಆವಾವ ಕಾಲದಲ್ಲಿ
ಮನ್ನದಿ ಮರೆವರೆ ಮಹಿಮಾನಂತಾ
ನಿನ್ನಾಜ್ಞಾದವನಾಗಿ ರಚಿಸಿದ ಕೃತ್ಯಗಳಿಗೆ
ಪುಣ್ಯ ಪಾಪಗಳೆನಗೆ ಸ್ಪರಶವುಂಟೆ

ಎನ್ನ ಪಕ್ಷವ ವೊಹಿಸಿ ಪರಪಕ್ಷದವರಿಗೆ
ಇನ್ನು ಒಪ್ಪಿಸದಿರೊ ಚನ್ನಿಗನೇ
ಜನ್ಮರಹಿತ ಗುರು ವಿಜಯ ವಿಠ್ಠಲರೇಯ ನೀನು
ಸನ್ಮುಖನಾಗಿ ಎನ್ನ ಶ್ರಮ ಓಡಿಸೋ ೩

## ಅಟ್ಟತಾಳ

ಪರಮಾಪ್ತ ನೀನಾಗಿ (ಪರಿ ಪರಿ) ಪಾರಿಶ್ರಮದಿಂದ
ಒರಲಿ ಬಳಲುತಿರೆ ಆರಿಗಾರರಂತೆ
ದೂರ ನೋಡುತಲಿದ್ದು ನಗುವರೆ ಸಿರಿ ಕೃಷ್ಣ
ಸರಿಯಿಲ್ಲ ಸರಿಯಿಲ್ಲ ಎನ್ನಯ ದುಃಖಕ್ಕೆ
ದೂರು ಕೇಳುವರಿಲ್ಲ ನಿನ್ನ ಹೊರತಾಗಿ
ಸಿರಿ ರಮಣನೆ ಗುರು ವಿಜಯ ವಿಠ್ಠಲರೇಯ
ಶರಣ ರಕ್ಷಕನೆಂಬೊ ಬಿರಿದು ನಿನ್ನದಯ್ಯಾ ೪

## ಆದಿತಾಳ

ಸದಕಾಲ ಅರಸಿನ ಆಜ್ಞವ ಮಾಳ್ಪನಾಗಿ
ಕದಾಚಿತ್ಕಾಲದಲ್ಲಿ ಕಿಂಚಿತ್ ಅಪರಾಧ
ಉದಯಿಸಿದರೆ ಶಿಕ್ಷೆ ಮಾಡುವನೇನೋ ಆವ
ಮಧುಸೂದನ ನಿನ್ನ ಆಳಾಗಿ ಅನುದಿನ
ಪದಗಳ ಭಜಿಸುವರ್ಗೆ ಕಿಂಕರನಾಗಿ ನಿನ್ನ
ಒದಗಿ ಬೇಡಿಕೊಂಡು ಜೀವನ್ನ ಮಾಡುವನು
ಆದ್ಯಂತವಿಲ್ಲದಿಪ್ಪ ಬಂಧಾನ ಮೊಸಗಿಸಿ
ಅಧಿಕಧಿಕವಾದ ದುಃಖ ನೋಡಿಪದೋ
ಇದು ಧರ್ಮದ ಪದ್ಧತಿಯೇ ಯದುಕುಲಾಬ್ಧಿ ಚಂದ್ರ
ಉದಧಿಶಯನ ಗುರು ವಿಜಯ ವಿಠ್ಠಲರೇಯಾ
ಉದಯಾರ್ಕನಂತೆ ಎನ್ನ ಮನದಲ್ಲಿ ನಿಲ್ಲುವದು ೫

## ಜತೆ

ಎಷ್ಟಪರಾಧಿಯಾಗೆ ಕೃಷ್ಣ ತಪ್ಪದೋ ನಿನಗೆ
ಇಷ್ಟು ದೈವವೆ ಗುರು ವಿಜಯ ವಿಠ್ಠಲರೇಯಾ ॥

## ೧೫೫

[ಎಮ್ಮ ಪರಾಜಿತವನ್ನು ಕೇಳಿ ಹಿಂದೆ ಕಾಮ್ಯಕ ವನದಲ್ಲಿ ಬಂದು ಎಮ್ಮ ಸಮ್ಮುಖದಲ್ಲಿ ನಿಂದು ಇತ್ತ ವರರೂಪ ಮಾತು ಮರೆತೆನೋ ಕೃಷ್ಣಯ್ಯ ! ನೀನು ಸ್ವತಂತ್ರನಾದವ. ಕೊಟ್ಟ ಮಾತು ತಪ್ಪೆನೆಂಬುದು ನಿನಗೆ ಘನತೆಯೇ ? ನಾನು ಅಯೋಗ್ಯನೇ ? ಕೃಷ್ಣಾ ನಿನ್ನ ಮಾತಿನಂತೆ ಸತ್ಯವಾಗಿ ಪ್ರತ್ಯಕ್ಷನಾಗೆಂದು ಪ್ರಾರ್ಥನಾ.]

## ಧ್ರುವತಾಳ

ಬೊಮ್ಮಾದಿಗಳಿತ್ತ ವರ ಸತ್ಯ ಮಾಡುವಂಥ
ಆ ಮಹಾಮಹಿಮನಾದ ಹರಿಯೇ ನೀನು
ಸಮ್ಮುಖದಲಿ ಇತ್ತ ವರವ ಸತ್ಯ ಮಾಡದಲೆ
ಈ ಮಹಿಯೊಳಗೆನ್ನ ಬಳಲಿಪದೋ
ಸಮ್ಮತವೇನು ನಿನಗೆ ಬಲು(ಲ) ದಯಾಸಿಂಧು ಕೃಷ್ಣ
ನಿಮ್ನವಾದ ಮಹಿಮಾ ಸಾರ್ವಭೌಮಾ
ಹಮ್ಮುಳ್ಳ ಭಕ್ತರ ಕೂಡ ಸಮ್ಮತವಲ್ಲ ನಿನಗೆ
ಸನ್ಮಂಗಳಾಂಗನೆ ಸುರರ ಪ್ರಾಣ
ನಮ್ಮಯ ಪರಾಜಿತ ಕೇಳಿದಾಕ್ಷಣದಲ್ಲಿ
ಕಾಮ್ಯ ನಾಮಕವಾದ ವನಕೆ ಬಂದು
ಸುಮ್ಮನೆ ಲೋಕವತು ಕ್ರೀಡೆ ಮಾಡುವನಾಗಿ
ಸಮ್ಮೋಹ ಮಾಡುವ ಚರಿಯ ತೋರೆ
ಮರ್ಯಾದ ಮಾತಿಲಿಂದ ಮಹಿಮನ್ನ ತುತಿಸಲಾಗಿ
ಸಮ್ಮುಖದಲಿಯಿತ್ತ ಮಾತು ಮರತೇ

ಬ್ರಹ್ಮೇಶ ನಾಮ ಗುರು ವಿಜಯ ವಿಠ್ಠಲರೇಯಾ
ಚಿನ್ಮಯನಿಗೆ ಇನಿತು ಮರಹು ಬಂತೆ ೧

## ಮಟ್ಟತಾಳ

ಸ್ವತಂತ್ರ ನೀನಾಗಿ ಬೊಮ್ಮಾಂಡ ಕಲ್ಪಿಸಿ
ಶ್ಯಾತ ಗರ್ಭಾದ್ಯರ ಶಿಕ್ಷ ರಕ್ಷಕನಾದ
ಭೂತಿ ಪೂರ್ಣನಿಗೆ ಈ ತೆರ ಮಾಡಲು
ಖ್ಯಾತಿ ಐದುವೆನೆಂತೊ ನೀ ಧರ್ಮಪಾಲಕನೆಂದು
ಭೂತಳ ಜನರಿಗೆ ಹಿತ ಮಾಳ್ಪವನಾಗಿ ಅ–
ನೇಕ ಕರ್ಮನಾಗೆ ಲೋಕ ಶಿಕ್ಷಾರ್ಥಾದೆ
ಜಾತಕರ್ಮಾದ್ಯನೇಕ ಕರ್ಮವ ಮಾಡೆ
ಕ್ಷಿತಿಯೊಳು ಸ್ಥಾಪಿಸಿ ಅಪಾತ್ರಕರ (ಅಪ್ರಾರ್ಥಕರ)
ಯಾತನೆ ಬಡಿಸುವ ಜ್ಯೋತಿರ್ಮಯನೆನೆಸಿ
ಮಾತು ತಪ್ಪುವದಾವ ಮರ್ಯಾದಿಯೊ ದೇವ
ಭೂತಿ ಮಹೇಶ್ವರ ಗುರು ವಿಜಯ ವಿಠ್ಠಲ ರೇಯಾ
ನೀತರೊಳು ಮರಹು ಪುಟ್ಟಿತೆ ಘನ ಮಹಿಮಾ ೨

## ತ್ರಿವಿಡಿತಾಳ

ಇಷ್ಟರೊಳಗೆ ಮರಹು ಹುಟ್ಟಿದರೆ ಇನ್ನು
ಎಷ್ಟು ಎಷ್ಟು ಕಲ್ಪ ಭಕ್ತರಿಗೆ
ಕೊಟ್ಟಿದ್ದ ವರಗಳ ಸಲಿಸುವಿ ಎಂತೊ ಕೃಷ್ಣ
ಶ್ರೇಷ್ಠ ಸಮ್ಮತವಾಹದೇನೊ ಹರಿಯೇ
ಶ್ರೇಷ್ಠವಾದ ವರವನೀವ ಸಮಯದಲಿ
ಘಟ್ಟ್ಯಾಗಿ ಯೋಗ್ಯತೆಯು ತಿಳಿಯಬಲ್ಲೆ
ಪ್ರೇಷ್ಟದಾಯಕನಾಗಿ ಅನುಗ್ರಹಿಸಿ ಈಗ
ಅಭೀಷ್ಟ ಪಾಲಿಸದಲೆ ಪೃಥ್ವಿಯಲಿ
ಕಷ್ಟ ಬಡಿಸುವದು ಘನತಿಯೇ ಎಲೋ ದೇವ
ಇಷ್ಟು ಮಾತ್ರಕೆ ವರವನಿತ್ಯಾತಕೆ

ಸೃಷ್ಟ್ಯಾದ್ಯಷ್ಟ ಕರ್ತು ಗುರು ವಿಜಯ ವಿಠ್ಠಲರೇಯ
ಎಷ್ಟರ ಮಾತು ನಿನಗೆ ನಿರ್ಮಲಾತ್ಮಾ ೩

**ಅಟ್ಟತಾಳ**

ಅನುಭವವಿಲ್ಲದ ಧನವಿರಲ್ಯಾತಕೆ
ಮನಮೂರ್ತಿ ನೋಡದ ಜ್ಞಾನವಿದ್ಯಾತಕೆ
ಬಿನಗು ಮಾತುಗಳಾಡೊ ಸ್ವಮತ ಸಿದ್ಧಾಂತವ
ಘನವೆಂದು ಬೀರಿದ ಶಾಸ್ತ್ರ ಓದಿ ಯಾತಕೆ
ಕುನರ ಕರ್ಮವ ಮಾಡಿ ಸುಖ ಬಡಲ್ಯಾತಕೆ
ದನುಜಾರಿ ನಿನ್ನಿಂದ ಕರುಣ ಸಂಪಾದಿಸಿ
ಆನಂದ ಬಡದಿದ್ದ ವರವಿದ್ದು ಯಾತಕೆ
ಮುನಿ ಮನ ಮಂದಿರ ಗುರು ವಿಜಯ ವಿಠ್ಠಲರೇಯಾ
ಕರುಣ ಮಾಡದಿದ್ದ ದೇಹವಿದ್ಯಾತಕೆ ೪

**ಆದಿತಾಳ**

ಜನ್ಮಾಂತರದಲಿ ನೀನಿತ್ತ ವರ ಸತ್ಯ ಮಾಳ್ಪದಕೆ
ಈ ಮಹಾಕಾಲದಲ್ಲಿ ಅಯೋಗ್ಯ ನಾನಾದೆ
ಚಿನ್ಮಯ ನಿನ್ನ ಇಚ್ಛೆ ಎಂಬೋದು ಮಾಳ್ಪದೇನು
ಸಮ್ಮತದಿಂದ ನೀನೇ ಈ ಜನ್ಮದಲ್ಲಿ ನುಡಿದ
ಈ ಮಹಾ ವಾಕ್ಯವನ್ನು ತ್ವರಿತದಿ ಸಿದ್ಧಿಗೈಸಿ
ಸಮ್ಮುಖವಾಗುವದು ಸ್ಥಾನಭೇದದಲ್ಲಾಗೆ
ಖಮ್ಮಹಿವೊಡೆಯ ಗುರು ವಿಜಯ ವಿಠ್ಠಲರೇಯಾ ೫

## ೧೫೬

[ಹಿಂದೆ ಕರ್ಣನ ವಧೆಗಾಗಿ ಅನೇಕ ವಿಧವಾದ ಮಾತುಗಳಾಡಿಸಿ ಅಧರ್ಮ ಯುದ್ಧ ವೆಂದು ನಾನು ಸಂದೇಹ ಉಳ್ಳವನಾಗೆ ಧರ್ಮವೆಂದು ತಿಳಿಹೇಳಿರಿ. ನಿನ್ನ ಮಾತಿನಲ್ಲಿ

ಸಂದೇಹಬಟ್ಟ ಕಾರಣ ಈಗ ಅವನಿಯಲ್ಲಿ ಹಾಕಿ, ಬೆಕ್ಕು ಇಲಿಯನ್ನು ಹಿಡಿದು ಚಿನ್ನಾಟ ವಾಡಿದ ತೆರ ಮಾಡುವಿ. ಇದು ನಿನಗೆ ನ್ಯಾಯವೇ ? ರಕ್ಷಿಸೆಂದು ಪ್ರಾರ್ಥನೆ.]

## ಧ್ರುವತಾಳ

ಆವನ್ನ ವಧೆಯನ್ನು ಇನಿತು ಮಾಡಿದಿ ಎಂದು
ದೇವ ಎನ್ನನು ಈಗ ಹಂಗಿಸಿದೀ
ಆವನ ವಧೆಗಾಗಿ ಭ್ರಾತೃನಿಂದಲಿ ನೀನೆ
ಆವ ಕಠಿಣೋಕ್ತಿಗಳು ನುಡಿಸಿದಿ
ಭಾವದಿ ಮರಹು ನಿನಗೆ ಪುಟ್ಟಿದರಾದಡೆ
ಸೇವಕ ಎನ್ನಿಂದ ದೂರಲೊಶವೇ
ಅವನಿಪತಿ ತಾನು ಸ್ವೇಚ್ಛಾನುಸಾರದಿಂದ
ಆವಾವ ಕೃತ್ಯ ಮಾಡೆ ಆಜ್ಞಾಧರರೂ
ಸುವಿಹಿತವೆಂದು ತಲೆದೂಗಲಿಬೇಕಲ್ಲದೆ
ಅವಿಹಿತವೆಂದು ನುಡಿದು ಬಾಳುವರೇ
ಪಾವನ ನಿರ್ದೋಷ ಬಲು ದಯಾನಿಧಿ ಎಂದು
ಆವ ನಿಗಮ ಶಾಸ್ತ್ರ ವರಲುತಿರೇ ಆ–
ಭಾವ ಜ್ಞಾನಿ[1]ಯು ನಾನು ನಿನ್ನಲ್ಲಿ ದೋಷವನ್ನು
ಭಾವಿಸಾದು ಇದಕಾವದು ಅನಿಜವೋ
ಪಾವನ್ನ ಮತಾನುಗರ ಸಮ್ಮತವಲ್ಲವೆಂದು
ಶ್ರೀವತ್ಸ ಲಾಂಛನ ಇನಿತು ತಿಳಿದು
ದೇವ ದೇವನೆ ನಿನಗಂಜುವೆನಲ್ಲದೆ
ಈ ವಿಧ ಕಪಟತನವೆ ಎನ್ನ ಕೂಡ
ಆವ ಕಾಲದಿ ಪ್ರಾಪ್ತವಾದ ರಾಜ್ಯವನ್ನು
ಕೋವಿದರರಸೆ ನೀನು ಶಾಂತಿಗೈಸಿ
ಆವರ್ಣ ಭೂಮಿಗಭಿಮುಖವಾಗಿ ಬಾರೆ
ಕೇವಲ ಗತವಾದ ಧೈರ್ಯದಿಂದ
ಇವನ ಹನನ ಎನ್ನಿಂದಲೇ ನಿತಹದೆಂದು

೧. ಅಜ್ಞಾನಿ.

ಶ್ರೀ ವಾಸುದೇವ ನಿನಗೆ ಮೊರಿಯಾ ನಿಡಲು
ಈ ವಿಷಯದಿ ನಿನಗೆ ಸಂದೇಹವ್ಯಾಕೆ ಇಂದು
ಸಾವಧಾನದಿ ನೀನೆ ಅಂದು ನುಡಿದು
ಭುವನದಲ್ಲೀಗ ನೀನ್ಯಾರೊ ನಾನಾರೊ ಎಂ–
ಬುವಂತೆ ಮಾಡಿ ಆವ ಭಿಡಿಯವನ್ನು ಲೇಶವಿಡದೆ
ಅವ್ಯವಧಾನದಿಂದ ದೂರುವ ಯುಕುತಿಗೆ
ಆವದು ಇದಕೆ ಸಮ ಅವನಿಯೊಳಗೆ
ಕಾವ ಕರುಣಿಯೆ ಭಕತರ ಸಮೂಹಕ್ಕೆ
ಆವ ನಾನೊಬ್ಬ ನಿನಗಲ್ಲದವನೇ
"ಕೈವಲ್ಯ ಲೋಕವತು ಕ್ರೀಡ"ನೆಂಬ ಮಾತು
ನಿರ್ವ್ಯಾಜದಿ ಎನಗೇವೆ ತೋರಿಸಿದಿ
ಜೀವನ ನಾಮಾ ಗುರು ವಿಜಯ ವಿಠ್ಠಲರೇಯಾ
ಅವ್ಯಾಹತವಾದ ಐಶ್ವರ್ಯ ಪರಿಪೂರ್ಣ ೧

## ಮಟ್ಟತಾಳ

ಧರ್ಮದ ಭಂಜನನೆ ನಿನ್ನ ಇಚ್ಛೆಯಲಿಂದ
ಧರ್ಮ ಯುದ್ಧಕೆ ಕಾಲವಾಗದಲಿರುವಂಥ
ಕರ್ಮವು ಆತನ್ನ ಪ್ರಾಪ್ತವಾಗಿರಲು
ಮರ್ಮವ ನೀನರಿತು ಇದೇ ಸಮಯದಲ್ಲಿ
ಕಾರ್ಮುಕ ಪ್ರಯೋಗ ಮಾಡು ಎಂದೆನಲಾಗಿ ಅ–
ಧರ್ಮವಿದೆಂತೆಂಬ ಸಂದೇಹದಿ ಜರಿಯೆ ಸ–
ದ್ಧರ್ಮ ಪಾಲಕ ನೀನೆ ಸಾದರದಲಿ ಪೇಳೆ
ನಿರ್ಮಲ ನಿನ್ನಾಜ್ಞಾ ನಡಿಸದ ಮಾತಿಗೆ
ನಿರ್ಮಮವೆನ್ನಲ್ಲಿ ನಿಲ್ಲದೆ ಕಡಿಯಿಂದ ಈ
ವರ್ಮವನೇ ಇತ್ತು ಸುಖ ದುಃಖನೀತವ
ಊರ್ವಿಗಳೊಳಗೆನ್ನ ಹಾಕಿದಿ ಮಹಕರುಣಿ
ಶರ್ಮಾ ವರ್ಮವನು ತೋರ್ಪವನು ನೀನೆ
ಘರ್ಮ ಸುಖ ಸಾರ ಗುರು ವಿಜಯ ವಿಠ್ಠಲ ರೇಯ ದು–
ಷ್ಕರ್ಮಿಯು ನಾನೆಂದೆ ನಿನ್ನಗಲಿದ ಕಾರಣದಿ ೨

## ತ್ರಿವಿಡಿತಾಳ

ಹರಿ ನೀನು ಕಲ್ಪಿಸಿದ ಸೃಷ್ಟಿಯೊಳಗೆ ಒಂದು
ಪರಮಾಣು ದೇಹ ನಿನ್ನ ವ್ಯತಿರಿಕ್ತದಿ
ಮರಣಗೈಸುವೆನೆಂಬ ಸ್ವೇಚ್ಛೆಯಿಂದಲಿ ಲಕುಮಿ
ಸರಸಿಜ ಭವಹರ ಸುರರೆಲ್ಲರೂ
ಭರದಿಂದ ಶಪಥದಿ ಯತ್ನ ಮಾಡಿದರನ್ನ
ಪರಿ ಸಮಾಪ್ತಿಯು ಮಾಡಲೊಶವೆ ದೇವ
ಮರುತ ಪಾವಕ ಮೊದಲಾದ ನಿಜ ಭಕ್ತರಿಗೆ
ಪರಮ ಅಹಂಕಾರವನ್ನು ಪ್ರಾಪ್ತವಾಗೆ
ಧರಿಗೆ ವಿಲಕ್ಷಣವಾದ ರೂಪದಿಂದ
ತೋರಿ ಒಂದೊಂದು ತೃಣ ದಹಿಸೆನಲು
ಸರಸದಿಂದಲಿ ಅವರವರ ಕೃತ್ಯದಿಂದ
ಪರಮ ಸಹಸವನ್ನು ವ್ಯರ್ಥವಾಗೆ
ಕರ ಮುಗಿದು ನಮಿಸಿ ತಮ್ಮ ತಮ್ಮ ಕರ್ತೃತ್ವ
ಹರಿ ನಿನ್ನಧೀನವೆಂದು ತುತಿಸಿದರೊ
ಮರಳೆ ನೋಡಿದರೆ ನೀನಿತ್ತ ಕಾರ್ಯದಲ್ಲಿ
ಅರಲವ ಕರ್ತೃತ್ವ ಇಪ್ಪದೆಂಬೊ
ಪರಿಯ ಭಾರತಿಯನ್ನು ಜನಿಸಿ ತೋರುತಲಿದೆ
ಹೊರಗೆ ಬಿಟ್ಟ ಶ್ವಾಸ ಒಳಗೆ ಕೊಂಬುವದಿಲ್ಲ
ವೀರನಾದವನನ್ನು ನೀನೆ ಹನನ ಮಾಡಿ
ಬರಿದೆ ಎನ್ನನು ಹೀಗೆ ದೂರಾದಿರೊ
ದುರುಳ ಮರ್ದನ ಗುರು ವಿಜಯ ವಿಠ್ಠಲರೇಯಾ
ನಿರುತ ಎನ್ನಯ ನಾಮ ರೂಪ ನೀನೆ ೩

## ಅಟ್ಟತಾಳ

ಘನವಾದ ಬಿಡಲೊಶವಾದ ಮೂಷಕ
ತನು ಅಂತವಹ ದುಃಖದಿಂದಲಿ ಮುಣಗಿರೆ
ಮನದಭಿಲಾಷದಿ ಮಾರ್ಜಾಲ ನಲಿಯುವಾಗ

ಎನಿತೆನ್ನ ದೈತ್ಯರ ಸಂಗದೊಳಗೆಯಿಟ್ಟು
ಗಣನೆಯಿಲ್ಲದ ಶ್ರಮಬಡುವ ಸಮಯದಲ್ಲಿ
ವನಜಾಕ್ಷ ನೀ ಇಂಥ ಅಪಹಾಸ್ಯ ಮಾಡೋದು
ಎನಗಿದು ಅತ್ಯಂತ ಆಯಾಸವೆ ಸರಿ
ಗುಣನಿಧಿ ಶ್ರೀ ಗುರು ವಿಜಯ ವಿಠ್ಠಲರೇಯಾ
ಮುನಿದು ನೋಡುವದಕ್ಕೆ ಅನ್ಯನೇನೊ ಸ್ವಾಮಿ ೬

## ಆದಿತಾಳ

ನಿನ್ನ ಇಚ್ಚೆಯಲಿಂದ ಎನಗಿದು ಫಲಿಸಿತು
ನಿನ್ನ ಇಚ್ಚೆಯಲಿಂದ ನಿಜ ಸುಖವಲ್ಲದಲೆ
ಖಿನ್ನಾಗಿ ಚರಿಸಿದೆ ದ್ವಿವಿಂಶತಿ ವತ್ಸರವ ।

(ಮುಂದೆ ಉಪಲಬ್ಧವಿಲ್ಲ)

## ೧೫೭

[ಹಿಂದೆ ನಾಲ್ಕು ಜನುಮಗಳಲ್ಲಿ ಅನುಗ್ರಹ ಮಾಡಿದ ಹರಿಯೆ ಇತರ ದೇಹಾನು ಬಂಧಗಳಂತೆ ಕರ್ಮ ತೀರಿತೆಂದು ಬಿಡುವರೇ ? ನೀನು ಅನಂತ ಕಾಲದ ಅನಿಮಿತ್ತ ಬಂಧು, ತಂದೆ ಬಾಲಕರ ತಪ್ಪು ಎಣಿಸದಂತೆ ಇಂದು ಅನುಗ್ರಹಿಸಿ ನೀನು ಪೂರ್ಣ ಕಾಮನಾದರೂ ಭಕ್ತರನ್ನು ಕಾಪಾಡುವ ಭಾರ ನಿನ್ನದೆಂದು ಪ್ರಾರ್ಥನಾ.]

## ಧ್ರುವತಾಳ

ಕ್ಷಿತಿಯ ಜನರು ನಿನ್ನ ದಯದಿ ಬೇಡುವದಕ್ಕೆ
ಸಥೆ ಒಂದುಂಟು ಕೇಳು ಬಿನ್ನೈಸುವೆ
"ಪಿತಾಸಿ ಲೋಕಸ್ಯ ಚರಾಚರಸ್ಯ" "ಯೋನಃ
ಪಿತಾ ಜನಿತಾ" "ವಿಧ ಪುರುಷ ಪುರುಷಯೋ"
ಇತ್ಯಾದಿ ಪ್ರಮಾಣದಂತೆ ಸೃಷ್ಟಿಯ ಮಾಡಿ ಸ್ಥಿತಿಗೈಸಿ
ಪ್ರಾಂತ್ಯದಲ್ಲಿ ಲಯವು ಮಾಡಿ

ಗತಿಯ ಕೊಡುವಿ ಎಂಬ ಕಾರಣದಿಂದ
ಸಥಿಯಿಂದ ಬೇಡುವರು ಈಪ್ಸಿತವ
ಅತಿಶಯವುಂಟು ಎನಗೆ ಇದಕಿಂದಧಿಕವಾದ
ಸಥೆ ಮಾಳ್ಪ ಕಾರಣವು ಸಾರ್ವಭೌಮಾ
ಚತುರ್ದಶ ಭುವನಗಳು ಜಠರದಿ ಧರಿಪ ನೀ
ಗತಜನ್ಮದೊಳಗೊಂದು ಜನ್ಮದಲ್ಲಿ
ಪಿತನಾಗಿ ಉದರದಿಂದ ಪಡದೆ ಕರುಣನಿಧೆ
ಪಿತಾಮಹನಿಗೆ ಪುತ್ರನೆನಿಸಿ
ಪಿತಾಮಹನಾಗಿ ಮತ್ತೊಂದು ಜನ್ಮದಲ್ಲಿ
ಆಪ್ತನಾಗಿ ದೇಹ ಬಂಧುನಾಗಿ
ಅತಿಹಿತ ಮಾಳ್ಪುವಂಥ ಸಖನಾಗಿ ಗುರುವಾಗಿ
ರಥಿಕನಾಗಿ ಏಕತ್ರ ಸ್ಥಿತನಾಗಿ
ಭಾತೃನಿಗೆ ಕೈವಶನಾದ ಒಡೆಯನೆಂಬ
ಈ ತೆರವಾದ ಸಂಬಂಧವನೇಕವಿರಲು
ರತಿಪತಿ ಪಿತ ನೀನು ಮುನಿದು ನೋಡಲಿ ಸಲ್ಲದಿ–
ನಿತೆಂದು ಸಥಿಯಿಂದ ಅಂಜದಾದೆ
ತುತಿಸಿ ನೋಡಿದದಕೆ ಮನಕೆ ಬಾರದು ಏನೊ ನಿ–
ಮಿತ್ಯ ಅನಿಮಿತ್ಯ ಸಂಜ್ಞ ಸರಿದವೇನೊ
ಶ್ರುತಿಗೆ ನಿಲುಕದ ಗುರು ವಿಜಯ ವಿಠ್ಠಲ ರೇಯಾ
ಮತಿವಂತರಾದವರು ಮೆಚ್ಚರಯ್ಯಾ ೧

## ಮಟ್ಟತಾಳ

ದೇಹದ ನಿಮಿತ್ಯ ನಾನಾ ವಿಧವಾದ
ದೇಹ ಸಂಬಂಧಿಗಳು ಮೇಳನವಾಗುವರು
ದೇಹಾಖ್ಯ ವ್ಯಾಜ ತೊಲಗಿದ ಮೇಲ್ಯಾರಿಗೆ ಆ–
ರಾಹರು ಎಂದು ಕೇಳುವೆ ಎಲೊ ದೇವಾ
ಬಹು ದೇಹವ ಪೋದರು ಪೋಗದ ಸಂಬಂಧ
ಶ್ರೀಹರಿ ಎನಗುಂಟು ತೆರಳಿ ಪೋಪದಲ್ಲ ಅ–
ವ್ಯಾಹತವಾದ ನಿಮಿತ್ಯಾನಿಮಿತ್ಯ

ಅಹರಹದಲ್ಲಿರಲು ಜರಿದು ನೋಳ್ಪದಿದು
ವಿಹಿತವಲ್ಲವು ಕೇಳು ಬರಿದೆ ದಂಧನವ್ಯಾಕೆ
ಅಹಿ ತಲ್ಪನೆ ಗುರು ವಿಜಯ ವಿಠ್ಠಲರೇಯಾ
ನೇಹ ಬಿಡುವದಲ್ಲ ಅನ್ಯರ ಮಾತಿಗೆ ೨

## ತ್ರಿವಿಡಿತಾಳ

ಒಂದು ನಿಮಿತ್ಯದಿಂದ ಬೊಮ್ಮಾಂಡದಲಿ ಜನರು
ಛಂದ ಛಂದದ ಕೃಪೆಯು ಮಾಳ್ಪರ್ಯೆಯ್ಯಾ
ಇಂದಿರಪತಿ ಎನಗೆ ನಿನಗೆ ಇನಿತವಾದ
ಬಂಧುತ್ವ ಇರಲಾಗಿ ಎಳ್ಳನಿತು
ಕುಂದು ಮಾಡದಲೆ ಪ್ರವಾಹವಾದ ಸುಖ
ವೃಂದಗಳಿಂದಲ್ಲಿ ರಕ್ಷಿಪದೊ
ತಂದೆ ನಿನ್ನಗೆ ಕೃಪೆ ಪುಟ್ಟದಿದ್ದರೆ ಎ-
ನ್ನಿಂದಲೇನಾಹದೊ ಅಂಬುಜಾಕ್ಷ
ತಂದೆ ಬಾಲ್ಯದಿ ಸುತರು ಕುಂದುಗಳೆಷ್ಟು ಮಾಡೆ
ಮಂದಿಗೆ ಒಪ್ಪಿಸಿ ಕೊಡುವನೇನೊ
ಹಿಂದೆನ್ನ ಅಪರಾಧ ಎಷ್ಟು ಕ್ಷಮಿಸಿದಿ ನೋಡು
ಇಂದು ಮಾತ್ರಕ ನಾನಲ್ಲದವನೇ
ಬಂಧು ಅನಿಮಿತ್ಯ ಗುರು ವಿಜಯ ವಿಠ್ಠಲರೇಯಾ
ಎಂದೆಂದಗಲದಂತೆ ಅನುಗ್ರಹಿಸೊ ೩

## ಅಟ್ಟತಾಳ

ನಿನ್ನಿಂದ ನೀನೆವೆ ರಮಿಪ ಪೂರ್ಣನಿಗೆ
ಭಿನ್ನ ವಸ್ತುಗಳಿಂದ ಪ್ರಯೋಜನವೇನು
ಮುನ್ನಿನ ಕರ್ಮವು ಕಾಲ ಪ್ರಕೃತಿ ಜೀವ
ಅನುಸಾರದಿಂದ ಮಾಳ್ಪುವುನೆಂಬಿಯಾ
ಸನ್ಮತವೆ ಸರಿ ಕಾರಣ ಒಂದು ಉಂಟು
ಚೆನ್ನಾಗಿ ಕೇಳುವದೆಲವೊ ಮಹಾರಾಜನೆ
ಉನ್ನತವಾಗಿದ್ದ ಸಂಪದದಿಂದಲ್ಲಿ

ಘನ್ನನಿವನೆನಸಿ ಪ್ರಾಂತ್ಯ ಭಾಗದಲ್ಲಿ
ಮನುಜಾಧಮರಿಂದ ಕೊರತೆ ಮಾಳ್ಪದೇನೊ
ಮುನ್ನ ಮಾಡಿದ ಉಪಕಾರವು ಏನುಂಟು
ಇನ್ನೀಗ ಮಾಡಿದ ಅನುಪಕಾರವೇನೊ
ಚಿನ್ಮಯ ಮೂರುತಿ ಗುರು ವಿಜಯ ವಿಠ್ಠಲರೇಯಾ
ಮನ್ನಿಸಿ ಇದಕಿನ್ನು ಉತ್ತರ ಪೇಳುವದು ೪

(ಮುಂದೆ ಉಪಲಬ್ಧವಿಲ್ಲ)

## ೧೫೮

[ಕ್ಷಮಾಪನಪೂರ್ವಕ ತ್ರಿವಿಧ ಶಾಪಗಳಿಂದ ಪ್ರಶಮನ ಮಾಡಿ ಜಗದೀಶನಾದ ಶ್ರೀಹರಿಯನ್ನು ಹೃದ್ಗುಹದಲ್ಲಿ ತೋರಿಸಿರೆಂದು ಭೀಷ್ಮ, ದ್ರೋಣಾದಿಗಳ ಪ್ರಾರ್ಥನೆ.]

### ಧ್ರುವತಾಳ

ಎಲೆ ಎಲೆ ಭೀಷ್ಮ ದ್ರೋಣ ಕೃಪ ಕರ್ಣ ಅಶ್ವತ್ಥಾಮ
ಸಲೆ ಕರುಣಿಗಳ ಪಾದ ಸರಸಿರುಹಕೆ
ತಲೆ ಬಾಗಿ ನಮಿಸಿ ಸತತ ಕೈ ಮುಗಿದು ಪ್ರಾರ್ಥಿಸುವೆ
ಒಲಿದು ಪಾಲಿಸಬೇಕು ಅನ್ಯನೆನ್ನದೆ
ಛಲದಿ ನೋಡುವದಕ್ಕೆ ದ್ವೇಷಿ ಆದವನಲ್ಲ
ಕೆಲ ಕಾಲ ತಪ್ಪದನುಬಂಧ ಉಂಟು
ಇಳಿಯ ಜನರ ತೆರದಿ ಉದರಗೋಸುಗವಾಗಿ
ಕುಲಗೇಡಿ ಕೃತ್ಯವನ್ನು ಚರಿಸಲಿಲ್ಲ
ಖಳ ವೈರಿ ಪಾದಗಳ ಜ್ಞಾನ ಲಕ್ಷಣ ಮುಕುಟಾ ಭಕ್ತಾ–
ವಳಿಯ ಮಸ್ತಕ ಭರಣವೆಂದು ತಿಳಿದು
ಮಲರಹಿತವಾದ ನಮ್ಮಿಂದರ್ಚಿತವೆಂದು
ತಿಳಿದಂಗೀಕರಿಸಿದ ಬಗೆ ಎಲ್ಲ ತಿಳಿವದು
"ಮೈಯೈವೈತೇ ನಿಹತಾಃ ಪೂರ್ವಮೇವ"ವೆಂಬ

ಜಲಜನಾಭನ ವಿಮಲ ವಾಕ್ಯದಂತೆ
ವಿಲಯದಿ ಸ್ಥಿತಿ ನಿಯಮನ ಜ್ಞಾನಾಜ್ಞಾನ
ಬಲವದ್ರೂಪವಾದ ಬಂಧ ಮೋಕ್ಷ
ಬಲವಂತನಾದ ಹರಿಯ ಆಧೀನವಲ್ಲದಲೆ
ನಿ(ದು)ರ್ಬಲ ಜೀವರಿಂದಾಗುವದೆ
ತಿಳಿಯಬಲ್ಲವರೊಳು ಆಧಿಕ್ಯವಾದ ನಿಮಗೆ
ಪೇಳಲಾಹದೇನೊ ಬಿನ್ನಪವ
ನಳಿನ ಸಂಭವ ಜನಕ ಗುರು ವಿಜಯ ವಿಠ್ಠಲರೇಯಾ
ವೊಲಿವ ನಿಮ್ಮಯ ಕೃಪೆಗೆ ಆವಕಾಲ ೧

## ಮಟ್ಟತಾಳ

ಅನಾದಿ ಕರ್ಮದ ಪ್ರಾಬಲ್ಯ ಕಾರಣದಿ
ಪ್ರಾಣನಾಥನ ನಿಜ ಸಂಕಲ್ಪದಿ ಕರಣ
ಮಾನಿಗಳಾದಂಥ ನಿಮ್ಮಿಂದಲೆ ಎನಗೆ
ಹೀನವಾಗಿರುವ ಕಲಿಕೃತ ಕಲ್ಮಷವ
ಸಾನುರಾಗದಿ ನಿಮ್ಮ ಪದಕೆರಗುವೆ ಸತತ
ದೀನನಾದವನನ್ನು ದೂರ ನೋಡದಲೆ
ಪ್ರೀಣರಾಗಿ ಎನ್ನ ವಾಕ್ಯವ ಮನ್ನಿಸಿ
ತ್ರಾಣರಾಗುವದು ಅಪರಾಧವೆಣಿಸದಲೆ
ದಾನವಾಂತಕ ಗುರು ವಿಜಯ ವಿಠ್ಠಲ ರಾಯನ
ಕಾಣುವ ಉಪಾಯ ಕರುಣಿಸುವದು ಬೇಗ ೨

## ತ್ರಿವಿಡಿತಾಳ

ನಿಮ್ಮ ನಿಗ್ರಹದಿಂದ ಈ ಪೃಥ್ವಿಯಲಿ ಬಂದು
ಜನ್ಮವೈದಿದೆ ಬಲು ನೀಚವಾದ
ನಿಮ್ನವಾಗಿದ್ದು ಕಾಮ ಲೋಭಾರ್ಣವದಿ ಮುಳುಗಿ ವೈ-
ಷಮ್ಯ ಭಾವಾಭಿಜನ್ಯ ತ್ರಿವಿಧ ಪಾಪ
ಶ್ರಮಗಳನುಭವಿಸಿ ಮುಂಗಾಣದಲೆ ಹರಿಯ
ಜನ್ಮದೊಳಗೆ ಒಮ್ಮೆ ಸ್ಮರಿಸದಲೆ

ಖಮ್ಮಹಿಯೊಳಗೆಲ್ಲ ನಿಂದಿತನಾದೆ ಬಲು
ನಿಮ್ಮ ವಾಕ್ಯದಿಂದ ಇನಿತಾಯಿತು
ನಮೊ ನಮೊ ನಿಮ್ಮ ಪಾದ ಸರಸಿರುಹಕೆ
ಸಮ್ಮುಖರಾಗಿ ನೀವು ತವಕದಿಂದ
ಹಮ್ಮಿನಿಂದಲಿ ಯಿತ್ತ ತ್ರಿವಿಧ ಶಾಪಗಳನ್ನು ಪ್ರಾ–
ಶಮ್ಯ ಐದಿಸುವದು ಕರುಣ ಮಾಡಿ
ಬೊಮ್ಮ ಜನಕ ಗುರು ವಿಜಯ ವಿಠ್ಠಲರೇಯನೊಡ
ಸನ್ಮಂಗಳಾಂಗನ ತೋರುವದು ೩

**ಅಟ್ಟತಾಳ**

ಗೋಪುರದ ಮೇಲೆ ಬೊಂಬೆಯು ಇದ್ದಂತೆ
ಸುಪರಾಕ್ರಮಿಯಾದ ವೀರನ ಕೈಯಲ್ಲಿ
ದೀಪುತವಾಗಿದ್ದ ಘನ್ನ ಶಸ್ತ್ರದಂತೆ
ಸುಪವಿತ್ರವಾದ ಯಜ್ಞಕರ್ತನ ಕೈಯ್ಯ
ದೀಪುತವಾಗಿದ್ದ ದರ್ವಿಯ ತೆರದಂತೆ
ವ್ಯಾಪಾರ ಮಾಡುವ ವಾಣಿಜ್ಯನ ಕೈಯ್ಯ
ಪ್ರಾಪುತವಾಗಿದ್ದ ಸೊಲಗಿ[1]ಯ ತೆರದಂತೆ
ಆಪಜಾಸನ[2] ಮುಖ್ಯ ಸುರರು ಇನಿತು ಯಿರಲು
ಈ ಪ್ರಪಂಚದಲ್ಲಿ ನಾನ್ಯಾತರವನಯ್ಯಾ
ಅಪಾರ ಮಹಿಮ ಗುರು ವಿಜಯ ವಿಠ್ಠಲರೇಯಾ
ದ್ವೀಪಾಧಿಪತಿ ಆಜ್ಞಾದವರೆ ಎಲ್ಲ ೪

**ಆದಿತಾಳ**

ಕಾಲಕರ್ಮದಿಂದ ತನ್ನ ಕ್ಲಿಪ್ತಿಯನೆಯಿತ್ತು
ಈ ಲೋಕ ನಿಮಿತ್ಯವಾದ ಕೀರ್ತ್ಯಪಕೀರ್ತಿ
ಲೀಲೆಯಿಂದ ಪ್ರಾಣಿಗಳಿಗೆ ತಂದ ದೇವ ತಾನೆ ಒಲಿದು
ಶ್ರೀ ಲೋಲ ಪ್ರಿಯ ಗುರು ವಿಜಯ ವಿಠ್ಠಲರೇಯಾ
ಪಾಲಿಸಿದರು ಬರಿದೆ ಖ್ಯಾತಿಯ ತಂದಿತ್ತು ೫

---

೧. ಒಂದು ಅಳತೆಯ ಸೇರು ೨. ಬ್ರಹ್ಮ

**ಜತೆ**

ಯುಗಳ ಪಾದ ನಮಿಸಿ ಮುಗಿವೆ ಕರಗಳನ್ನು
ಜಗದೀಶ ಗುರು ವಿಜಯ ವಿಠ್ಠಲನ್ನ ತೋರಿಪದು ೬

## ೧೫೯

**ಧ್ರುವತಾಳ**

ಬೊಮ್ಮಜನಕ ರಹಸ್ಯ ಪೇಳಿದ ವಾಕ್ಯ ಮೋದ ಒಂ-
ದೆ ಹೊರ್ತು ಸಹ ಕಾರ್ಯವಾಗಲಿಲ್ಲ ಬಂಧಾನ ಪೋಗಲಿಲ್ಲ
ಅಹಿತರ ಸಂಗದಿಂದ ತೊಲಗಲಿಲ್ಲ
ದೇಹ ದೇಹಗಳು ನಿಯಮಿಸಿ ಜೀವರಿಗೆ
ದೇಹಸ್ಥಿತನಾಗಿಪ್ಪ ಹೃತ್ಕಮಲದಲ್ಲಿ
ಪಹರಿಯ ತಿರುಗುತ ಪ್ರೇರಿಪ ವ್ಯಾಪಾರ
ವಿಹಿತಾವಿಹಿತ ಮೀರಲು ಸುರರಿಗೊಶವೆ
ಅಹೋ ರಾತ್ರಿಯಲಿ ಸುಖದಿಂದ ನಿನ್ನವರ
ಸಹವಾಸದಲಿ ಯಿಪ್ಪ ನರನ ತಂದು
ಲೋಹ ತಪ್ತದ ಮೇಲೆ ನಿಲ್ಲಿಸಿ ನೋಡಿದಂತೆ
ಇಹಲೋಕದಿ ತಂದು ಸುಖ ದುಃಖ ವೇಗ ಪ್ರಾ-
ವಹದೊಳಗೆ ಹಾಕಿ ಘಾಸೆ ಬಡಿಸುವುದು
ಶ್ರೀಹರಿ ನಿನಗಿದು ಸಮ್ಮತವೇ
ಬಾಹುಳ್ಯ ಕೃಪನಿಧೆ ಗುರು ವಿಜಯ ವಿಠ್ಠಲರೇಯಾಘ
ಮಹಾವಟಿಗೆ ಸ್ವಹಲೋಲ[೧] ನೀನೆ ೩

**ಅಟ್ಟತಾಳ**

ಇದಕೆ ಐವರು ಕಾರಣವೆನಿಪರು
ಆ ಧುರನಿಷ್ಠರು ಭಕ್ತ್ಯಾದಿ ಗುಣದಿಂದ

೧. ಮಹಾಕಾಡು ಅರಣ್ಯಕ್ಕೆ ಅಗ್ನಿ ನೀನೆ.

ಆಧಿಕ್ಯರೆನಿಸಿ ನಿರ್ಲೇಪರಾದರು
ಅವರ ಮಧ್ಯದಿ ನಾನೇವೆ ನಿನ್ನಯ ಪಾ–
ದಾರವಿಂದಕೆ ಸಲ್ಲದವನೇನೊ
ಈ ದೇಹದಿಂದಲಿ ಭಜಿಸಿದ ಕಾಲಕ್ಕು
ಸಾದರದಲಿ ಪೂರ್ವ ಸಂಬಂಧ ನಿಮಿತ್ಯ
ವಾದರೂ ರಕ್ಷಿಸಬಹುದಯ್ಯಾ ದೇವನೆ
ವೇದೇಶ ನಿನ್ನ ಪ್ರಸಾದವಾದ ಮೇಲೆ
ಬಾಧಿಗಳುಂಟೇನೊ ಇಹಪರದಿ ನೋಡಾ
ಮೋದ ಪ್ರಮೋದ ಗುರು ವಿಜಯ ವಿಠ್ಠಲರೇಯಾ
ಆದರಿಪರಿಲ್ಲ ನಿನ್ನ ಹೊರತಾಗಿ ೪

**ಆದಿತಾಳ**

ಸ್ವತಮೇವ ಪೂರ್ಣನಿಗೆ ಅನ್ಯವಾದ ವಿಷಯದಿಂದ
ತೃಪ್ತಿಯ ಬಡಿಸುವ ನರರಿಲ್ಲ ಜಗದೊಳು
ಅತ ಏವ ಪೂರ್ಣನಹುದು ಶ್ರುತಿ ಸ್ಮೃತಿ ಸಮ್ಮತ
ಅತಿರೋಹಿತ ಜ್ಞಾನಿಗಳಿಗೆ ಜ್ಞಾನ ಭಕ್ತಿ ವೀರಾಗ
ವ್ಯತಿರೇಕ ಅನ್ಯಾಪೇಕ್ಷ ಪೂರ್ಣರೆಂದೆನಿಪದು
ಅತ್ಯಂತ ವಿಲಕ್ಷಣಗಿದಾಶ್ಚರ್ಯವೇನೂ
ಮಿತಿಯಿಲ್ಲದ ಕರ್ಮ ಪಾಶದಿಂದ ಬದ್ಧನಾಗಿ
ತುತಿಸುವೆ ನಿನ್ನ ಗುಣರೂಪ ಕ್ರೀಯಂಗಳ
ಪ್ರತಿಹತ ನೀನೊಲಿದು ಮಾಡಿಸಿದದರೊಳು
ಅತಿಶಯವಾಗಿ ಪ್ರೀತಿ ಐದಿ ನಿಜಾಲಯ
ಪ್ರತಿಕೂಲವಾಗಿದ್ದ ದುಷ್ಕರ್ಮ ದೂರ ಮಾಡೊ
ಅತಿಹಿತ ಶ್ರೀ ಗುರು ವಿಜಯ ವಿಠ್ಠಲರೇಯಾ
ಭಕುತಿಯೇ ಕಾರಣ ನಿನ್ನ ಕರುಣವಾಗುವದಕ್ಕೆ ೫

**ಜತೆ**

ಸಾಸಿರ ಹಣ ಒಂದು ಕಾಸಿಗೆ ತೀರದಂತೆ
ತೋಷವೆ ಬಡುವದು ಗುರು ವಿಜಯ ವಿಠ್ಠಲ ॥

# ಲೋಕನೀತಿಯ ಸುಳಾದಿ

## ೧೬೦

### ಧ್ರುವತಾಳ

ವೈವಾಹ ಮಾಡಿದೆ ವಿಭವ ಪೂರ್ವಕದಿಂದ
ಆವದು ಇದಕೆ ಸಮವೆಂದು ತಿಳಿದು
ಭಾವದಲಿ ಹಿಗ್ಗಿ ಬಳಲಿದರೆ ಇದಕೆ
ಭಾವಜ್ಞರಾದವರು ಮೆಚ್ಚುವರೇ
"ಯ ದೇವ ಛಿದ್ಯಯಾ ಕುರತೇ ಶ್ರದ್ಧಯಾ
ತದೇವ ವೀರ್ಯವತ್ತರಂ ಭವತಿ ॥ ಇತ್ಯುಪನಿಷದ್ ।"
ಏವ ಮಾದಿಗಳು ಈ ಪರಿ ವರಲುತಿರೆ ಅ- ।
ಭಾವ ಜ್ಞಾನದಿಂದ ಅಹಂಕಾರದಿ
ಸಾವಿರ ಸಂಖ್ಯವಾದ ಕೃತಿಗಳು ಮಾಡಲೇಕೆ
ದೇವ ದೇವನು ದೃಷ್ಟಿಯಿಂದ ನೋಡಾ
ಅವನಿಯೊಳಗೆ ಅಲ್ಪರ ಮಧ್ಯ ಕೀರ್ತಿ
ಬಾಹೋದಲ್ಲದೆ ಅದಕ್ಕೇನಾಹದೋ
ಕೇವಲ ಶ್ರಮದಿಂದ ಅರ್ಥ ಸಂಪಾದಿಸಿ
ಆಹೋದು ಸಾಲದದಕೆ ಋಣವ ಮಾಡಿ
ಧಾವಂತ ಈ ಪರಿ ಘಟಣವಾದ ಕರ್ಮ
ಪಾವನ್ನವಾದ ಪುಣ್ಯವಾಗದಿರೆ
ಭುವನದಲ್ಲಿ ಬರಿದೆ ಆಯಾಸ ಬಡಲೇಕೆ
ವೈವಾಹ ಮಾಡುವ ವಿಧಿ ಬ್ಯಾರುಂಟು
ಆವಾವ ಕರ್ಮದಿಂದ ಮೂರೇಳು ಗೋತ್ರದವರು
ಪವಿತ್ರರಾಗುವರು ಪಾಪದಿಂದ
ಸಾವಧಾನದಿ ಕೇಳು ಭಕುತಿಯಿಂದಲಿ ಮನವೆ
ನೋವು ನಿನಗಾಗದು ಭವದಲಿಂದ
ಕಾವ ಕರುಣನಿಧಿ ಗುರು ವಿಜಯ ವಿಠ್ಠಲರೇಯ
ಸೇವಕನೆಂದವಗೆ ಸುಖವೀವನೋ ೧

**ಮಟ್ಟತಾಳ**

ಮಕ್ಕಳು ಎನಗಾರು ಅವರಿಗೆ ನಾನಾರು
ರಕ್ಕಸಾಂತಕ ತಾನು ಕರ್ಮಾನು ಬಂಧದಲಿ
ಮುಖ್ಯವಾಗಿ ತನ್ನ ಕ್ಲಿಪ್ತಾನುಸಾರದಲಿ
ಅಕ್ಕರದಿಂದಲ್ಲಿ ಆತ್ಮಜಗೆ ಪಿತನು
ತಾರಾ ಸಂಜ್ಞ ಹರಿ ಪಾದದಿಂದ ಉದುಭವಿಸಿದ
ಪರಮ ಪಾವನ್ನ ಸ್ತ್ರೀಯರುಂಟು
ಸಿರಿಪತಿ ಅದರಂತೆ ಸ್ತ್ರೀ (ಶ್ರೀ) ರೂಪವನು ಧರಿಸಿ
ಪರಿವ್ಯಾಪ್ತನಾಗಿಪ್ಪ ಸ್ತ್ರೀಯರಲ್ಲಿ
ತರುವಾಯದಲಿ ಸ್ಥೂಲ ಬೊಮ್ಮಾಂಡದೊಳಗಿದ್ದ
ಹರಿ ಸಿರಿ ಮೊದಲಾದ ದಿವಿಜರನ್ನು
ಶರೀರದಲಿ ತಂದು ಐಕ್ಯ ಚಿಂತಿಸು ಈ
ತೆರದಿ ತಿಳಿದು ಪರಮ ಭಕುತಿಯಿಂದ
ವರ ವಧುಗಳಿಗಾಗಿ ಪರಿಪರಿ ವಸ್ತುಗಳೀ
ಪರಿಯ ಚಿಂತಿಸಿ ಹರಿ ಸಿರಿಗರ್ಪಿಸು
ಸಿರಿದೇವಿ ಮೊದಲಾದ ಸ್ತ್ರೀಯರಲಂಕರಿಸಿ
ಪರಮ ಭಕುತಿಯಿಂದ ನಾರಾಯಣಗೆ
ಸಿರಿದೇವಿಗರ್ಪಿಸು ಕ್ರಮದಿಂದ ವಿಧಿ ವಾಯು
ಸುರರಿಗರ್ಪಿಸು ಅವರವರ ಸ್ತ್ರೀಯರ
ವರಲ್ಲಿ ಕೂಡಿಸು ವಿಧಿಯ ಪೂರ್ವಕ
ಪರಮ ಪುರುಷ ಹರಿ ತುಷ್ಟನಾಹ
ದುರುಳ ಮರ್ದನ ಗುರು ವಿಜಯ ವಿಠ್ಠಲರೇಯ
ಪರಮ ಯಶಸ್ಸನೀವ ಇಹಪರದಿ ೪

**ಝಂಪಿತಾಳ**

ದೇಹವೆಂಬೊ ಕ್ಷೇತ್ರ ಸನ್ನಿಧಾನದಲ್ಲಿ
ಲೋಹಿತಾಕ್ಷನೆಂಬೊ ಪಾತ್ರನೀಗೆ
ಅವ್ಯಾಹತವಾದ ಸ್ಥಾನವೈದಿಸು ನಿನ್ನ

ಸಹವಾಗಿ ಮೂರೇಳು ಗೋತ್ರದವರು
ಸಹಸ್ರ ರೂಪ ಗುರು ವಿಜಯ ವಿಠ್ಠಲರೇಯನ
ಮೋಹ ನಿನಗಾಗುವುದು ಆವ ಕಾಲ ೫

## ಅಟ್ಟತಾಳ

ಇನಿತು ಲಕ್ಷಣದಿಂದ ಚತುರ್ಥ ದಿನದಲ್ಲಿ
ಏನೇನು ಮಾಡತಕ್ಕದದನೆಲ್ಲ
ದನುಜಾರಿಗೆ ಇದು ಉಪಚಾರವೆಂದೆನ್ನು
ನೀನು ಕೊಡುವದೆಲ್ಲಾ ನೀನು ಕೊಂಬುವದೆಲ್ಲ
ಅನ್ವಯಿಸು ಬಿಂಬನ ಪಾದ ಸನ್ನಿಧಿಯಲ್ಲಿ
ಇನಿತು ಮಾಡುವವನ ಮನೆಯಲ್ಲಿ ಸುರರೆಲ್ಲ
ವನಜಾಕ್ಷನಾಜ್ಞಧಿ ಶುಭವೆ ಕೊಡುತಿಪ್ಪರು
ಇನ ಶಶಿ ಮಂಡಲ ಪರಿಯಂತ ತಿಲಯವ
ಘನರಾಶಿ ಗಣಿತದಿನಿತು ಸತ್ಪುಣ್ಯವ
ಜಪಿಸುವದದರಿಂದ ಬರಿದೆ ಮಾತುಗಳಲ್ಲ
ಅನುಮಾನ ಇದಕಿಲ್ಲ ಶ್ರುತಿ ಸ್ಮೃತಿ ವಾಕ್ಯವು
ವನಜಾಧಿಪತಿ ಗುರು ವಿಜಯ ವಿಠ್ಠಲಂಗೆ
ಮನೆಯವನೆನಿಸುವಿ ಇದರಿಂದ ಆವಾಗ ೬

## ಆದಿತಾಳ

ಈ ಪರಿ ಮಾಡುವದೆ ಶುಭಲಗ್ನವೆನಿಪದು
ಈ ಪರಿ ಮಾಡಿದವನ ವಂಶವೆ ಸದ್ವಂಶ
ಈ ಪರಿ ತಿಳಿದವನ ಗೋತ್ರವೆ ಅಭಿವೃದ್ಧಿ
ಈ ಪರಿ ತಿಳಿದವನ ಮನೆಯಲ್ಲಿ ಸರ್ವಕಾಲ
ಲೋಪವಾಗದಂತೆ ಶುಭಜಾಲವಾಗುವುದು
ಈ ಪರಿ ತಿಳಿಯದೆ ಶತಸಂಖ್ಯ ಕನ್ಯಾದಾನ
ಆಪಾರ ಮಾಡಲೇಕೆ (ಲ್ಯಾಕ) ಅವಗಿಲ್ಲ ಪುಣ್ಯವನ್ನು
ಶ್ರೀಪತಿ ಮೆಚ್ಚದಿಹ ನಾನಾ ಪಥ ಕರ್ಮ ಜಾಲ

ಪಾಪ ನಿವರ್ತಿಗೆ ಕಾರಣವಲ್ಲ ಕೇಳೋ
ಸುಪ್ರಕಾಶವಾದ ಮಾಣಿಕ ಮಾರಿಕೊಂಡು
ಅಲ್ಪವಾದ ಅಜಿವಾನ ಪ್ರಾಪ್ತಿ ಮಾಡಿಕೊಂಡಂತೆ
ಆಪಾರ ಮಹಿಮನ ಅನುಸಂಧಾನವಿಲ್ಲದೆ
ವ್ಯಾಪಾರದಿಂದ ಬಂದ ಕ್ಷುದ್ರವಾದ ಪುಣ್ಯವನ್ನು
ಕೋಪಾದಿ ದ್ವಾರದಿಂದ ದೈತ್ಯರು ಕೊಂಬುವರು
ಈ ಪರಿ ತಿಳಿದವನ ಜನುಮವೆ ಸಫಲವೆನ್ನಿ
ಅಪ ವರ್ಗದಾತ ಗುರು ವಿಜಯ ವಿಠ್ಠಲರೇಯ
ಕಾಪಾಡುವನು ಸತತ ಈ ಪರಿ ಗ್ರಹಿಸಿದವರ ೭

**ಜತೆ**

ಮದುವೆ ಎನಿಪದು ಸಿರಿ ನಾರಾಯಣರಿಗೆ
ಪದವಿಗೆ ಸೋಪಾನ ಗುರು ವಿಜಯ ವಿಠ್ಠಲ ವೊಲಿವಾ ॥

## ತಾತ್ವಿಕ ಹಿನ್ನೆಲೆಯ ಸುಳಾದಿಗಳು

### ೧೬೧

[ಜ್ಞಾನ ಯಜ್ಞ ಸುಳಾದಿ – ಅಧ್ಯಾತ್ಮ ಉಪಸಾನೆ]

**ಧ್ರುವತಾಳ**

ಮಖವನ್ನೆ ಮಾಡುವದು ಮರ್ಮವ ನೀನರಿತು
ವಿಖನಸಾರ್ಚಿತ ಪಾದ ಮನದಿ ನಿಲಿಸಿ
ಕಕುಲಾತಿಯನ್ನೆ ಬಿಟ್ಟು ದುರುಳರಿಗರುಹದಲೆ
ಭಕುತಿಯಿಂದಲಿ ಯಜಿಸು ನೇಹದಿಂದ
ನಖ ಶಿಖ ಪರಿಪೂರ್ಣ ಹರಿ ತಾನು ವಿಧಿ ಶಿವಾದಿ
ಶುಕವಾಕ ಮೊದಲಾದ ಅಶೀತಿ ನಾಲ್ಕುಲಕ್ಷ

ಸಕಲ ಜೀವಿಗಳಲ್ಲಿ ತನ್ನಾಮ ತದ್ರೂಪ
ಸಖನಾಗಿ ಧರಿಸಿ ತತ್ತ ಚೇಷ್ಟೆಗಳ
ಯುಕುತಿಯಿಂದಲಿ ಮಾಳ್ಪ ಅಂಭಸ ಪದ್ಮ ಇವ ಆ-
ಸಕುತಿಯಿಂದಲಿ ಗ್ರಹಿಸೊ ಮುಖ್ಯವಾಗಿ
ತ್ವಕು ಮೊದಲಾದ ಧಾತು ಕರಣಾದಿ ದೇಹದಲ್ಲಿ ಅ-
ನೇಕ ರೂಪಗಳಿಂದ ವ್ಯಾಪ್ತನಾಗಿ
ಪ್ರಕೃತಿ ಕಾಲಕರ್ಮ ಜೀವ ಲಕ್ಷಣದಂತೆ
ಸಖನಾಗಿ ಮಾಡಿ ತತ್ತ ಜನಿತವಾದ
ಸುಖ ದುಃಖ ಫಲ "ಅನಶ್ನನ್" ಎಂಬೋ ಶ್ರುತಿಯಂತೆ
ಏಕಮೇವನು ಉಣದೆ ಜೀವರಿಗೆ
ಹಾಕುವ ತೆರ ಆತ್ಮೋಪಮ್ಯೇನ ಸರ್ವತ್ರ
ಲೋಕ ಲೋಕಾದಿ ತಿಳಿಯೋ ಇನಿತು ನೀನು
"ಯೋಂತಶ್ಚರತಿ ಭೂತಾತ್ಮಾ ಯಸ್ತಪತ್ಯಂಡ ಮಧ್ಯಗ !"
ಶುಕಮುನಿ ವಾಕ್ಯದಂತೆ ದೃಢದಿ ನಂಬೋ
ಶಕತನಾದ ಹರಿ ನಿಂದು ಮಾಡಿಸದಿರೆ
ಲಕುಮಿ ವಿರಿಂಚಿ ಭವ ಶಕ್ರಾದ್ಯರು ಅ-
ಶಕ್ತರಯಾ ಶ್ವಾಸ ಬಿಡಲು ಯೋಗ್ಯರಲ್ಲ
ಪ್ರಕಟವಾಗಿದೆ ಶ್ರುತಿ ಶಾಸ್ತ್ರದಲ್ಲಿ
ಮುಕುತಿಗೆ ದ್ವಾರವಿದು ಇನಿತು ತಿಳಿವ ನರ
ರಿಕತ ನಲ್ಲವೊ ಬಲು ಭಾಗ್ಯಾಧಿಕನು
ಭಕುತಿಯಿಂದಲಿ ಅಲ್ಪ ಜಲವ ಕೊಡುವನ್ಯಾಕೆ
ವಿಖನಸಾಂಡ ದಾನವಿತ್ತ ಫಲಕೆ ಅ-
ಧಿಕಾರಿಯಾಗುವನು ಸಂಸಾರ ಮುಕ್ತನಾಗಿ
ಶಕಟ ಭಂಜನ ಕರವ ಪಿಡಿವ ಬೇಗ
ಕೃಕಳಂತರ್ಯಾಮಿ ಗುರು ವಿಜಯ ವಿಠ್ಠಲರೇಯ
ಮಖ ಶಬ್ದವಾಚ್ಯನು ಮಖಭೋಕ್ತನು ೧

**ಮಟ್ಟತಾಳ**

ವಾಜಪೇಯ ಪೌಂಡರಿಕ ಮೊದಲಾದ

ರಾಜಸ ಯಜ್ಞಗಳು ಬಲು ವಿಧವಾದಂಥ
ವ್ಯಾಜಗಳಲ್ಲದಲೆ ಸರ್ವರಿಗೊಶವಲ್ಲ ಸ–
ಹಜವಾಗಿದ್ದ ರಜೋಗುಣ ಕರ್ಮಗಳು
ರಾಜಿಸುವ ಸತ್ವಗುಣ ಮಿಶ್ರಿತವಿಲ್ಲದಲೆ
ಭೋಜ ಕುಲೋತ್ತಮನ ಪ್ರೀತಿಯಾಗದು ಕೇಳಿ ವೈ–
ರಾಜಿವಾದ ಜ್ಞಾನದ ವ್ಯತಿರಿಕ್ತ
ರಾಜೀವ ಪೀಠ ಮಿಕ್ಕಾದವರೆಲ್ಲ
ನೈಜವಾದ ಗತಿ ಐದರು ಎಂದಿಗೂ
ರಾಜೀವ ಮಿತ್ರ ಗಗನದಿ ಉದಯಿಸದೆ ಆ–
ರಾಜಿತವಾದ ತಮ ಓಡದು ಎಂದಿಗೂ
ಬೀಜ ಮಾತಿದು ಕೇಳಿ "ನಹಿ ಜ್ಞಾನೇನ ಸದೃಶಂ"
ಸುಜನರು ಇದರನ್ನ ನಿರ್ವ್ಯಾಜದಿ ತಿಳಿದು
ಮೂಜಗದೊಡಿಯನ್ನ ಪೂಜಿಸು ಜ್ಞಾನದಲಿ
ವಾಜಿವದನ ಗುರು ವಿಜಯ ವಿಠಲರೇಯನ
ಆ ಜನ್ಮವ ಭಜಿಸೆ ಅವಗಾವದು ಸಮ ೨

**ರೂಪಕತಾಳ**

ಸ್ನಾನವಿಲ್ಲದ ಕರ್ಮ ಎಣಿಕೆಯಿಲ್ಲದ ಜಪ
ಪಾನಯಿಲ್ಲದ ಅನ್ನದಾನದಂತೆ
ಜ್ಞಾನಯಿಲ್ಲದೆ ಕರ್ಮ ಏನೇನು ಮಾಡಲು
ಮಾಣದೆ ಗಜಭುಕ್ತ ಕಪಿತ್ಥವತು "ಕ–
ರ್ಮಣಾ ಜ್ಞಾನಮಾಪ್ನೋತಿ ಜ್ಞಾನೇನ ಅಮೃತೀ ಭವತಿ"
ಈ ನುಡಿ ಪ್ರಮಾಣದಂತೆ ಜನರು ಕೇಳಿ
ಜ್ಞಾನ ಮಾರ್ಗದಿಂದ ಹರಿಯ ಯಜಿಸೋ
ಗೌಣಾಧಿಕವಾದ ಅಧಿಷ್ಠಾನಗಳ ಗ್ರಹಿಸಿ
ಆನಂದತೀರ್ಥರ ವಾಕ್ಯದಂತೆ
ಸಾನುರಾಗದಿ ಶ್ರುತಿಗೆ ಅಪ್ರಾಮಾಣ್ಯ ಬರಲೀಯದೆ
ಧೇನಿಸು ಹರಿ ವ್ಯಾಪ್ತಿ ಜಡ ಚೇತನದಿ ಅ–
ಜ್ಞಾನಿ ಜನರೊಳು ಬೆರದಿದ್ದ ಕಾಲಕ್ಕು

ಮನಸಿನಲ್ಲಿ ವ್ಯಾಪ್ತಿ ಮರೆಯದಿರು
ಏನೇನು ಕರ್ಮಗಳು ಲಕುಮಿ ನಾರೇಯಣರು
ಪ್ರಾಣದೇವರ ದ್ವಾರ ಮಾಳ್ಪರೆನ್ನು
ಪ್ರಾಣನಾಥನು ಖಗ ಅಹಿಪೇಶ ಮೊದಲಾದ
ಸುಮನಸರಿಂದಲಿ ಮಾಳ್ಪನೆನ್ನು
ಗೌಣರಿಗಧಿಕರು ಪ್ರೇರಕರಾಗಿಹರು
ಕಾಣಿಸದಿಪ್ಪರು ಮಂದರಿಗೆ
ಜ್ಞಾನ ಪ್ರಾಪುತವಾಗೆ ಪ್ರತ್ಯಕ್ಷವಾಹರು
ದಾನವಾಂತಕಗಿವರು ಅಧಿಷ್ಠಾನರು
ಸ್ಥಾಣು ಚೇತನ ಮಿಕ್ಕ ಆವಾವ ಸ್ಥಳದಲ್ಲಿ
ಮಾಣದೆ ತಿಳಿ ಇನಿತು ಲಕ್ಷಣದಿ
ಜ್ಞಾನಿಗಳರಸ ಗುರು ವಿಜಯ ವಿಠ್ಠಲರೇಯ
ಪ್ರಾಣಿಗಳಲ್ಲಿ ವ್ಯಾಪ್ತನಾಗಿಹನು ೩

**ಝಂಪೆತಾಳ**

ಸಾಧನದೊಳಧಿಕ ಸಾಧನಾವೆನಿಸುವುದು
ಸಾದರದಿ ಕೇಳುವರು ವಿಬುಧರೆಲ್ಲ
ಮೇದಿನಿಯೊಳಗಿದ್ದ ಖಳರು ಅಹಂಕಾರದಲಿ
ಗೋಧನ ಮೊದಲಾದ ಮಹದಾನವ
ಕ್ರೋಧಾದಿ ಗುಣದಿಂದ ಇತ್ತರಾದೆಡೆ ಅವಗೆ
ಮೋದವಾಹದೆಂತೊ ಇಹಪರದಿ
ಸಾಧುಗಳು ಇದು ತಿಳಿದು ಜ್ಞಾನಾಖ್ಯ ಸುಧಿಯನ್ನು ಆ-
ಸ್ವಾದಿಪರು ಕ್ರೋಧಾದಿ ಗುಣವ ಮರೆದು
ಶ್ರೀಧರನು ತನ್ನ ನಿಜ ಸಂಕಲ್ಪದಿಂದಲಿ ಅ-
ನಾದಿ ಕರ್ಮ ಪ್ರಕೃತಿ ಕಾಲ ಜೀವ
ಅಧಿಕಾರವನರಿತು ಕೊಟ್ಟದಕೆ ಮತ್ತಧಿಕ ಬೇ-
ಡದಲಿರು ಶ್ರೀಶನಾಜ್ಞವೆಂದು
ಯದ್ರಿಚ್ಛ ಲಾಭದಿಂ ಸಂತುಷ್ಟನಾಗಿ ನೀನು
ಮೋದ ವೈದು ಇದ್ದ ವಿಭವದೊಳು

ಅಧಿಕಾಧಿಕವಾದ ಜ್ಞಾನವಾಪೇಕ್ಷಿಸುತ
ಬೋಧಕರ ಸಂಗದಲಿ ಬೆರೆದು ನೀನು
ಮೇದಿನಿ ಸುರರನ್ನ ಕರದು ಮನ್ನಿಸಿ ಪರಮ
ಆದರದಿ ಅನ್ನೋದಕವ ಕೊಡಲು
ಮೋದಮಯ ತಾನುಂಡು ಕೋಟ್ಯಾಧಿಕವಾದ
ಸಾಧು ಯಜ್ಞದ ಫಲವು ತಂದು ಉಣಿಪ
ಮಾಧವನ ಅರ್ಚನೆಗೆ ಭೂಸುರೋತ್ತಮ ತಾನು
ಅಧಿಷ್ಠಾನವೆಂದು ಗ್ರಹಿಸೋ ನೀನು
ಮೇದಿನಿ ಮೇಲಿದ್ದ ಕ್ಷೇತ್ರ ಮೂರುತಿ ಬಿಟ್ಟು
ಸಾದರದಿ ಕ್ಷೇತ್ರವನ್ನು ಭಜಿಸಿದವರಿಗೆ
ಖೇದವಲ್ಲದೆ ಅವಗೆ ಮೋದವಾಹದೇನೋ
ಮೇದಿನಿ ಸುರರಲ್ಲಿ ವ್ಯಾಪ್ತನಾದ
ಆದಿದೇವನ ತುತಿಸಿ ಷೋಡಶೋಪಚಾರ
ಈ ದ್ವಾರದಲಿ ಮಾಡುವದು ಜ್ಞಾನದಿಂದ
ವೈದರ್ಭ ರಮಣ ಗುರು ವಿಜಯ ವಿಠ್ಠಲರೇಯ
ಸಾಧಿಸೀ ಪರಿಯಿಂದ ತಿಳಿದು ನೀನು ೪

## ತ್ರಿವಿಡಿತಾಳ

ಮೇಲು ಭಾಗದಲ್ಲಿ ಶಿರಸ್ಸನಲ್ಲಿಗೆ ದ್ವಿದ್ವಾಶಾಂ-
ಗುಲಿ ಮೇಲೆ ದ್ವಿದಶ ದಳಯುಕ್ತ
ಕೀಲಾಲಜವುಂಟು ಚಂದ್ರಪ್ರಕಾಶದಂತೆ
ಆಲಯವೆನಿಪದು ಮುಕ್ತಾಮುಕ್ತರಿಂದ
ವಾಲಗಗೊಳುತಿಪ್ಪ ಸರ್ವಸಾಕ್ಷಿಯಾಗಿ
ಬಾಲಮತಿಯ ಬಿಟ್ಟು ಗುರು ಮುಖದಿಂದ ತಿಳಿದು
ಕಾಲಕಾಲಕೆ ತಿಳಿ ಸ್ವ ಪರದೇಹದಲ್ಲಿ
ಖೂಳ ಜನರಿಗೆ ಕುರುಹು ಕಾಣಿಸದಲೆ
ವ್ಯಾಳೆ ವ್ಯಾಳೆಕ್ಕೆ ಪರಮ ಭಕುತಿಯಿಂದ
ಶೀಲ ಮೂರುತಿಯ ಧೇನಿಸಿ ನೀನಿತ್ತ
ಸ್ಥೂಲ ರಸವನು ಸ್ವೀಕರಿಸು ಎಂದು

ಲೋಲ ಮನಸ್ಸಿನಿಂದ ಬೇಡಿಕೊಳ್ಳಲು ಹರಿ
ವಾಲಗ ಸಹವಾಗಿ ಪ್ರೀತನಾಗಿ
ಆಲಸವಿಲ್ಲದಲೆ ತೃಣ ಮೇರು ಮಾಡಿ ತನ್ನ
ಹೇಳಲ ಬುದ್ಧಿಯಿಂದ ಇದನು ತಿಳಿಯದಲೆ
ಸಾಲು ಕೋಟಿಗೆ ಅನ್ನವಿತ್ತೆನೆಂದು
ಬಾಲಮತಿಗಾನು ಬರಿದೆ ಅಹಂಕಾರದಿಂದಲಿ
ಪ್ರಲಾಪಿಸಿದರೆ ಹರಿ ತುಷ್ಟನಾಹನೆ
ವ್ಯಾಳ ವ್ಯಾಘ್ರನಾಮ ಗುರು ವಿಜಯ ವಿಠ್ಠಲರೇಯನ
ಲೀಲೆಯಿನಿತೆಂದು ಸ್ಮರಿಸಿ ಬದುಕೋ ೫

**ಅಟ್ಟತಾಳ**

ಸತ್ಯಲೋಕವು ಶೀರ್ಷದಲ್ಲೆ ಇಪ್ಪದು ಕೇಳಿ
ಸತ್ಯಲೋಕಾಧಿಪನು ಸಹಸ್ರರೂಪನ್ನ
ಭಕ್ತಿಯಿಂದಲಿ ಭಜಿಸಿ ಸಾಸಿರ ಕೇಸರ
ಯುಕ್ತವಾದ ಕಮಲ ಮಧ್ಯದಿ ಪೊಳೆವನ್ನ
ಕೃತ್ತಿವಾಸನೆ ಮೊದಲಾದ ಗೀರ್ವಾಣರು
ಭಕ್ತರಾಗಿ ಸೇವೆ ಮಾಳ್ಪರು ಕ್ರಮದಿಂದ
ಉತ್ತುಮೋತ್ತುಮ ದೇವ ಪರಿವಾರ ಸಮೇತ
ತುತಿಸಿಕೊಳ್ಳುತ್ತ ವ್ಯಕ್ತವಾಗಿಹನು
ಧಾತ್ರಿಯೊಳಗೆ ಇದು ತಿಳಿದ ಮನುಜ
ಮೃತ್ಯು ರೂಪವಾದ ಸಂಸಾರ ದೂರನು
ಪಾರತ್ರಿಕವಾದ ಸುಖದಿ ನಿತ್ಯದಿ ಕಾಣೊ
ಈ ತೆರದಿಂದಲಿ ತಿಳಿದು ಈ ಬಗೆಯಿಂದ
ತೃಪ್ತನಾಗೆಂದೆನ್ನ ಭಕ್ತಿಗೆ ವಶನಾಗಿ
ಉಕ್ತಿ ಲಾಲಿಪರಯ್ಯಾ ಉದಾಸೀನ ಮಾಡದೆ
ಕೃತಕೃತ್ಯನೆನಿಪ ಗುರು ವಿಜಯ ವಿಠ್ಠಲರೇಯ
ಸತ್ಯವಾದ ಪದ ಐದಿಪ ಶೀಘ್ರದಿ ೬

**ಆದಿತಾಳ**

ದ್ವಿದಳಯುಕ್ತವಾದ ಕಿಂಜಲ್ಕ ಫಾಲಭಾಗ
ಮಧ್ಯದಲಿ ಇಪ್ಪದು
ಇದನೇವೆ ತಪೋ ಲೋಕ
ಯದುಕುಲ ಶ್ರೇಷ್ಠ ತಾನು ಲೋಕಾಧಿಪತಿ ಮಿಕ್ಕ
ಆದಿತ್ಯರಿಂದ ಸೇವೆಗೊಂಬುವ ನಿತ್ಯದಲ್ಲಿ
ಆದರದಲಿ ತಿಳಿ ಸ್ವಪರ ದೇಹದಲ್ಲಿ
ಭೂದೇವತೆಗಳ ಪ್ರಿಯ ಗುರು ವಿಜಯ ವಿಠ್ಠಲರೇಯನ್ನ
ಪಾದಗಳ ಧೇನಿಸು ಈ ಬಗೆಯಿಂದ ತಿಳಿದು ೭

ಇಂದ್ರಯೋನಿಯಲ್ಲಿ ಷೋಡಶದಳ ಅರ–
ವಿಂದ ಶೋಭಿಸುವುದು ಧವಳ ವರ್ಣ
ದಿಂದ ಪೊಳೆವದು ಇದನೇವೆ ಜನೋ ಲೋಕ
ವೆಂದು ಕರೆವರು ವಿಬುಧರೆಲ್ಲ
ಹೊಂದಿಕೊಂಡಿಪ್ಪನು ಲಕುಮಿ ನಾರಾಯಣ
ವೃಂದಾರಕ ಶ್ರೇಷ್ಠ ಅಹಿಪ ದೇವ
ರಿಂದ ಪೂಜೆಯಗೊಂಬ ನವವಿಧ ಭಕುತಿಯಿಂದ
ಕುಂದು ಕಂಧರ ಮಿಕ್ಕ ದಿವಿಜರೆಲ್ಲ
ವಂದಿಸಿಕೊಳುತಲಿ ಆನಂದದಲಿಹರು
ತಂದು ಇವರ ಫಲವ ತಿಳಿದವರ್ಗೆ
ಚಂದ್ರಕಲಾಭಿಮಾನಿ ದಿವಿಜರ ಸಂತತಿಗೆ
ಮಂದಿರವೆನಿಪದು ಆವಕಾಲಾ
ಕುಂದು ಜನರ ಮನಕೆ ಎಂದಿಗೂ ತೋರನಯ್ಯ ನಿ–
ಸ್ಸಂದೇಹದಲ್ಲಿ ನಂಬಿದವಗೆ
ಮುಂದೊಲಿದು ಪೊಳೆವನು ವೇದೈಕ ವೇದ್ಯನು
ಒಂದಿಷ್ಟು ಅಹಂಕಾರ ಬಂದೊದಗೆ
ಇಂದ್ರಗಾದರು ಶಿಕ್ಷೆ ಮಾಡದೆ ಬಿಡನಯ್ಯ
"ಚಂದ್ರ ಶತಾನನ ಕುಂದ ಸುಹಾಸ
ವಂದಿತ ದೈವತ ಆನಂದ ಸಂಪೂರ್ಣ"

ಎಂದೆಂದು ಬಿಡದೆ ಎಮ್ಮ ಸಲಹತಿಪ್ಪ
ನೆಂದು ಕೊಂಡಾಡಿ ಪರಮ ಭಕುತಿಯಿಂದಲಿ ನಮಿಸಿ
ಎನ್ನಿಂದ ಪ್ರೀತನಾಗುಯೆಂದು ಬೇಡೆ
ಇಂದಿರಾಪತಿ ತನ್ನ ಪರಿವಾರ ಸಮೇತ
ನಿಂದು ತೃಪ್ತನಾಹ ಭಕುತಿ ಪಾಶ
ದಿಂದ ಕಟ್ಟಿಸಿಕೊಂಬ ಸ್ವತಂತ್ರ ಪುರುಷನಾಗೆ
ಮಂದತನವೆ ಬಿಟ್ಟು ಇದನೇವೆ ಗ್ರಹಿಸು
ಕಂದರ್ಪ ಕೋಟಿ ರೂಪ ಗುರು ವಿಜಯ ವಿಠ್ಠಲರೇಯ
ಬಂಧು ಎನಿಪ ಭಕುತ ನಿಕರಕೆಲ್ಲ ೮

## ಮಟ್ಟತಾಳ

ಉರದಲ್ಲಿ ದ್ವಾದಶ ದಳ ಪದುಮವೆ ಉಂಟು
ಕರೆಸುವುದು ಇದು ಮಹಲೋಕವು ಯೆಂದು
ಹರಿನಾಮ ಮಿಕ್ಕಾದ ಭಗವದ್ರೂಪಗಳು
ಮಿರುಗುತಿವೆ ನೋಡು ಭೇದಗಳಿಲ್ಲದಲೆ
ಮುರವೈರಿ ತನ್ನ ನಿಜ ಸತಿ ಸಹಿತದಲಿ
ಪರಮ ಭಕುತಿಯಿಂದ ವಾಲ್ಗೈಸುತಲಿಹರು
ಸುರಪತಿ ಮಿಕ್ಕಾದ ದಿವಿಜರ ಸಂಘವನು
ಪರಿತೋಷದಲಿಂದ ಪೂಜಿಯನು ಮಾಡುವರು
ನರನೆ ಈ ಪರಿ ತಿಳಿದು ಕರವ ಮುಗಿದು ನಮಿಸಿ
ಪರಿತೃಪ್ತಿಯನೈದು ನೀನಿತ್ಯ(ತ್ರ) ರಸದಿಂದ
ಪರಿಪೂರ್ಣನಾದರು ಭಕ್ತರ ವಶನಾಗಿ
ಸ್ವೀಕರಿಸುವ ಬಿಡದೆ ನಿತ್ಯ ತೃಪ್ತನಾಗಿ
ಪರಿಪೂರ್ಣ ಮೂರುತಿ ವಿಜಯ ವಿಠ್ಠಲರೇಯ
ಸಾರ ಹೃದಯ ನೋಡಿ ಸ್ವೀಕೃತನಾಗುವ ೯

## ತ್ರಿವಿಡಿತಾಳ

ಹೃದಯದಲ್ಲಿ ಅಷ್ಟದಳದ ಪದುಮ ಉಂಟು
ಉದಯಾದಿತ್ಯ ವರ್ಣದಂತಿಪ್ಪದೋ

ಇದನೇವೆ ಸ್ವರ್ಲೋಕವೆಂಬುವರು ಜ್ಞಾನಿಗಳು
ತ್ರಿದಶಾಧಿಪತಿಯಾದ ಇಂದ್ರ ಮಿಕ್ಕ
ಆದಿತೇಯರಿಂದ ಪೂಜಿಯಗೊಂಬುವನು
ಮೋದ ಸಾಂದ್ರ ಲಕುಮಿ ನಾರಾಯಣ
ಆದಿಮೂರುತಿ ಕೇಶವಾದಿ ಚತುರ ದ್ವಿದಶ ಮ-
ತ್ಸ್ಯಾದಿ ರೂಪವು ಮಿಕ್ಕ ವರ್ಣ ಪ್ರತಿ
ಪಾದನ ರೂಪ ಸ್ವಮೂರ್ತಿ ಗಣಮಧ್ಯಗನಾಗಿ
ಆ ದಿಕ್ಪಾಲಕರಿಂದ ಪೂಜಿಯಗೊಳುತ
ಪದೋಪದಿಗೆ ಬಂದು ಪಹರಿಯಾ ತಿರಗುವ
ಸದಾಕಾಲದಲ್ಲಿ ವಿಹಿತಾವಿಹಿತ ಮಾಳ್ಪ
ಇದು ಮೀರಲೊಶವಲ್ಲ ವಿಧಿ ಭವ ನಿರ್ಜರರು
ಇದೇ ಮಾರ್ಗದಿಂದ ಸಂಚರಿಸುವರು
ಇದೇ ಮೂಲ ಪತಿ ಪದಕೆ ಅಭಿಮುಖನಾಗಿ ಪ್ರಾಣ
ಪದವ ಆಶ್ರೈಸಿ ಇಪ್ಪ ಜೀವ ತಾನು
ಐದು ದ್ವಾರದಲಿ ಪಂಚರೂಪನಾಗಿ
ಬೋಧ ಮೂರುತಿ ಪ್ರಾಣರುಂಟು ಕೇಳಿ
ಮೊದಲ ದ್ವಾರದಲ್ಲಿ ಪ್ರಾಣನಾಶ್ರಯದಿ ಪುಷ್ಕ
ರಾದ್ಯರು ಅನಿರುದ್ಧನ ನೋಳ್ಪರಯ್ಯಾ
ಸುದಕ್ಷಿಣ ದ್ವಾರದಲಿ ಅಪಾನಾಂತರ್ಗತ
ಪ್ರದ್ಯುಮ್ನನ ನೋಳ್ಪರು ಋಷಿಗಳೆಲ್ಲ
ಆದರದಲಿ ಕೇಳೊ ಮೂರನೆ ದ್ವಾರದಲಿ
ಅರಿದಲ್ಲಣ ವ್ಯಾನಾಂತರ್ಗತ ಸಂಕರಷಣನನ್ನು
ವಿಧಿಯಿಂದ ನೋಳ್ಪರು ಪಿತೃದೇವತೆಗಳು
ಮುದದಿಂದ ತಿಳಿವದು ನಾಲ್ಕನೆ ದ್ವಾರದಲ್ಲಿ
ಜಗದ ಸೂತ್ರನೆನಿಪ ಸಮಾನಂತರ್ಗತನಾದ
ವಾಸುದೇವನ ತುತಿಪರು ಗಂಧರ್ವ ಗಣರು
ಐದನೇ ದ್ವಾರ ಊರ್ಧ್ವ ಭಾಗದಲ್ಲಿಪ್ಪರು
ಉದಾನಾಂತರ್ಗತ ಲಕ್ಷೀನಾರಾಯಣನಾ
ಮದನ ವೈರಿ ಮಿಕ್ಕ ಸುರರೆಲ್ಲ ವಂದಿಪರು

ಮೊದಲು ಪೇಳಿದ ನಾಲ್ಕು ದ್ವಾರದಲ್ಲಿ
ನಂದ ಸುನಂದನ ಮೊದಲಾದ ಅಷ್ಟ ಜನ
ಆದಿದೇವನ ಪ್ರಥಮ ದ್ವಾರದಿಹರು
ಇದರ ಮೇಲೆ ಮೂರು ಮಂಡಲವುಂಟು ಕೇಳಿ ಮ-
ತ್ತದು ಮೇಲೆ ವಿಶಾಲ ದೇಶವುಂಟು ಆ
ಪ್ರದೇಶದಲ್ಲಿ ನೂರು ಕಂಬದ ತೇರು
ಉದಯಾರ್ಕನಂತದಂತೆ ಪೊಳೆವೂವುದೊ ಚಿ-
ನ್ನದ ದಾಮದಿಂದ ವಿರಾಜಿಸುವ ಘಂಟೆ
ನಾದದಿಂದೆಸೆವುತಿದೆ ಮುತ್ತಿನ ಗೊಂಚಲ
ದಿಂದ ಬೆಳಗುತಿದೆ ಚಂದ್ರಪ್ರಕಾಶದಂತೆ
ಮುದದಿ ಶೋಭಿತವಾದ ರಥದ ಮಧ್ಯ
ಅದುಭೂತವಾದ ಮಹಿಮ ಪ್ರಾಜ್ಞನಾಮಕ ತಾನು
ವಿಧಿಭವಾದಿಗಳಿಂದ ಪೂಜೆಗೊಳುತ
ಒದಗಿ ತುತಿಪ ಜನಕೆ ಅಭಯ ಕೊಡುವನಾಗಿ ಈ ತೆ-
ರದಿ ನಿಂದಿಹ ಕರುಣಾವನಧಿ ಹರಿ
ಪ್ರಾದೇಶ ಪರಿಮಿತಿ ಹರಿ ತಾನು ನಿಂದು
ಈ ದೇಹ ರಕ್ಷಿಪನು ನಾಳದಲಿ ನಿಂತು
ವಿಧಿ ಭವ ಸುರರಿಂದ ವಂದಿತನಾಗಿ ಹರಿ
ಹೃದಯದೊಳಗೆ ಇರುವ ತಿಳಿಯದಲೆ
ಉದಯಾಸ್ತಮಾನ ಬರಿದೆ ಸಾಧನ ಮಾಡುವನ್ನ
ಹದುಳತನಕೆ ನಾನೇನೆಂಬೆನೋ
ಉದಯಾರ್ಕ ಪ್ರಭು ಗುರು ವಿಜಯ ವಿಠ್ಠಲನ್ನ
ಒದಗಿ ಬೇಡಿಕೋ ತೃಪ್ತನಾಗು ಎಂದು ೧

**ಅಟ್ಟತಾಳ**

ನಾಭಿ ಸ್ಥಾನದಲ್ಲಿ ಆರು ದಳದ ಪದ್ಮ
ಶೋಭಿಸುತಿದೆ ಭುವರ್ಲೋಕ ನಾಮದಿಂದ ನೀ
ಲಾಭ ಮೊದಲಾದ ಚತುರ ರೂಪಂಗಳು
ನಾಭಿಜಾತನ್ನ ಸಮನಾದ ದೇವನೊಳು

ಶೋಭಿಸುತಿಪ್ಪನು ಪ್ರದ್ಯುಮ್ನ ದೇವನು
ಸು ಭಕುತಿಯಿಂದ ಗಣಪತಿ ಸೇವಿಪ
ನಾಭಿ ಸಂಭವ ಮೊದಲಾದ ದೇವತೆಗಳು
ವೈಭವದಿಂದಲಿ ವಂದಿಪರು ಪದುಮ–
ನಾಭನ ಸತಿಯರು ಆರು ಜನರು ಉಂಟು
ಸೌಭಾಗ್ಯವಂತರು ಇದು ತಿಳಿಯದವ ಮುಖ್ಯ
ನಿರ್ಭಾಗ್ಯನೆ ಸರಿ ಈ ಸೊಬಗು ತಿಳಿದವ
ತ್ರಿಭುವನದೊಡಿಯ ಗುರು ವಿಜಯ ವಿಠಲರೇಯ
ಸಾಭಿಮಾನದಿಂದ ಪೊರೆವನೊ ತಿಳಿದರೆ ೧೧

## ರೂಪಕತಾಳ

ಮೂಲ ಸ್ಥಾನದಲ್ಲಿ ಚತುರದಳ ಪದ್ಮ ಪ್ರ–
ವಾಳ ಮಾಣಿಕ ವರ್ಣದಂತಿಪ್ಪದು
ಭೂರ್ಲೋಕವಿದು ಯೆಂದು ಕರೆವರು ವಿಬುಧರು
ನೀಲೋತ್ಪಲ ಶ್ಯಾಮನಾಳುಗಳು
ನಾಲ್ಕು ನಾಡಿಗಳಲ್ಲಿ ನಾಲ್ಕು ರೂಪದಿ ಹರಿ
ನಾಲ್ಕು ವೇದಗಳಿಂದ ತುತಿಸಿಕೊಳುತ
ಮೇಲೆನಿಪ ಸುಷುಮ್ನದಲಿ ನಾರಾಯಣ ಲಕುಮಿ
ಕೀಲಾಲಜ ಮಿಕ್ಕ ಸುರರಿಂದಲಿ
ವಾಲಗ ಕೊಳುತಿಪ್ಪ ಆನಂದ ಪೂರ್ಣನು
ಶೀಲ ಭಕುತಿಯಿಂದ ಮನು ಶ್ರೇಷ್ಠನು
ನೀಲಾಭನನಿರುದ್ಧನರ್ಚಿಪ ನಿರುತ ಸ–
ಲೀಲಜಕೆ ಅಭಿಮಾನಿ ಎನಿಸಿ
ಕಾಲಚಕ್ರದ ತೆರದಿ ಜಡವಾಯು ತಾನೆಂದು
ಮೇಲಧೋ ಭಾಗದಲಿ ತಿರುಗುವದು
ಮೂರ್ಲೋಕನಾಥನು ಇನಿತು ವ್ಯಾಪಕನಾಗಿ ವಿ–
ಶಾಲ ಕರುಣದಿಂದ ಸಲಹುತಿರೆ
ಬಾಲ ಮತಿಗರಾಗಿ ಗ್ರಹಿಸದಿರು ಮನುಜಾ
ವ್ಯಾಳ ವ್ಯಾಘ್ರಗೆ ಸರಿ ನರನಾದರೂ

ಹೂಳುವ ನಿರಿಯ ನಿತ್ಯದಲ್ಲಿ ಯಮ ತಾನು
ಬಾಳುವನೆಂತೋ ಮುಕ್ತಿ ಪಥದಿಂದಲಿ
ಕೀಲು ಕೀಲಿಗೆ ನಿಂದು ವ್ಯಾಪಾರ ಮಾಳ್ಪನ್ನ
ಆಲೋಚಿಸಿ ತಿಳಿಯದೆ ವ್ಯರ್ಥವಾದ
ಸಾಲು ಕರ್ಮವ ಮಾಡೆ ಅವನ ಸಾಹಸವನ್ನು
ಸೂಳಿಗಿಕ್ಕಿದ ಧನದಂತೆ ನೋಡೊ
ಪಾಲಸಾಗರ ಶಾಯಿ ಗುರು ವಿಜಯ ವಿಠ್ಠಲನ್ನ
ಲೀಲೆ ತಿಳಿದು ತೃಪ್ತನಾಗು ಇನ್ನು ೧೨

## ಝಂಪೆತಾಳ

ಊರು ದ್ವಯಗಳಲ್ಲಿ ಅತಳ ವಿತಳ ಲೋಕ
ಚಾರು ಜಾನುಗಳಲ್ಲಿ ಸುತಳ ಲೋಕ
ಸಾರ ಜಂಘದಿ ತಳಾತಳವು ಇಪ್ಪದು ನೋಡಿ
ಘೋರಗುಲ್ಫದಿ ಮಹಾ ತಳವು ಕೇಳಿ
ಸಾರುತಿದೆ ಪ್ರಪದದಲಿ ರಸಾತಳ ಲೋಕವೆಂದು
ಮೀರದಲೆ ಕೇಳೊ ಪಾತಾಳ ಲೋಕ
ತೋರುತಿದೆ ಪಾದ ಮೂಲದಲಿ ಸುಜನರುಗಳಿಗೆ
ಬರಿದೆ ಮಾತುಗಳಲ್ಲ ಶ್ರುತಿ ಸಿದ್ಧವೋ
ಮೂರುವರೆ ಕೋಟಿ ತೀರ್ಥಂಗಳುಂಟು ಅಂಗುಟದಿ
ಧಾರುಣಿಯ ಕೆಳಗಿಪ್ಪ ಜಲ ಸಂಜ್ಞದಿ
ನಾರಾಯಣನು ಕೂರ್ಮನಾಗಿ ಪೊತ್ತಿಹನಲ್ಲಿ
ಸಾರ ಸುಂದರ ಮೂರ್ತಿ ತೀರ್ಥ ಪಾದಾ
ನಾರಾಯಣನು ನಿಂದು ದೇಹ ದೇಹಂಗಳ
ಭಾರ ಪೊತ್ತಿಹ ಸಿರಿ ವಾಯು ಸಹಿತ
ಈ ರೀತಿ ಹರಿ ತನ್ನ ಪರಿವಾರ ಸಹಿತದಲಿ
ಶಾರೀರ ವ್ಯಾಪಾರ ಮಾಡುತಿರಲು
ಕ್ರೂರರಿದು ತಿಳಿಯದಲೆ ನಾನೆ ಸ್ವಾತಂತ್ರನೆಂದು
ಸಾರಿ ಸಾರಿಗೆ ನುಡಿವ ದುರುಳ ಜನರ
ಪೌರುಷಕೆ ಏನೆಂಬೆ ಸ್ವಾತಂತ್ರ ತಾನಾಗಿ

ಶಾರೀರಕೆ ವ್ಯಾಧಿ ಬರುವದ್ಯಾಕೋ
ಸರ್ವ ಕಾಲದಿ ಸುಖಾಪೇಕ್ಷೆ ಮಾಡುವ ನರಗೆ
ಮೀರಿ ತ್ರಯ ತಾಪದಲಿ ಬಳಲಿ ನರಕ
ಸೇರುವ ಬಗೆ ಯಾಕೆ ತೋರುತಿದೆ ಆಶ್ಚರ್ಯ
ಶಾರೀರ ಮೊದಲಾದ ಕರ್ಣಂಗಳು
ವಾರ ವಾರಕೆ ದೃಢವನಾಪೇಕ್ಷಿಯಾದವಗೆ
ಭರದಿ ಮಧ್ಯದಿ ನಾಶ ಬರುವದೇಕೋ
ದೂರ ದೇಶಗಳೆಲ್ಲ ತಿರುಗಿ ಬರುವೆನೆಂದು
ಸಾರಿದಲಿ ಮೃತ್ಯು ವಶವಾಹದೇನೋ
ಸಾರೆ ದೂರುವ ಕಾಣದಿಪ್ಪ ಮೂಢ ತಾನು ಅ–
ಪಾರ ಮಹಿಮೆಗೆ ಸಮಾನನೆನಿಸುವನೇ
ವರ ವೇದ (ವಾದ) ಪ್ರತ್ಯಕ್ಷ ಶಬ್ದನು ಮಾನ
ಅಪೌರುಷೇಯವಾದ ನಿಗಮಗಳಿಗೆ
ದೂರವಾಗಿಹ ಮಾತು ಸಜ್ಜನರ ಕಂಗಳಿಗೆ
ತೋರದಯ್ಯಾ ನಿಜವು ಎಂದೆಂದಿಗೆ ವೈ
ಕಾರವಾಗಿದ್ದ ಚಿತ್ತ ವಿಭ್ರಮದಿಂದ
ಶಾರೀರ ಸ್ಮರಣೆ ಏನು ಇಲ್ಲದಿಪ್ಪ
ನರಾಧಮ ತಾನು ನಾನಾ ವಾಕ್ಯವ ನುಡಿಯೆ
ಧೀರರಿಗೆ ಪ್ರಾಮಾಣ್ಯವೆನಿಸುವದೇ
ಕರವ ಚಲಿಸುವ ಶಕ್ತನಾಹದಿದ್ದವನಾಗಿ
ಮೇರು ಎತ್ತುವೆನೆಂಬ ಮೃಷವಾದಿ ತೆರದಿ
ವರಲಿಕೊಂಡದಕವನ ಮರಳಿ ನೋಡುವರಿಗೆ
ಸ್ವಾರಸ್ಯ ಎನಿಸುವುದೆ ಎಂದಿಗನ್ನ
ಶ್ರೀ ರಮಣ ಸರ್ವೇಶ ಗುರು ವಿಜಯ ವಿಠ್ಠಲರೇಯ
ಸಾರಿಗಾಣದೆಯಿದ್ದ ಸ್ವಾತಂತ್ರನೋ ೧೩

## ಧ್ರುವತಾಳ

ಪೆಟ್ಟಿಗೆಯೊಳಗಿಪ್ಪ ಮೂರ್ತಿಯ ಭಕುತಿಲಿ
ನಿಷ್ಠೆಯಿಂದಲಿ ಪೂಜೆ ಮಾಡಿಕೊಳುತ

ಇಷ್ಟ ಬೇಡುವದು ಸಹಜವೆ ಸರಿ ಬರಿದೆ
ಪೆಟ್ಟಿಗೆ ಪೂಜೆಯನ್ನು ಮಾಡಿ ತನ್ನ
ಇಷ್ಟ ಬೇಡುವೆನೆಂಬ ಸಾಹಸದಂತೆ ನೋಡಿ
ವಿಷ್ಣು ಸಕಲವಾದ ವಸ್ತುಗಳಲಿ
ದಿಟ್ಟನಾಗಿ ವ್ಯಾಪ್ತನಾಗಿ ಇರಲು ತಿಳಿಯದೆ ಅ–
ಶ್ರೇಷ್ಠವಾದ ಜೀವ ಸಂಘಗಳನು
ಮುಟ್ಟಿ ಭಜಿಸಿದರೆ ಶ್ರೇಷ್ಠರಾಗುವದೆಂತೊ
ಹೃಷ್ಟರಾಗರಯ್ಯಾ ಇಹಪರದಿ
ದಿಟ್ಟಮೂರುತಿ ವ್ಯತಿರಿಕ್ತವಾಗಿ ಪರ
ಮೇಷ್ಠಿ ಸುರರು ಪೂಜೆ ಸ್ವತಂತ್ರದಿ
ಶ್ರೇಷ್ಠವಾಗದಯ್ಯಾ ಶ್ರುತಿ ಸ್ಮೃತಿ ಸಮ್ಮತ ಶ್ರೀ–
ಕೃಷ್ಣನ ವಾಕ್ಯವುಂಟು
"ಯೇಪ್ಯನ್ಯ ದೇವತಾ ಭಕ್ತ್ಯಾಯಜಂತೆ ಶ್ರದ್ಧಯಾನ್ವಿತಾ
ತೇಪಿ ಮಾಮೇವ ಕೌಂತೇಯ ಯಜಂತೆ ವಿಧಿಪೂರ್ವಕಂ ॥"
ಸೃಷ್ಟಿಯೊಳಗೆ ಬ್ರಹ್ಮ ರುದ್ರಾದಿ ಸುರರ ಪೂಜಾ
ಪುಷ್ಟ ಷಾಡ್ಗುಣ್ಯ ತಾನೆ ಸ್ವೀಕರಿಸಿದರು
ಶಿಷ್ಟವಾದ ವಿಧಿಯೆನಿಸದು ಎಂದೆಂದಿಗೆ
ಹೃಷ್ಟ ಮನಸಿನಿಂದ ಗ್ರಹಿಸುವದು
ಶಿಷ್ಟರಾದವರನ್ನ ಭಜಿಸಿದ ಕಾಲಕ್ಕು ಅವರ ಹೃದ–
ಯಷ್ಟದಳದಲಿಪ್ಪ ದೇವನಲ್ಲಿ
ದೃ(ಹೃ)ಷ್ಟಿ ಉಳ್ಳವನಾಗಿ ಮಾಡಿದ ಉಪಚಾರ
ಶ್ರೇಷ್ಠನಾದ ಹರಿಗೆ ಸಮರ್ಪಿಸು ಉ–
ತ್ಕೃಷ್ಟನಾದ ಮಹಿಮ ಗುರು ವಿಜಯ ವಿಠ್ಠಲನ್ನ
ಬಿಟ್ಟು ಮಾಡುವದು ಅವಿಧಿಯು ೧೪

## ಮಟ್ಟತಾಳ

ಈ ವಿಧದಲಿ ತಿಳಿದು ಭಕುತಿಯಿಂದಲಿ ನೀನು
ದೇವ ದೇವನ ಯಜಿಸು ಜ್ಞಾನಪೂರ್ವಕದಿಂದ
ಆವ ಷಡ್ರಸದಿಂದ ಪೂರ್ಣನಾದ ಹರಿಗೆ

ಆವಾವ ಕಾಲದಲಿ ಆಪೇಕ್ಷೆಗಳಿಲ್ಲ
ಜೀವದ ನಿಮಿತ್ಯ ಸ್ಥೂಲಾನ್ನವ ಕೊಂಬ ಸ್ವ-
ಭಾವದಿಂದಲಿಹ್ಯ ಪರಿಪೂರ್ಣ ತಾನಾಗಿ
ಭುವನತ್ರಯವನ್ನು ನಿರ್ಮಾಣವ ಮಾಡಿ
ಪಾವಮಾನ ವಿಧಿ ಭವ ಇಂದ್ರಾದ್ಯರಿಗೆ
ಅವರವರ ಯೋಗ್ಯ ಪದವಿಯ ಕಲ್ಪಿಸಿ
ಆ ವಿಧಿ ಸ್ತಂಭ ಪರಿಯಂತವಾಗಿ
ಸು ವಿಹಿತಾ ವಿಹಿತ ತೃಪ್ತಿಯ ನೀವಂಗೆ
ನಾವಿತ್ತನ್ನದಲಿ ಅಪೇಕ್ಷೆಗಳುಂಟೆ ?
ಸಾವಿರ ಕೋಟ್ಯಾಧಿಕ ಸಂಪನ್ನನು ಎನಿಸಿ
ಜೀವ ಕೋಟಿಗಳಿಗೆ ಅನ್ನವ ನೀವಂಗೆ
ಕೇವಲ ದಾರಿದ್ರನ ಅನ್ನಪೇಕ್ಷೆ ಮಾಡುವನೆ
ಸು ವಿಮಲವಾದ ನವನವ ಭಕುತಿಯಲಿ
ಭಾವ ಭರಿತನಾಗಿ ಪ್ರಾರ್ಥಿಸೆ ಕರುಣಿಸಿ
ಆವ ರಸದ ದ್ವಾರ ಭಕುತಿಯ ಸ್ವೀಕರಿಪ
ಭಾವದಲಿ ಭಕುತಿ ಇಲ್ಲದಿದ್ದರೆ ನೋಡು
ದೇವ ದೃಷ್ಟಿಲಿ ನೋಡ ಕಾಲತ್ರಯದಲ್ಲಿ
ಶ್ರಾವ್ಯವೆ ಸರಿ ಧಾರ್ತರಾಷ್ಟನ ಧಿಕ್ಕರಿಸಿ
ಆ ವಿದುರನ ಮನೆಯ ಪಾಲುಂಡನು ಕೃಷ್ಣ
ಭೂ ವಿಬುಧರ ಪ್ರಿಯ ಗುರು ವಿಜಯ ವಿಠ್ಠಲ ರೇಯ
ಸಾವಿರ ಮಾತಿಗೆ ಭಕುತಿಯಿಂದಲಿ ವಶನೋ ೧೫

## ತ್ರಿವಿಡಿತಾಳ

ಒದಗಿ ಕೇಳುವದು ಭಕುತಿಯಿಂದಲಿ ಮನವೆ
ಇದನು ಗ್ರಹಿಸಿದವ ಜೀವನ ಮುಕ್ತಾ
ಇದನು ಗ್ರಹಿಸಿದವಗೆ ಪುನರಪಿ ಜನ್ಮವಿಲ್ಲ
ಇದನು ಗ್ರಹಿಸೆ ಹರಿ ವಶನಾಗುವ
ಇದನು ಗ್ರಹಿಸಿದವನ ಸುರರೆಲ್ಲ ಮನ್ನಿಪರು
ಇದನು ಗ್ರಹಿಸಿದವ ಮಾನ್ಯನಾಹ

ಇದನು ಗ್ರಹಿಸಿದವ ಕುಲಕೋಟಿ ಸಹವಾಗಿ
ಮಧು ವೈರಿ ಪುರವನ್ನ ಸೂರೆಗೊಂಬ
ಇದನು ಗ್ರಹಿಸಿದವಗೆ ನರಕದ ಭಯವಿಲ್ಲ
ಇದನು ಗ್ರಹಿಸೆ ನಿತ್ಯ ಸುಖಿಯಾಹನೋ
ಮೊದಲು ಪೇಳಿದಂತೆ ಗುಣಿಸು ಅಂತರದಲ್ಲಿ
ಅದುಭೂತ ಮಹಿಮನ್ನ ಸ್ವ ಪರ ದೇಹದಲ್ಲಿ
ಸದಮಲ ಮೂರ್ತಿಗಳು ಅಸಂಖ್ಯವಾಗಿವುಂಟು
ವಿಧಿ ಭವ ಮುಖರಿಂದ ಎಣಿಸಲೊಶವೆ
ಯಾದವ ಕುಲಮಣಿ ಕೃಷ್ಣನ ವಾಕ್ಯ ಉಂಟು
"ಅವಿಭಕ್ತಂಚ ಭೂತೇಷು ವಿಭಕ್ತಮವಚಸ್ಥಿತಂ ।"
ಆದರದಲಿ ತಿಳಿ ಐದು ಮೂರು ಮತ್ತೆ ಕೃದ್ಧೊಲ್ಕಾದಿ
ವಿಧಿ ಭವ ಪ್ರವರ್ತಕ ಕೇಶವಾದಿ ಚತುರ್ವಿಂಶತಿ
ವಿದ್ಯ ಮತ್ಸಾದಿ ಮೂರುತಿ ದ್ವಾದಶವು
ಕುಧರಾದಿ ದಶರೂಪ ಹಿಂಕಾರ ಪ್ರಸ್ಥಾವ
ಉದ್ಗೀಥ ಮೊದಲಾದ ನಾನಾರೂಪ ಅ-
ಜಾದಿ ಐವತ್ತೊಂದು ನಾರಾಯಣಾದಿ ನೂರು ವಿ-
ಶ್ವಾದಿ ಸಹಸ್ರ ಪಂಚಕೋಶದಿಪ್ಪ
ಐದು ಲಕ್ಷದ ಎಂಭತ್ತೈದು ಸಾಸಿರ ನಾಲ್ಕು ನೂರು
ಮೋದ ಸಾಂದ್ರನು ಎಪ್ಪತ್ತೆರಡು ಸಹಸ್ರ ನಾಡಿಗಳಲ್ಲಿ
ಇದೇ ಕ್ಲಿಪ್ತದಿಂದಲಿ ಸ್ತ್ರೀ ಪುರುಷ ರೂಪದಿಂದ ಅಜಿ-
ತಾದಿ ಅನಂತವಾದ ರೂಪ
ಆದಿಮೂರುತಿ ಪರಾದಿ ಅನಂತಾನಂತ
ಸದಮಲ ರೂಪದಿಂದ ವ್ಯಾಪ್ತನೆನಿಸಿ
ಈ ದೇಹದಲ್ಲಿದ್ದು ರಕ್ಷಿಪ ಬಗೆಯನರಿದೆ
ಅಧಮ ನರನು ನಾನೆ ಸ್ವತಂತ್ರನೆನ್ನೆ
ಬುಧರಿಗೆ ಪ್ರಿಯನಾದ ವೀರನ ಗದೆಯಿಂದ
ಭೇದನವಾಗದಲೆ ಮೀರುವನೇ
ಇದನು ಗ್ರಹಿಸಿದವ ಜೀವನ್ಮುಕ್ತನಾಗೆ
ಬಾಧಿ ತಪ್ಪಿಸಿಕೊಳನು ನರಕದಲ್ಲಿ

ಇದನು ಇರಲಿ ಮತ್ತೆ ಮುಂದೆ ಕೇಳುವದು
ಮೇದಿನಿಯಲ್ಲಿದ್ದ ಸಕಲ ಲಕ್ಷಣವ
ಇದನು ಅಂಶಿಯೆಂದು ತಿಳಿವರು ಜ್ಞಾನಿಗಳು
ಹೃದಯದಲ್ಲಿಪ್ಪದು ಅಂಶವೆನ್ನು
ಇದನು ಕೇಳು ಪರಮ ವಿಸ್ತಾರವಾದ ಮಹಿಮ
ಆದಿ ಪುರುಷ ವೈಕುಂಠವಾಸಿ
ವದನ ಸಾಸಿರನ್ನ ನೆನೆದು ಅವರವರ
ಹೃದಯ ದಿಪ್ಪವಂಗೆ ಏಕೀಕರಣ ಮಾಡು
ಉದಯಾರ್ಕ ಕೋಟಿ ಪ್ರಭಾ ಅನಂತಾಸನದಿಪ್ಪ
ಪದುಮನಾಭ ಮತ್ತೆ ಕ್ಷೀರಾಬ್ಧಿಶಾಯಿ
ವದನ ಸಾಸಿರ ತಲ್ಪನಾದ ನಾರಾಯಣ
ಬದರಿ ನಿವಾಸಿಯಾದ ವೇದವ್ಯಾಸ ಮ–
ಹಿದಾಸ ಶಿಂಶುಮಾರ ಹಯ ಶೀರ್ಷ ವಡಭಾ ಕಲ್ಕಿ
ಸುಧನ್ವಂತ್ರಿ ಹಂಸ ವಕ್ತ್ರಾ ಕಪಿಲ ಋಷಭ
ಮೋದ ಸಾಂದ್ರನಾದ ಪುರುಷರೂಪ ತ್ರಯ
ಆದ್ಯಂತ ರಹಿತನಾದ ದತ್ತಾತ್ರಯ
ಆದಿ ಮೂರುತಿ ಅವತಾರಗಳೆಲ್ಲ ಸ್ಮರಿಸಿ
ಅದ್ವೈತ ತ್ರಯಂಗಳ ಅನ್ವಯಿಸೋ
ಪ್ರಾದೇಶ ಮೂರ್ತಿ ತಾನೆ ಯಜ್ಞ ನಾಮಕನೆಂದು
ಪದೋ ಪದಿಗೆ ತಿಳಿದು ಸಕಲ ರೂಪ
ಹೃದಯ ಸಂಸ್ಥಿತನಲ್ಲಿ ಐಕ್ಯ ಚಿಂತನೆ ಮಾಡೊ
ಭೇದವಿಲ್ಲ ನೋಡೊ ಎಳ್ಳಿನಿತು
ಬೋಧ ಮೂರುತಿ ಗುರು ವಿಜಯ ವಿಠ್ಠಲರೇಯ
ಇದನು ತಿಳಿದವನ್ನ ಕ್ಷಣವಗಲನೋ ೧೬

## ರೂಪಕತಾಳ

ಬದರಿ ದ್ವಾರಕಾ ಲೋಹ ಕ್ಷೇತ್ರ ಕಾಶಿ ಪ್ರಯಾಗ ಶ್ರೀ
ಪದವೀವ ಗಯಾ ಕ್ಷೇತ್ರ ಅಯೋಧ್ಯ
ಯದುಗಿರಿ ತೋತ್ರಾದಿ ಶ್ರೀ ಮುಷ್ಟ ಮನ್ನಾರಿ

ಪದುಮನಾಭಾನಂತ ವೈಕುಂಠಾಚಲಾ
ನಿಧಿ ಮೊದಲಾದ ಸುಕ್ಷೇತ್ರವ್ರೋ(ದಲ್ಲಿ)ಲಿಪ್ಪ
ವಿಧಿ ಭವ ಮುಖರಿಂದ ಪೂಜೆಗೊಂಬ
ಸದಮಲ ಮೂರ್ತಿಗಳು ಇರುವ ಕ್ರಮದಿಂದ ದಶ
ವಿಧದಿಂದ ಇರುತಿಪ್ಪ ಬಗೆಯನರಿತು
ಹೃದಯ ಸಂಸ್ಥಿತನಲ್ಲಿ ತಂದು ಕೂಡಿಸು ಮರಳೆ
ಇದೇ ಲೋಕವಿಡಿದು ಮತ್ತೆ ಪಾತಾಳದಿ (ಈರೇಳು ಲೋಕಾದಿ)
ಐದೆರಡು ಲೋಕಾದಿ ಇರುತಿಪ್ಪ ಮೂರ್ತಿಗಳು
ಒದಗಿ ಚಿಂತಿಸಿ ಐಕ್ಯ ತಿಳಿಯೊ ನೀನು ಈ
ವಿಧದಿಂದ ಸಂಸ್ತುತಿಸಿ ಪರಮ ಭಕುತಿಯಿಂದ
ಉದಕ ಕೊಡುವನ್ಯಾಕೆ ಅಮೃತೋಪಮವ್ರೋ
ಪದುಮನಾಭನಿಗಿದೆ ಪೂಜೆಯೆನಿಸುವುದಯ್ಯಾ
ಇದೇ ಬಗೆಯನೆ ತಿಳಿದೆ ವ್ಯರ್ಥವಾಗಿ
ಬುಧರು ನಾವೆಂತೆಂದು ಬರಿದೆ ಹಿಗ್ಗುವ ನರನ
ಮದ ಗರ್ವಕ್ಕೇನೆಂಬೆ ಮಹಿಯೊಳಗೆ
ಸುಧಿಯಾಬ್ಧಿ ಪ್ರಯತ್ನವಿಲ್ಲದೆ ಜಗದೊಳು
ಉದುಭವಿಸಿರೆ ಬಿಟ್ಟು ಯತ್ನದಿಂದ
ಆದರದಿ ವಿಷವನ್ನು ಪಾನ ಮಾಡುವರೆಲ್ಲ
ವಿಧಿ ಲಿಖಿತವನೆ ಮೀರಲಾಪರಾರು
ಪದು ಸಂಭವನುತ ಗುರು ವಿಜಯ ವಿಠ್ಠಲನ್ನ
ಪದಗಳ ಬಿಗಿದಪ್ಪಿ ಸುಖಿಸೊ ಸತತ ೧೭

**ಝಂಪೆತಾಳ**

ಸತ್ಯವಿದು ಗ್ರಹಿಸುವದು ಶ್ರುತಿ ಸ್ಮೃತಿಯಲಿರುತಿಪ್ಪ
ಅರ್ಥಗಳಿವು ಕೇಳಿ ಭಕುತಿಯಿಂದ
ಮಿಥ್ಯವೆಂದಿಗು ಅಲ್ಲ ಅದೃಷ್ಟಹೀನನಾಗಿ
ಅತಥ್ಯವೆಂದರೆ ಅದಕೆ ಮಾಳ್ಪದೇನು
ವ್ಯರ್ಥವಾಗಿ ಭವದಿ ದುಃಖಗಳುಣಲೇಕೆ ಉ–
ಧೃತನಾಗುವೆನೆಂಬ ಮನಸಿನಿಂದ

ಕೀರ್ತಿಸು ಹರಿಯನ್ನು ಪೂರ್ವೋಕ್ತದಂತೆ ತಿಳಿದು
ಭಕ್ತಿಯಿಂದಲಿ ಯಜಿಸೊ ವಿಧಿಪೂರ್ವಕ
ಸತ್ಯ ಲೋಕಾಧಿಪನ ಸತಿ ಸಹಿತ ಮಿಕ್ಕಾದ ಲೋ–
ಕಸ್ಥರೆಲ್ಲರ ಸ್ಮರಿಸೂ ತಪೋ ಜನೊ ಲೋಕವ
ಮತ್ತೆ ಮಹರ್ಲೋಕ ಸ್ವರ್ಲೋಕ ಭುವರ್ಲೋಕ
ಮರ್ತ್ಯಲೋಕವು ಮತ್ತೆ ಅಧೋ ಲೋಕಗಳ
ಸಪ್ತವನ ಚಿಂತಿಸು ಮರೆಯದಲೆ ಲೋಕಾಧಿ
ಪತ್ಯರನು ಭೃತ್ಯರನು ಸತಿಯರಿಂದ
ಯುಕ್ತರಾದವರೆಲ್ಲ ಅಂಶಿಯೆನಿಸುವರಯ್ಯಾ
ಹೃತ್ಪುಂಡ್ರದಲಿ ನಿಲಿಸಿ ಹರಿ ಅಂಶವನ್ನು
ಉಕ್ತಿಯನು ಲಾಲಿಪುದು ಅಂಶಾಂಶ ಭಾಗಗಳು ಏ–
ಕತ್ರ ಚಿಂತಿಸು ಬಿಡದೆ ದೇಹದಲ್ಲಿ ಆ–
ಸಕ್ತಿಯಿಂದಲಿ ಮನದಿ ಪ್ರಾರ್ಥಿಸಿ ಅವರವರ
ಹೃತ್ಕಮಲದಲ್ಲಿದ್ದ ಮೂರ್ತಿಗಳನು
ಮತ್ತೆ ಕೂಡಿಸು ಮರಳೆ ಸಕಲ ರೂಪಗಳೆಲ್ಲ
ಅತ್ಯಂತ ಅಭೇದವೆಂದು ತಿಳಿಯೊ ಅ–
ನಿತ್ಯವೆನ್ನಲಿ ಸಲ್ಲ ಅರ್ಜುನಗೆ ಶ್ರೀ ಕೃಷ್ಣ
ಮಿತ್ರನಾಗಿ ಪೇಳ್ದ ವಾಕ್ಯವುಂಟು
"ವಿದ್ಯಾ ವಿನಯ ಸಂಪನ್ನೆ ಬ್ರಾಹ್ಮಣೆ ಗವಿಹಸ್ತಿನಿ
ಶುನೀಚೈವ ಶ್ವಪಾಶೇಚ ಪಂಡಿತಾ ಸಮದರ್ಶನಃ ॥"
ಈ ತೆರದಲಿ ತಿಳಿದು ಸಂದೇಹ ಮಾಡದಲೆ
ಸರ್ವ ಮೂರ್ತಿಗಳ ಕೂಡಿಪದು ಬಿಂಬನಲ್ಲಿ
ಮರ್ತ್ಯರಾರಂಭಿಸಿ ಸಕಳ ಜಡಚೇತನ ಎಂ–
ಭತ್ತು ನಾಲ್ಕು ಲಕ್ಷ ಜಾತಿಗಳನ
ಉತ್ತಮಾನುತ್ತಮ ಬಗೆಯರಿತು ಅವರಂತೆ
ಸ್ಥಿತ್ಯ ಹರಿ ಮೂರ್ತಿಯನು ಐಕ್ಯ ತಿಳಿಯೋ
ತತ್ವವಿದು ತಿಳಿಯದಲೆ ಕೋಟ್ಯಾಧಿಕ ಜೀವರಿಗೆ
ವಿತ್ತನ್ನ ಮೊದಲಾದ ದಾನಗಳನು
ಇತ್ತರೇನು ಫಲವು ಅಲ್ಪ ಪುಣ್ಯಗಳಿಂದ

ಮತ್ತೆ ಮತ್ತೆ ಬರುವ ಭೂಮಿಯಲ್ಲಿ
ಮೃತ್ಯುವಿಗೆ ಸಮವಾದ ದುಃಖಗಳು ಮೀರುವನೆ
ಎತ್ತಲಿದ್ದರೇನು ಹರಿ ವಿಮುಖನೋ
ನಿತ್ಯ ತೃಪ್ತನಾದ ಗುರು ವಿಜಯ ವಿಠ್ಠಲರೇಯ
ಎತ್ತಿ ನೋಡನು ಮುಖವು ಎಂದಿಗನ್ನ ೧೮

**ಆದಿತಾಳ**

ಇದು ಪರಮ ಗೌಪ್ಯವಯ್ಯಾ ಗುಹ್ಯಾದ್ಗುಹ್ಯೋತ್ತಮ
ಆದಿತೇಯ ವಿದ್ಯವಿದು ಅಧಮಗೆ ಯೋಗ್ಯವಲ್ಲ
ಮೋದತೀರ್ಥರ ಮತಾನುಗರಾಗಿದ್ದ ಸುಜನರ
ಪಾದಕ್ಕೆರಗಿ ಬೇಡಿಕೊಂಬೆ ದುರುಳರಿಗೆ ಪೇಳಸಲ್ಲ
ಸದಮಲ ಯಜ್ಞ ಶೇಷ ಶುನಕಗೆ ಯೋಗ್ಯವಲ್ಲ
ಇದರಂತೆ ತಿಳಿವದು ಮನ್ನಿಸಿ ಕರುಣದಿ
ಆದರದಲಿ ಹರಿಪದಗಳ ಭಜಿಸುವ
ಬುಧರಿದು ಭಕುತಿಲಿ ಸ್ವೀಕಾರ ಮಾಡುವದು
ಇದೆ ಬಗೆ ತಿಳಿವರ್ಗೆ ಪುನರಪಿ ಜನ್ಮವಿಲ್ಲ
ಇದು ಎನ್ನ ಮಾತಲ್ಲ ಶ್ರೀ ಹರಿ ವಾಕ್ಯವುಂಟು
"ಸರ್ಗೋಪನೋಪಜಾಯಂತೆ ಪ್ರಳಿಯೇನ ವ್ಯಥಂತಿಚಃ ।"
ಇದು ಗ್ರಹಿಸಿ ಸುರರೆಲ್ಲ ಸುಖಬಡುವರು ನಿತ್ಯ
ಇದು ತಿಳಿದ ಮಾನವರು ನರರಲ್ಲ ಸುರರೇ ಸರಿ
ವಿಧುಃ ಶ್ರೀ ವತ್ಸಲಾಂಛನ ಗುರು ವಿಜಯ ವಿಠ್ಠಲರೇಯ
ಬದಿಯಲ್ಲಿ ಇರುತಿಪ್ಪ ಇದು ಗ್ರಹಿಸಿದವರಿಗೆ ೧೯

**ಜತೆ**

ಹರಿಯ ಯಾಜಿಸು ಇನಿತು ಜನುಮದೊಳಗೆ ಒಮ್ಮೆ
ಮರಳಿ ಬಾರದು ದೇಹ ಗುರು ವಿಜಯ ವಿಠ್ಠಲವೊಲಿವಾ ॥

೧೬೨

**ಧ್ರುವತಾಳ**

ಬಲವುಳ್ಳ ವಸ್ತು ಮಧ್ಯ ನಿನಗಿಂದಧಿಕವಾದ
ಬಲವುಳ್ಳ ವಸ್ತು ಆವದಯ್ಯ ಪೇಳೊ
ಜಲಜ ಜಾಂಡಕ್ಕೆ ಬಲವೆಂದೆನಿಪ ಸಿರಿದೇವಿ
ಜಲಜ ಸಂಭವ ರುದ್ರಾಮ್ಯರ ತತಿಯು
ಕಲ್ಪಿಸಿ ಅವರವರ ಉಚಿತ ಪದಗಳಿತ್ತು ನಿ-
ರ್ಮಲವಾದ ಜ್ಞಾನವಿತ್ತು ಪ್ರಾಂತ್ಯದಲ್ಲಿ
ವಿಲಿಂಗರನ್ನು ಮಾಡಿ ಸ್ವ ಸ್ವಯೋಗ್ಯತೆ ಮುಕ್ತಿ
ಫಲ ಉಣಿಪೆನೆಂದು ಶ್ರುತಿ ವರಲುತಿಪ್ಪ
ಶ್ರೀ ಲಕುಮಿದೇವಿ ನಿನ್ನ ಅಪಾಂಗ ದೃಷ್ಟಿ[1] ಬಲದಿ
ಚಲಿಸುವೆನೆಂದು ದೃಢದಿ ಪೇಳುತಲಿರೆ
ಬಲವುಳ್ಳ ವಸ್ತು ಮಧ್ಯ ಬಲ ಯಾವದುಂಟು ಪೇಳೊ
ನಳಿನನಾಭನೆ ನಿನ್ನ ವ್ಯತಿರಿಕ್ತವಾಗಿ
ಕಾಲ ಕರ್ಮಾದಿಗಳಿಗೆ ಸ್ವಾತಂತ್ರ ಎನಿತು ಪೇಳೊ
ಕಾಲ ಕರ್ಮಾದಿ ವಾಚ್ಯನಾಗಿ ನೀನೇ
ಲೀಲೆ ಮಾಡುವನಾಗಿ ತತ್ತದ್ವಸ್ತುಗಳಿಗೆ
ಒಲಿದು ತಂದಿತ್ತ ಮಹಿಮೆ ನಿನ್ನದಲ್ಲದೆ ಅ-
ಖಿಳ ಶಾಸ್ತ್ರದಲ್ಲಿ ಆಲೋಚಿಸಿ ನೋಡಿದರು
ಮೂಲ ನೀನೇವೆ ಸಕಲ ವಸ್ತುಗಳಿಗೆ
ಜಲಜ ನಯನನೆ ಇದನೆ ಸಿದ್ಧಾಂತವಾಗದಿರೆ
ಒಲಿದು ಎನಗೆ ನೀನೆ 'ಬೀಜಂ ತದಹಂ' ಎಂದು ಪೇಳಿದ್ಯಾಕೆ
ಖಳದರ್ಪ ಹರಿ ಗುರು ವಿಜಯ ವಿಠ್ಠಲ ನಿನ್ನ
ಸಲೆ ವಾಕ್ಯ ಎನ್ನ ಮನದಿ ಚಲಿಸದೆಂದು ೧

---

೧. ಕಡೆಗಣ್ಣ ನೋಟ

**ಮಟ್ಟತಾಳ**

ಗರುಡಗೆ ಉರಗದ ಭಯ ತೋರಿಸಿದಂತೆ
ಕರುಣ ನಿಧಿಯೆ ಎನ್ನ ಸಲೆ ಮೋಹಿಪನಾಗಿ
ಪ್ರಾರಬ್ಧ ಕರ್ಮದ ಬಗೆ ಪೇಳಿದ ಮಾತು
ಪರಿಹಾಸ್ಯವಲ್ಲದೆ ಶ್ರುತಿ ಸಮ್ಮತವಲ್ಲ
ಸುರತರು ಸುರಧೇನು ಚಿಂತಾಮಣಿಯಲ್ಲಿ
ಪರಿಪರಿ ಕಾಮಗಳ ಪರಿಪೂರ್ತಿಪ ಶಕ್ತಿ
ಸ್ವರೂಪ ಭೂತವಾಗೆ ತತ್ತತ್ಸಮಯದಲಿ
ಇರದೆ ಪೋಯಿತು ಯಾಕೆ ಜಡದಲಿ ಚೇತನ
ಪರಮೇಷ್ಠಿ ಮೊದಲಾದ ಸುರನರ ಜಡದಲ್ಲಿ
ಪರಿವ್ಯಾಪ್ತವಾಗಿ ಅವರವರಿಗೆ ಕೀರ್ತಿ
ಹರಿ ನಿನ್ನಿಂದಲ್ಲೆ ತಂದಿತ್ತದಲ್ಲದೆ
ಬರಿದೆ ಕರ್ಮವ ತೋರಿ ನೀನೆ ಬಳಲಿಪದೇಕೆ
ನರ ಸಾರಥಿ ಗುರು ವಿಜಯ ವಿಠ್ಠಲ ನಿನ್ನ
ಬಿರಿದಿಗೆ ಇದು ಘನತೆ ಕಠಿಣ ಬಿಡು ಬಿಡು ೨

**ತ್ರಿವಿಡಿತಾಳ**

ಜೀವ ಪ್ರಕೃತಿ ಕಾಲ ಕರ್ಮಾನುಸಾರವಾಗಿ
ದೇವ ದೈತ್ಯರ ದ್ವಾರವೆರಡರಿಂದ
ಸು ವಿಹಿತಾವಿಹಿತ ಕರ್ಮ ಮಾಳ್ಪ ಕಾರಣದಿಂದ
ಕೇವಲ ನಿರ್ಘಣಾದಿ[1] ಶೂನ್ಯನೆಂದು
ಆ ವೇದ ಶಾಸ್ತ್ರಗಳು ವರುಲುತಿವೆ ಸತತ
ಈ ವಿಧ ಕರ್ಮವನ್ನು ಕಳೆವದಕ್ಕೆ
ದೇವ ದೇವನೆ ನಿನ್ನಿಂದ ನಿರ್ಮಿಸಿದಂಥ
ಸುವಾಕ್ಯಗಳುಂಟು ಬಲು ವಿಧದಿ
"ವಿಷ್ಣೋರಂಗಾರಶೇಷೇಣ ಯೋಽಂಗಾನಿ ಪರಿಮಾರ್ಜಯೇತ್
ಕೋಟಿ ಜನ್ಮಾರ್ಜಿತಂ ಪಾಪಂ ತತ್‌ಕ್ಷಣಾ ದೇವನಸ್ಯತಿ
ಕೋಟ್ಯೆಂದು ಸಹಸ್ರೈಸ್ತು ಮಾಸೋ ಪೋಷಣ ಕೋಟಿಭಿಃ

---

೧. ದಯಾಶೂನ್ಯ, ನಿರ್ದಯ.

ತತ್ಫಲಂ ಲಭತೇ ಪುಂಭಿಃ ವಿಷ್ಣೋರ್ನೈವೇದ್ಯ ಭಕ್ಷಣಾತ್ ॥
ಏವಮಾದಿಗಳು ಈ ಪರಿ ವರುಲುತಿರೆ
ಶ್ರೀ ವಿಷ್ಣು ಪ್ರೀತ್ಯರ್ಥ ಮಾಳ್ಪ ಕರ್ಮ
ಆವ ದುಷ್ಕರ್ಮದ ಫಲವು ಕಾಯದಿರೆ
ಸುವಾಕ್ಯಗಳಿಗೆಂತು ಪ್ರಾಮಾಣ್ಯ ಬರುವದೊ
ಆವ ವಸ್ತು ಧರ್ಮ ನಿನ್ನಿಂದಾಗುತಲಿರೆ
ಪೂರ್ವೋಕ್ತ ಕರ್ಮದಿ ವ್ಯಾಪ್ತನಲ್ಲವೇನು
ಸಾವಧಾನದಿ ಕೇಳೊ ವ್ರಜನಾರ್ದನನೆ ನಿನ್ನ
ಪವಿತ್ರವಾದ ನಾಮಸ್ಮರಣೆ ಮಾತ್ರ
"ಯತ ತೋಪಿಹರೇಃ ಪದ ಸಂಸ್ಮರಣೆ
ಸಕಲಂ ಹ್ಯಗಮಾಸುಲಯಂ ವ್ರಜತೀ" ಎಂದು ನುಡಿದ
ಆ ವೇದಶಾಸ್ತ್ರಗಳಿಗೆ ಪ್ರಾಮಾಣ್ಯವೆಂತು ಅರಿಯೆ
ಈ ವಸುಂಧರೆಯಲ್ಲಿ ಕೂಡಿದ ಅಘವೆಂಬೊ
ಆವ ಮೇರು ಸಮ ತೂಲ ರಾಸಿ
ದಾವಾಗ್ನಿ ಎನಿಪದು ನಿನ್ನ ನಾಮದ ಸ್ಮರಣೆ
ಸಾವಿರ ಮಾತಿಗೆ ಸಿದ್ಧಾಂತವೋ
ಭಾವಿ ಬ್ರಹ್ಮರಿಗೆಲ್ಲ ಇದೆ ಇದೆ ಸಿದ್ಧವೆಂದು
ಆ ವೇದ ಶಾಸ್ತ್ರಗಳು ವರಲಿ ದಣಿಯುತಲಿರೆ
ಶ್ರೀ ವಾಸುದೇವ ಗುರು ವಿಜಯ ವಿಠ್ಠಲರೇಯಾ
ನೋವು ಕರೆಯದಿರೆ ಹರಿ ಎಂದು ನುಡಿವದ್ಯಾಕೆ ೩

**ಅಟ್ಟತಾಳ**

ನೀನು ಎಂದಿಗೂ ಸತ್ಯ ನಿನ್ನ ಕ್ರೀಯವು ಸತ್ಯ
ನೀನು ನುಡಿದಂಥ ವಾಕ್ಯ ಎಂದಿಗೂ ಸತ್ಯ
ನೀನು ಮಾಡಿದ ಕ್ಲಪ್ತವೆಂಬೊ ಪಾಶದಿಂದ
ಪ್ರಾಣಾದ್ಯಮರರು ನಿರುತ ಬದ್ಧಿತರಾಗಿ
ಸಾನುರಾಗದಿಂದ ಸಂಚರಿಸುವರು
ದೀನನಾಥ ಗುರು ವಿಜಯ ವಿಠ್ಠಲ ನಿನ್ನ
ಧೇನಿಪರಿಗೆ ಇಂತು ಕರ್ಮದ ಫಲವೋ ೪

**ಆದಿತಾಳ**

ಎಮ್ಮ ನಿಮಿತ್ಯವಾಗಿ ಅವತಾರ ಮಾಡಿದಿ
ಎಮ್ಮ ನಿಮಿತ್ಯವಾಗಿ ಅನುಬಂಧ ಮಾಡಿದಿ
ಎಮ್ಮ ನಿಮಿತ್ಯವಾಗಿ ಸಖತನ ಮಾಡಿದಿ
ಎಮ್ಮ ನಿಮಿತ್ಯವಾಗಿ ಕ್ಷಣವಗಲದೆ ಇದ್ದಿ
ಎಮ್ಮ ನಿಮಿತ್ಯವಾಗಿ ದೂತ ಕೃತ್ಯ ಮಾಡಿದಿ
ಎಮ್ಮ ನಿಮಿತ್ಯವಾಗಿ ನೀಚೋಚ್ಚ ಮಾಡಿದಿ
ಎಮ್ಮ ನಿಮಿತ್ಯವಾಗಿ ಸ್ವರೂಪ ಚಿಹ್ನೆಯ ಬಿಟ್ಟು
ಆ ಮಹಾ ಕೈಯಲ್ಲಿ ಕಶವನ್ನು ಧರಿಸಿದಿ
ಎಮ್ಮ ನಿಮಿತ್ಯವಾಗಿ ಬಹು ಕೃತ್ಯ ಮಾಡಿ ಈಗ
ಜನ್ಮದೊಳಗೆ ಒಮ್ಮೆ ಕಣ್ಣಿಲೆ ನೋಡದಿರೆ
ಚಿನ್ಮಯ ನಿನ್ನ ಕೃತ್ಯ ವ್ಯಭಿಚಾರ[1]ವಾಗದೇನೊ
ಸಮ್ಮತವೆ ನಿನಗೆ ಯಿದು ಶ್ರುತಿ ಸ್ಮೃತಿ ಸಂತತಿಗೆ
ಒಮ್ಮೆ ನೆನೆದ ಮಾತ್ರ ಮುಕುತಿಯನಿತ್ತವಂಗೆ
ಜನ್ಮವ ನಿನಗಾಗಿ ಸಮರ್ಪಣೆ ಮಾಡಿದವಗೆ
ಎಮ್ಮ ಅಭಿಮಾನ ಬಿಟ್ಟು ಈ ಪರಿ ಮಾಡುವಂಥ
ಹಮ್ಮು ಬಿಡು ಬಿಡು ಇನ್ನೆಂದಿಗಾದರು
ಖಮ್ಮಹಿಯೊಳಗಿದ್ದ ಸುರ ನರ ಜೀವಿಗಳಿಗೆ
ಸಮ್ಮತವಲ್ಲ ನೋಡು ಬಲು ಬಗೆ ನೋಡಿದರು
ಎಮ್ಮ ಪಾಲಿನ ದೈವ ಗುರು ವಿಜಯ ವಿಠ್ಠಲರೇಯ
ಸಮ್ಮುಖನಾಗುವದೆ ಕ್ಷಣವಗಲದೆ ಎನ್ನ ೫

**ಜತೆ**

ದುರುಳನ್ನ ಪಕ್ಷ ಬಿಟ್ಟು ಎನ್ನ ಪಾಲಿಗೆ ಬಂದ
ಪರಿಯ ಮರಿಯದಿರು ಗುರು ವಿಜಯ ವಿಠ್ಠಲ ೬

(ಶೋಭನ ನಾಮ ಸಂ ॥ ಆಶ್ವೀಜ ಶುದ್ಧ ೧೦ ಗುರುವಾರ)

---

೧. ಅಸಂಗತ ಸ್ಥಾಯಿಯಲ್ಲದ

೧೬೩

## ಉಗಾಭೋಗ[1]

ಪಯಣವಾಗುವದಕ್ಕೆ ಎಳ್ಳನಿತಾದರು
ಅಸೂಯಪುಟ್ಟದು ನಿನ್ನ ಪಾದ ಸಾಕ್ಷಿ
ಮಾಯಾ ರಮಣ ನಿನ್ನ ನೋಡಲಿಪ್ಪ ಸ್ಥಾನ
ಪೂಯಲೆ[2] ಸಹವಾಗಿ ತೋರುವದು ಎನಗೆ
ಕಾಯಾದೊಳಗೆ ಇದ್ದು ಪ್ರೇರಕನಾಗದವಗೆ
ನೆಯವಲ್ಲವೋ ನಾಯ ಪೇಳ್ವದಕ್ಕೆ
ಕಾಯಜ ಪಿತ ಬಂದು ಕಾಮಾ ಉಂಟು
ಲೇಶ ನೋಯಲಿಸದೆ ಮನಕೆ ತೋರಲಿಬೇಕು
ಶ್ರೀಯರಸನೆ ಇದಕೆ ವ್ಯವಧಾನ ಮಾಡದಲೆ
ಪರಿಯ್ಯಾಪ್ತಿಸಂಸ್ಥಿತನಾದ ಗುರು ವಿಜಯ ವಿಠಲರೇಯ

---

೧. ಅಪ್ರಕಟಿತವಾದದ್ದು.

೨. ಪೂಯಲೆಸಹ = ನಾ ಏಳು ನಾಯಕ ನರಕಗಳಲ್ಲಿ ಒಂದು.

## ೧೬೪

## ಗೀತಾ ಪ್ರಮೇಯ ಭಾಗ ಪ್ರಾರಂಭ ಶುಭಮಸ್ತು

ಯತ್ರ ಯೋಗೇಶ್ವರಃ ಕೃಷ್ಣೋ । ಯತ್ರ ಪಾರ್ಥೋ ಧನುರ್ಧರಃ ।
ತತ್ರ ಶ್ರೀರ್ವಿಜಯೋಭೂತಿರ್ಧ್ರುವಾನೀತಿರ್ಮತಿರ್ಮಮ ॥

॥ ಟೀಕಾ ॥

ದಾವ ಸ್ಥಳದಲ್ಲಿ ಯೋಗೇಶ್ವರರುಗಳಿಗೆ ಸ್ವಾಮಿಯಾದ ಶ್ರೀ ಕೃಷ್ಣ ಇರುತ್ತಾನೊ । ಧನುರ್ಧಾರಿಯಾದ ಅರ್ಜುನ ಇರುತ್ತಾನೊ । ತತ್ರ ಅಲ್ಲಿ । ಶ್ರೀ ಎಂದರೆ ಸಂಪತ್ತು ಭೂತಿ ಎಂದರೆ ಗಜಾಂತ ಐಶ್ವರ್ಯ ॥ ವಿಶೇಷತ ಯಾಜಯ ಭೂತಿ ಉತ್ತಮೋತ್ತಮ ವೃದ್ಧಿ । ನೀತಿ ನ್ಯಾಯೋಪಿ ತತ್ರೈವ ಧ್ರುವ ನಿಶ್ಚಿತೇತಿ ಸರ್ವತ್ರ ಸಂಬಧ್ಯತೆ । ಇತಿ ಮೇ ಮತಿಃ । ಹಿ । ನಿಶ್ಚಯಃ । ಗೀತಾ ನಿಶ್ಚಯ ವಾದಂಥಾದ್ದು ಎಂತ ಸಂಜಯನ ವಾಕ್ಯಕ್ಕೆ ಶಂಕಾ ಬಂದರೆ, ಅದು ಯಾಕೆ ಎಂದರೆ ಯೋಗೇಶ್ವರರುಗಳಿಗೆ ಸ್ವಾಮಿಯಾದ ಶ್ರೀ ಕೃಷ್ಣ ಇದ್ದಲ್ಲಿ ವಿಜಯಾದಿ ಗಳು ಇರೋಣ, ಪ್ರತ್ಯಕ್ಷ ಅನುಮಾನ ಶಬ್ದಾದಿಗಳಿಂದ ಕೂಡ ಸಮ್ಮತ ವಾದಂಥಾದ್ದು. ಅದು ಹ್ಯಾಗಂದರ :-

ಸಾಕ್ಷಾತ್ ಪರಮಾತ್ಮನು ಲೋಕ ವಿಲಕ್ಷಣವಾದ ಸಕಲ ಜ್ಞಾನಾನಂದಾದಿ ಗುಣ ಸಮೂಹದ ದಶೆಯಿಂದ ಅಂಶಾಂಶಗಳಿಂದ ಪೂರ್ಣನಾದಂಥವ. ಇದಕ್ಕೆ ಶ್ರುತಿ ಪ್ರಮಾಣ ॥

"ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣ ಮುದುಚ್ಯತೆ ॥
ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾಯ ಶಿಷ್ಯತೇ" ೧

ಈ ದಾವ ಪ್ರಮಾಣ ದಶಿಂದ ಸಾಕ್ಷಾತ್ ಶ್ರೀ ಕೃಷ್ಣ ಇದ್ದಲ್ಲಿ, ಪೂರ್ವೋಕ್ತ ವಾದ ಐಶ್ವರ್ಯಗಳು ಇರೋಣ ಆಶ್ಚರ್ಯವಲ್ಲ. ಇಂಥಾ ದಾವ ಲಕ್ಷಣೋಪೇತ ವಾದ ಶ್ರೀಕೃಷ್ಣ ಬಂದು ದಾರ ಹೃದಯದಲ್ಲಿ ಇರುತ್ತಾನೋ ಅವರು ಪೂರ್ವೋಕ್ತವಾದ ಜಯವುಳ್ಳವರು ಎಂತ ಕರಸುತಾರೆ. ಇದಕ್ಕೆ ಪ್ರಮಾಣ –

"ನಿತ್ಯೋತ್ಸವೋ ಭವೇತ್ತೇಷಾಂ ನಿತ್ಯ ಶ್ರೀನಿತ್ಯಶೋ ಜಯಃ ॥
ಯೇಷಾಂ ಹೃದಿಸ್ಥೋ ಭಗವಾನ್ ಮಂಗಲಾಯತನಂ ಹರಿಃ" ೧

ಪರಮಾತ್ಮ ದಾರ ಹೃದಯದಲ್ಲಿ ಇರುತ್ತಾನೋ, ಅವರೇ ನಿತ್ಯ ಜಯ ವುಳ್ಳವರು ಎಂತ ಕರಸುತಿರಲಿಕ್ಕಾಗಿ, ಸಾಕ್ಷಾತ್ ಶ್ರೀಕೃಷ್ಣ ಇದ್ದಲ್ಲಿ ಪೂರ್ವೋಕ್ತ ವಾದ ಐಶ್ವರ್ಯಗಳು ಇರೋಣ ಆಶ್ಚರ್ಯವಲ್ಲ. ಸಾಕ್ಷಾತ್ ಶ್ರೀಕೃಷ್ಣ ಇದ್ದಲ್ಲಿ ಜಯಾದಿಗಳು ಇರೋಣ, ಶ್ರುತಿ ಸ್ಮೃತಿ ಸಮ್ಮತವಾದಂಥಾದ್ದು.

ಅರ್ಜುನ ಇದ್ದ ಸ್ಥಳದಲ್ಲಿ ಪೂರ್ವೋಕ್ತವಾದ ಜಯಾದಿಗಳು ಕೂಡೋದಿಲ್ಲ. ಅದು ಯಾಕೆ ಎಂದರೆ ಜೀವರುಗಳಿಗೆ ಪ್ರಕೃತಿಯಿಂದ ಬದ್ಧತ್ವ ಇದ್ದ ಕಾರಣ ದಿಂದ, ಹಾಗೇವೆ ಪಾರತಂತ್ರ್ಯಾದಿದೋಷ ಯುಕ್ತತ್ವದಿಂದ ಹಾಗೇವೆ ಅಂಶಾಂಶ ಗಳಿಗೆ ಭೇದಾಭೇದ ಇದ್ದ ಪ್ರಯುಕ್ತ ಸರ್ವದಾ ಜಯಾದಿಗಳು ಕೂಡೋದಿಲ್ಲ.

ಪ್ರಕೃತಿ ಬದ್ಧ ಲಕ್ಷಣ ಎಂಥಾದ್ದು ಅಂದರೆ, ಸತ್ವಗುಣಾಭಿವ್ಯಕ್ತಿ ಕಾಲದಲ್ಲಿ ಜ್ಞಾನ ಪ್ರಾಚುರ್ಯದಿಂದ ಆನಂದಾದಿಗಳು ಇರುತ್ತವೆ. ರಜ ತಮೋ ಗುಣಾಭಿವ್ಯಕ್ತಿ ಕಾಲದಲ್ಲಿ, ಜ್ಞಾನಾನಂದಾದಿ ಜಯಾದಿಗಳು ಇಲ್ಲದೇ ದುಃಖವಾಗುತ್ತದೆ. ಪಾರತಂತ್ರ್ಯಾದಿ ದೋಷದಿಂದ ಏನಾಗುತ್ತದೆ ಎಂದರೆ ಸ್ವಾತಂತ್ರ್ಯನಾದ ಪರಮಾತ್ಮನಿಂದ ಅಂತಃಕರುಣ ಮಾಡಿಸಿಕೊಂಡ ಕಾಲಕ್ಕೆ ಸುಖವಾಗುತ್ತದೆ. ಆತನ ಅನಾದರದಿಂದೇ ದುಃಖ. ಇದಕ್ಕೆ ಪ್ರಮಾಣ ॥

"ಶ್ವಪಚಾದಪಿ ಕಷ್ಟತ್ವಂ । ಬ್ರಹ್ಮೇಶಾನಾ ದಯಃ ಸುರಾಃ ॥"

ಇನ್ನು ದೇವತಿಗಳಿಗೆ ಭೇದಾಭೇದ ಲಕ್ಷಣಗಳು ಹೇಳತಾರೆ. ಇನ್ನು ಪ್ರಸಂಗ ಸಂಗತಿಯಿಂದ ಪರಮಾತ್ಮನ ಅಂಶಾಂಶಿಗಳು, ಪೂರ್ವೋಕ್ತ ಪ್ರಮಾಣದಿಂದ, ಅತ್ಯಂತ ಅಭೇದ ಉಳ್ಳಂಥಾವು. ಇನ್ನು ದೇವತೆಗಳ ಅಂಶಾಂಶಗಳಲ್ಲಿ, ಭೇದಾ ಭೇದವುಳ್ಳಂಥಾವು. ಭೇದಾಭೇದ ಲಕ್ಷಣ ಎಂಥದು ಎಂದರೆ, ಕೆಲವು ಪಕ್ಷದಲ್ಲಿ ಭೇದ ಉಳ್ಳಂಥಾವುಕೆಲವು ಪಕ್ಷದಲ್ಲಿ ಅಭೇದವುಳ್ಳಂಥವು. ಭೇದಾಭೇದ ಲಕ್ಷಣ ಎಂಥದು ಎಂದರೆ, ದೇವತೆಗಳು ಸಾಂಶರು. ಪರಮಾತ್ಮನ ಅನುಗ್ರಹದಿಂದ ಬಂದು ಅಂಶಿಯಿಂದ ಅನಂತಾಂಶಗಳು ಗ್ರಹಣ ಮಾಡೋದಕ್ಕೆ ಸಮರ್ಥರು.

ಬೇರೆಯವಾದ : ಪ್ರಾರಬ್ಧಕರ್ಮದಶಿಯಿಂದ ಭೂಮಿಯಲ್ಲಿ ಅವತಾರ ಮಾಡಿದಂಥ ಕಾಲದಲ್ಲಿ, ಭೂ ಸಂಬಂಧದಿಂದ, ಭೂ ಸಂಬಂಧೀಯ ವಾದ ಜನ ಸಂಸರ್ಗದಿಂದ, ಮನುಷ್ಯಾನ್ನ ದಶಿಯಿಂದ, ಕಿಂಚಿತು ದುಃಖಾದಿಗಳು

ಐದುತಾರಲ್ಲ : ಇದು ಬಂದು ಅಂಶಿಗೆ (ಮೂಲಕ್ಕೆ) ಕೂಡೋದಿಲ್ಲ. ತನ್ನಿಮಿತ್ಯ ದಿಂದ ಭೇದ. ಪ್ರಾರಬ್ಧಕರ್ಮ ಭೋಗಾ ನಂತರದಲ್ಲಿ ಐಕ್ಯ ಐದೋಣದರಿಂದ (ತಮ್ಮ ಮೂಲ ರೂಪ ಅಂಶಿಯಲ್ಲಿ ಕೂಡುವದರಿಂದ) ಅಭೇದ ಪ್ರಾಪ್ತವಾದಿತು. ಈ ಮೂರು ಪ್ರಕಾರವಾದ ದೋಷಗಳು ಇರೋಣದರಿಂದ ಅರ್ಜುನ ಇದ್ದ ಸ್ಥಳದಲ್ಲಿ ಜಯಾದಿಗಳು ಕೂಡೋದಿಲ್ಲ. ಆದ ಪ್ರಯುಕ್ತ ಸಂಜಯನ ವಾಕ್ಯಕ್ಕೆ ಅಪ್ರಯೋಜಕತ್ವ ಬಂತಲ್ಲಾ ಯಂತ ಶಂಕಾ, ಬಂದರೆ ಬರೋದಿಲ್ಲ ಯಂತ ಸಿದ್ಧಾಂತ ಮಾಡುತ್ತಾರೆ.

ಸಂಜಯ ಸ್ವರೂಪದಿಂದ ಉತ್ತಮನಾದವ, ಎರಡನೇದು ಸಾಕ್ಷಾತ್ ವೇದವ್ಯಾಸ ದೇವರಿಂದ ವರ ಸಂಪಾದನ ಮಾಡಿದಂಥಾತ. ಏನು ವರ ಎಂದರೆ, ದೃಷ್ಟವಾದಂಥಾವು ಅದೃಷ್ಟವಾದಂಥಾವು ಕೂಡಾ, ನಿನಗ ಜ್ಞಾನ ವಾಗಲಿ ಎಂತ ವರ ಕೊಟ್ಟ ಪ್ರಯುಕ್ತ, ಸಂಜಯನ ವಾಕ್ಯಕ್ಕೆ ಅಪ್ರಮಾಣ್ಯ ಒಡಂಬಟ್ಟ ಪಕ್ಷದಲ್ಲಿ, ವೇದವ್ಯಾಸರ ವರಕ್ಕ ಅಪ್ರ ಯೋಜಕತ್ವ ಬರತದೆ. ಆದ ಪ್ರಯುಕ್ತ, ಸಂಜಯನ ವಾಕ್ಯ ಪ್ರಮಾಣ ತ್ವೇನ ಅಂಗೀಕಾರ ಮಾಡಬೇಕು ಈ ವಿಷಯದಲ್ಲಿ ಇನ್ನೂ ದೃಢ ಮಾಡತಾರೆ, ವೇದವ್ಯಾಸರ ವಾಕ್ಯದಿಂದ ಬಲೀಯ ಮಾಡುತ್ತಾರೆ. ಅದು ಹ್ಯಾಂಗೆಂದರೆ :

## ಭಾರತಾರ್ಥ ದಾರು ಬಲ್ಲವರು, ಬಲ್ಲವರಲ್ಲಿ ಭೇದ

ಭಾರತಾರ್ಥ ದಾರು ಬಲ್ಲವರು ಎಂದರೆ, "ಅಹಂ ವೇದ್ಮಿ ಶುಕೋವೇತ್ತಿ ಸಂಜಯೋವೇತ್ತಿ ವಾನವಾ" ಇದರ ಅರ್ಥ ವೇದವ್ಯಾಸ ದೇವರು ಹೇಳಿದ್ದೇ ನೆಂದರೆ, ಭಾರತಾರ್ಥ ನಾನು ಬಲ್ಲೆ, ಶುಕ ಬಲ್ಲ, ಸಂಜಯನು ಬಲ್ಲ. ಈ ಮೂರು ಮಂದಿ ಬಲ್ಲವರು ಎಂತ ಹೇಳೋಣದರಿಂದ, ಸಾಮ್ಯ ಬಂತಲ್ಲಾ ಯಂತ ಶಂಕಾ ಬಂದರೆ, ದೃಷ್ಟಾಂತದಿಂದ ವೇದವ್ಯಾಸದೇವರಲ್ಲಿ ಉತ್ತಮತ್ವ ಸ್ಥಾಪನೆ ಮಾಡತಾರೆ. ಅದು ಹ್ಯಾಗಂದರೆ, ಘಟ ನಿರ್ಮಾತೃಕ ಕುಲಾಲನು, ಘಟ ಜ್ಞಾನ ವುಳ್ಳವನು ಎಂತ ಕರೆಸುತ್ತಾನೆ. ಘಟ ನಿರ್ಮಾತೃಕನ ಕ್ರಿಯಾ ನೋಡಿದಂಥವನು ಘಟ ಜ್ಞಾನವುಳ್ಳವನು ಎಂತ ಕರೆಸುತ್ತಾನೆ. ಈ ಉಭಯ ರೂಪದಿಂದ ಕೇಳಿ ದಂಥಾವನು ಕೂಡಾ ಘಟಜ್ಞಾನವುಳ್ಳವ ಎಂತ ಕರೆಸುತ್ತಾನೆ. ಈ ಅರ್ಥದಿಂದ ವೇದವ್ಯಾಸದೇವರಲ್ಲಿ ಉತ್ತಮತ್ವ ಸ್ಥಾಪನವಾಯಿತು. ಸಂಜಯ ಸ್ವರೂಪದಿಂದ ಅವರ ನಾದ ಕಾಲಕ್ಕೂನೂ, ವೇದವ್ಯಾಸದೇವರ ಪ್ರಸಾದದಿಂದ, ಭಾರತಾರ್ಥ ಬಲ್ಲವ ಎಂತ ಕರಸುತ್ತಾನೆ. "ವೇತ್ತಿವಾನವಾ" ತಿಳಿಯತಾನೋ ತಿಳಿ

ಯೋದಿಲ್ಲೋ ಯಂತ ಅರ್ಥ ಮಾಡಬಾರದು. ಯಾಕ ಮಾಡಬಾರದು ಎಂದರೆ, ತಿಳಿದಂಥಾದ್ದು ನಿದರ್ಶನಕ್ಕೆ ಸಿದ್ಧವಾಗಿ ಅದೆ. ಉತ್ತಮರ ಜ್ಞಾನಾನಂದಾದಿ ಗುಣಗಳು ನೀಚರಿಗೆ ಜ್ಞಾನವಾಗೋದಿಲ್ಲ. ಹೀಗಿರಲಿಕ್ಕಾಗಿ ಅರ್ಜುನ ದೊಡ್ಡ ದೇವತಿ. ಅರ್ಜುನನಿಗೆ ನೋಡಲಿಕ್ಕ ಯೋಗ್ಯವಾದ ಜ್ಞಾನೋಪದೇಶ ಶ್ರೀಕೃಷ್ಣ ಮಾಡಿದಂಥಾದ್ದು.

ಉತ್ತಮರ ಜ್ಞಾನಾನಂದಾದಿ ನೀಚರಿಗೆ ತಿಳಿಯೋದಕ್ಕೆ ಯೋಗ್ಯವಾಗದೇ ಇದ್ದ ಕಾಲಕ್ಕೂ, ವೇದವ್ಯಾಸ ದೇವರ ಪ್ರಸಾದದಿಂದ ತಿಳಿಯೋವಂಥಾವನಾಗಿ ಧೃತರಾಷ್ಟ್ರಗೆ ಉಪದೇಶ ಮಾಡದ್ದು ಪ್ರತ್ಯಕ್ಷ ಕಂಡು ಬಂದ ಪ್ರಯುಕ್ತವಾಗಿ "ವೇತ್ತಿವಾನವಾ" ಯಂಬೋದು ಕೂಡುವದಿಲ್ಲ. "ವೇತ್ತಿ" ಎಂಬೋ ಅರ್ಥನೇ ಸಿದ್ಧ. "ವಾನವಾ" ಎಂಬೋ ಪದಕ್ಕೆ ದಾವ ಅರ್ಥ ಎಂದರೆ "ವಾನವಾ ದೀರ್ಘದರ್ಶಿತಾ" ಎಂಬೋ ವಾಕ್ಯದಿಂದ "ವೇತ್ತಿ" ಎಂತನೇ ಸಿದ್ಧ. ಹೀಗಿದ್ದ ಪ್ರಯುಕ್ತ : "ತತ್ರಶ್ರೀರ್ವಿಜಯೋ ಭೂತಿ" ಎಂಬೋ ಸಂಜಯನ ವಾಕ್ಯದಿಂದ, ಅರ್ಜುನ ಇದ್ದಲ್ಲಿನೂ ಕೂಡಾ ಜಯಾದಿಗಳು ಸಿದ್ಧವಾದಂಥಾವು. ಇದಕ್ಕ ಅರ್ಥ ಅಂಗೀಕಾರ ಮಾಡಿದ ಪಕ್ಷದಲ್ಲಿ ಪೂರ್ವೋಕ್ತವಾದ ಜೀವ ಧರ್ಮ ಪ್ರವೃತ್ತಿಗೆ ಬಾಧಾ ಬರತದಲ್ಲಾ ಯಂತ ಶಂಕಾ ಬಂದರೆ ಎರಡಕ್ಕೂನೂ ಪ್ರಮಾಣ್ಯತ್ವೇನ.

## ಜೀವ ಧರ್ಮ ಪ್ರವೃತ್ತಿ ಲಕ್ಷಣ ಹೇಳುತ್ತದೆ

ಜೀವ ಧರ್ಮ ಪ್ರವೃತ್ತಿ ಎಂಥದು ಎಂದರೆ, ಅನಾದಿಯಿಂದ ಪ್ರಾಪ್ತವಾದ ತ್ರಿಗುಣಾತ್ಮಕವಾದ ಲಿಂಗದೇಹ ಸಂಬಂಧದಿಂದ, ಪ್ರಾರಬ್ಧ ಸಂಚಿತಾಗಮಗಳಿಂದ ಬದ್ಧರಾಗಿ, ಪರಮಾತ್ಮನ ಸಂದರುಶನದಿಂದ ಸಂಚಿತಾಗಮಗಳು ನಾಶವಾದ ಕಾಲಕ್ಕೂ, ತಚ್ಛಬ್ದ ವಾಚ್ಯನಾದ ಪರಮಾತ್ಮನು ಇಚ್ಛಾ ದೆಶೆಯಿಂದ, ಪ್ರಾರಬ್ಧ ಕರ್ಮ ಹೋಗೋದಿಲ್ಲ. "ಭೋಗಾದೇವ ಪರೀಕ್ಷಯಾ" ಎಂಬೋ ಪ್ರಮಾಣ ದಶಿಯಿಂದ, ಉತ್ತಮರಾದ ದೇವತಿಗಳಾದ ಕಾಲಕ್ಕೂನೂ, ಭೂಮಿಯಲ್ಲಿ ಹುಟ್ಟಿ, ಕರ್ಮಾನುಭವ ಮಾಡಿ ಕೃತಕೃತ್ಯರಾಗತಾರೆ. ಈ ಅರ್ಥದಿಂದ ಭಾಗವತ ದಲ್ಲಿ ಶುಕಾಚಾರ್ಯರಿಂದ ಹೇಳಲ್ಪಟ್ಟಿದೆ. ಇದಕ್ಕ ಪ್ರಮಾಣ ॥

" ಯತ್ರ ಧರ್ಮ ಸುತೋ ರಾಜಾ ಗದಾ ಪಾಣೀ ವೃಕೋದರಃ
ಕೃಷ್ಣೋಸ್ತಿ ಗಾಂಡೀವಂ ಚಾಪಂ ಸುಹೃತ ಕೃಷ್ಣ ತತೋಪಿಪತ್ತ ೧"

ವರ್ಧತೇ ನೋಕ ನೀಯಾ" ಎಂತ ಶ್ರುತಿ ಇದ್ದ ಕಾಲಕ್ಕೂ, ಈ ಭೂಮಿಯಲ್ಲಿ ಕರ್ಮದಿಂದ ಅಭಿವೃದ್ಧಿ, ಕ್ಷೀಣವುಳ್ಳವನೋಪಾದೆಲಿ, ಕರ್ಮ ಮಾಡೋ ಅಂಥ ಶ್ರೀಕೃಷ್ಣ ಮಾರ್ಗಾನುಸರಿಸಿ "ಮಮ ವರ್ತ್ಮಾನುವರ್ತಂತೇ ಮಾನುಷಾಃ ಪಾರ್ಥ ಸರ್ವಶಃ" ಎಂಬೋ ಪ್ರಮಾಣದಿಂದ ನಮಗೆ ಇದು ಮುಖ್ಯ ಧರ್ಮಾಯೆಂತ ತಿಳಿದೇವೆ. ಭೀಮಸೇನ ದೇವರು, ದುರ್ಯೋಧನನ ಪಾಪ ಪೂರ್ತಿ ಆಗಬೇಕಾಗಿ ತಾವೇ ದುರ್ಯೋಧನನಿಗೆ ಪ್ರೇರಿಸಿ ಅವನಿಂದ ಅಪಚಾರ ಮಾಡಿಸಿಕೊಂಡು ಅವನಿಂದ ಕ್ರೀಡಾ ಮಾಡಿದರು. ಇದು ಒಂದು ಸಾಕ್ಷಾತ್ ಶ್ರೀಕೃಷ್ಣನ ಪರಮ ಪ್ರೀತಿಯೆಂದು ಸರ್ವದಾ ಮನಸ್ಸಿನ ಆನಂದದಿಂದ ಕರ್ಮ ತೋರಿಸಿದರು.

ಈ ಪ್ರಕಾರಗಳಿಗೆ ಅವನಿಂದ ಮಾಡಲ್ಪಟ್ಟ ಕೃತ್ಯಗಳಿಂದ ಮನಸ್ಸಿಗೆ ವಿಕಾರ ಇಲ್ಲದೇ ಇದ್ದ ಪ್ರಯುಕ್ತ, ಇವರು ಸರ್ವದಾ ಜಯವುಳ್ಳವರು, ಎಂತ ಕರೆಸುತ್ತಾರೆ, ಇದರೊಳಗೆ ಭೀಮಸೇನ ದೇವರು "ಅತಿರೋಹಿತ ಜ್ಞಾನಿ" ಯಾದ ಪ್ರಯುಕ್ತ ಸರ್ವದಾ ಜಯ ಉಳ್ಳವರು.

## ಅರ್ಜುನ ಅಪಜಯವುಳ್ಳವ ಎಂಬೊ ಶಂಕಾ ನಿವಾರಣ

ಆಗಲಿ ಅರ್ಜುನಗ ಮನುಷ್ಯ ದೇಹದಿಂದ ಅಜ್ಞಾನವುಳ್ಳವನಾಗಿ ಅಪಜಯ ವುಳ್ಳವ ಯಾಕೆ ಆಗಬಾರದು ? ಎಂದರೆ ಸ್ವರೂಪದಿಂದ ಉತ್ತಮತ್ವ ಇದ್ದ ಪ್ರಯುಕ್ತ, ಉತ್ತಮತ್ವ ಲಕ್ಷಣವೇನು ಎಂದರೆ, ಅಹಂಕಾರ ಪ್ರಾಣಾದ್ಯಪೇಕ್ಷಯಾ ಸತ್ವಗುಣಾಧಿಕ್ಯ ರಜತಮೋ ಗುಣ ನ್ಯೂನ ಇದ್ದ ಪ್ರಯುಕ್ತ ಸ್ವರೂಪದಿಂದ ಉತ್ತಮಾ ಎಂತ ಕರೆಸುತ್ತಾನೆ. ಭೂಮಿಯಲ್ಲಿ ಅವತಾರ ಮಾಡಿದ ಕಾಲಕ್ಕೂ ಸ್ವರೂಪದಿಂದ ಉತ್ತಮ ಇರೋಣದರಿಂದ ಭೂಗುಣ ಬಂದು ಎಷ್ಟು ಪ್ರತಿಬಂಧಕವಾದೀತು ? ಸ್ವರೂಪಿ ಅಧಮತ್ವ ಇದ್ದಾಂಗೆಲ್ಲ ಭೂ ಮನುಷ್ಯ ಸಂಸರ್ಗ ಮನುಷ್ಯಾನ್ನದಿಂದ ಜ್ಞಾನ ತಿರೋಭಾವ ಮಾಡತದೆ ಅಷ್ಟೇ ಹೊರ್ತು ವಿಶೇಷ ಜ್ಞಾನ ಆಚ್ಛಾದನ ಮಾಡೋ ಶಕ್ತಿ ಇಲ್ಲ. ಕಿಂಚಿತು ಜ್ಞಾನ ಕಡಿಮಿ ಆದ ಕಾಲಕ್ಕೂ ಅದು ಸರ್ವಕಾಲೀನವಲ್ಲ. ಜೀವಿತನಾಗುವಂಥ ಪುರುಷನಿಗೆ ರೋಗದಿಂದ ಕಿಂಚಿತು ವಿಸ್ಮರಣಿವುಳ್ಳವನಾಗತಾನೆ. ಅದು ಬಂದು. ಸರ್ವಕಾಲೀನವಲ್ಲ ಅದು ಹ್ಯಾಗೋಹಾಗೆ ಮಾನುಷ್ಯ ಭೂಮಿ ಯಿಂದ ಅರ್ಜುನನ ಜ್ಞಾನಾ ಎಷ್ಟು ತಿರೋಭಾವ ಎಂದರೆ, ದೇವೇಂದ್ರ ತನ್ನ ಅಭಿಮಾನಿವುಳ್ಳಂಥಾ ರಜಸತ್ವ ಬ್ರಹ್ಮಾಂಡದಲ್ಲಿ ಎಲ್ಲಿ ಪರಿಯಂತರ ವ್ಯಾಪಿಸಿ

ಅದೋ ಅಲ್ಲಿ ಪರಿಯಂತರವಾದ ಭಗವದ್ರೂಪಗಳು ನೋಡುತ್ತಾರೆ. ಆಜೀವರು ಗಳಲ್ಲಿ ವ್ಯಾಪಾರ ಮನಸ್ಸಿನಲ್ಲಿ ನಿಂತು ಮಾಡಿಸುತ್ತಾನೆ. ಅರ್ಜುನನಾದ ಕಾಲ ದಲ್ಲಿ ಅಲ್ಲಿ ಪರಿಯಂತರ ಆ ವಸ್ತುಗಳಲ್ಲಿ ಇದ್ದಂಥ ಪರಮಾತ್ಮನ್ನ ಪ್ರತ್ಯಕ್ಷ ನೋಡಿದರಲೇ ಅಸ್ಪಷ್ಟವಾದ ಜ್ಞಾನವುಳ್ಳವನಾಗಿ, ಅನುಮಾನದಿಂದ ಆಗಮ ದಿಂದ ತನ್ನ ಬಿಂಬನಲ್ಲಿ ಐಕ್ಯ ಚಿಂತನೆ ಮಾಡೋ ಜ್ಞಾನವುಳ್ಳವನಾಗಿ ಇರುತಾನೆ. ಬಹುವಸ್ತುಗಳಲ್ಲಿ ಪ್ರತ್ಯಕ್ಷ ನೋಡಿದ ಕಾಲಕ್ಕೂ ಸ್ಪಷ್ಟತ್ವ ಭೇದವೇ ಹೊರತು ನೋಡೋದಿಲ್ಲಾ ಯಂತ ಕೂಡೋದಿಲ್ಲ. ಆನಿಮಿತ್ಯದಿಂದ ಸಾಕ್ಷಾತ್ ಪರದೇವತೆ ಪೂರ್ಣಾನುಗ್ರಹ ಮಾಡಿ ದಿವ್ಯ ಚಕ್ಷುಸು ಕೊಟ್ಟು, ದೇವೇಂದ್ರಗ ಯೋಗ್ಯವಾದ ವಿಶ್ವರೂಪ ತೋರಿಸಿದ. ಆದರೂ ಮನುಷ್ಯ ದೇಹದಿಂದ ಸರ್ವಕಾಲ ನೋಡಲಾರೆ ಮತ್ತು ಚತುರ್ಭುಜದಿಂದ ಕಾಣಿಸಿಕೋ ಯಂತ ಪ್ರಾರ್ಥನಾ ಮಾಡಿದ ಮನುಷ್ಯ ದೇಹದಿಂದ ವಿಶ್ವರೂಪ ಸಂದರ್ಶನಕ್ಕ ಯೋಗ್ಯನಾದರೂ, ಸರ್ವ ಕಾಲಕ್ಕೆ ನೋಡುವದಕ್ಕೆ ಸಮರ್ಥನಾಗಲಿಲ್ಲ, ಯಂತೇ ಹೊರ್ತು ಸಂಪೂರ್ಣ ಜ್ಞಾನಾನಂದ ಹ್ರಾಸವಾಗೋದಿಲ್ಲ. ಅಭಿಮನ್ಯು ವಿಯೋಗ ದಿಂದ ಜನಿತವಾದ ದುಃಖ ದೇವೇಂದ್ರಗ ಇಲ್ಲ. ಅರ್ಜುನಗವುಂಟಾಗಿತ್ತು. ಆದರೂ ಅದು ಭೂ ಸಂಬಂಧದಿಂದ ಪ್ರಾಪ್ತವಾದಂಥಾದ್ದು. ಆದರೂ ಜೀವಿತ ನಾಗುವಂಥಾ ಪುರುಷಗ ವ್ಯಾಧಿ ಇದ್ದಲ್ಲಿ ವಿಸ್ಮರಣಿ ಹ್ಯಾಗೆ ಆಗತದೋ ಹಾಗೆ ತಿಳಿಯಬೇಕು. ಅದು ಆದರೂ ದೇವತೆಗಳಿಗೇವೆ ಲೇಪವಿಲ್ಲ. ಏನು ಕಾರಣ ವೆಂದರೆ ರುದ್ರದೇವರು ಶ್ರೀರಾಮಚಂದ್ರನ್ನ ಯುದ್ಧಕ್ಕೆ ಕರೆದು ಜಡಭೂತನಾದ. ಪಾರಿಜಾತ ವೃಕ್ಷ ವ್ಯಾಜದಿಂದ, ದೇವೇಂದ್ರ ಶ್ರೀಕೃಷ್ಣನ ಸಂಗಡ ಯುದ್ಧ ಮಾಡಿದಂಥಾವೆಲ್ಲ ತಕ್ಷಣಕ್ಕೆ ಕಲಿ ಆವೇಶ ನಿವೃತ್ತಿ ನಂತರ ಇದು ಇಂದ್ರ ನಿಯಾಮಕನಾದ ಪರಮಾತ್ಮನಿಂದ ಮಾಡಿಸಲ್ಪಟ್ಟಿತು ಎಂಬೋ ಜ್ಞಾನದಿಂದ ಹೃಷಿಕೇಶ ನಾಮಕ ಪರಮಾತ್ಮಗ ಸಮರ್ಪಣಿ ಮಾಡೋಣದರಿಂದ, ನಿರ್ದುಷ್ಟ ವಾಗಿ ನಿರ್ಲಿಪ್ತರಾಗತಾರೆ ಹೊರ್ತು ಮನುಷ್ಯನೋಪಾದೇಲಿ ಲಿಪ್ತರಿಲ್ಲ. ಆದ್ದರಿಂದ ಪರಮಾತ್ಮನ ಅತಿಶಯ ಸ್ವತಂತ್ರವನ್ನು ಪ್ರಶಂಸನಮಾಡಿ ಆನಂದವುಳ್ಳವರಾದ ಪ್ರಯುಕ್ತ ಸರ್ವದಾ ಜ್ಞಾನಾನಂದಾದಿವುಳ್ಳವರು ಎಂತ ಕರಸುತ್ತಾರೆ.

ಅರ್ಜುನಗೆ ಮನುಷ್ಯ ಭೂಮಿಯಿಂದ ಕಿಂಚಿತು ಅಜ್ಞಾನ ಬಂದರೂ ಅದೂನೂ ವಿಶೇಷ ಸಾಧನಕ್ಕೆ ಕಾರಣವಾಯಿತು. ಪುತ್ರ ಶೋಕದಿಂದ ಶ್ವಾಸ ಬಿಟ್ಟಂಥಾ ಕಾಲದಲ್ಲಿ ನಿಯಾಮಕನಾದ ಶ್ರೀಕೃಷ್ಣ ತಿಳಿದು, ಇಂಥಾ ಅಜ್ಞಾನ ಯಾಕ ಬಂತು ಎಂತ ಅಣು ಗೀತಾ ಮತ್ತು ಉಪದೇಶ ಮಾಡಿದ. ಆದ್ದರಿಂದ

ಸಾಧನಕ್ಕೆ ಕಾರಣವಾದಿತು. ತಸ್ಮಾತ್ ದೇವತೆಗಳಿಗೆ ಮನುಷ್ಯ ದೇಹ ಬಂದ ಕಾಲಕ್ಕೂ ಸಂಪೂರ್ಣ ಜ್ಞಾನಾನಂದ ಹ್ರಾಸವಾಗೋದಿಲ್ಲ. ಅರ್ಜುನ ಮನುಷ್ಯ ದೇಹ ಐದಿದ ಕಾಲಕ್ಕೂ ಸ್ವರೂಪದಿಂದ ದೊಡ್ಡವನಾದ ಪ್ರಯುಕ್ತ ದೇವೇಂದ್ರನ ಅರ್ಧಾಸನದಲ್ಲಿ ಕುಳಿತು, ಸಮಸ್ತ ದೇವತೆಗಳಿಂದ ಮಾನ ಮಾಡಿಸಿಕೊಂಡ ಮನುಷ್ಯ ದೇಹಾಯೆಂತ ದೇವತೆಗಳು ವಂದನೆ ಮಾಡದೇ ಬಿಡಲಿಲ್ಲ. ದೇವತೆಗಳಿಂದ ವಂದನೀಯನಾದಂಥ ಅರ್ಜುನನ ದೇಹಕ್ಕೆ ನ(ತ)ನ್ನಿಂದ ರಾಜ್ಯ ಭ್ರಷ್ಟನಾದವಾ ಎಂತ ತಿಳಿದು ತಾವು ವಂದನೆ ಮಾಡದೇ ಬಿಡಲಿಲ್ಲ. ಭೂಭಾರ ನಿವಾರಣಾರ್ಥವಾಗಿ ಭಗವತ್ಕಾರ್ಯ ಸಾಧನಾರ್ಥ ವಾದಂಥವ, ಎಂತಲೇ ದೇವತೆಗಳು ತಿಳಿದರು. ಈ ಅರ್ಥದಿಂದ ಭೀಮಾರ್ಜುನರುಗಳಿಗೆ ದುರ್ಯೋಧನನಿಂದ ಮಾಡಲ್ಪಟ್ಟ ಅಪಚಾರಗಳು ಅಪಜಯಕ್ಕ ಕಾರಣವಾಗಲಿಲ್ಲ.

## ದೇವತೆಗಳಿಗೆ ಜಯ – ಅಪಜಯಗಳು ಯಾವುವು ಎಂದರೆ ಅದರ ವಿವರ

ಮುಖ್ಯತ ಜಯ – ಅಪಜಯಗಳು ದಾವುವು ಎಂದರೆ ದೇವತೆಗಳಿಗೆ ಸಾಕ್ಷಾತ್ ಪರಮಾತ್ಮನ ಅಪರೋಕ್ಷ ತಿರೋಭಾವವೇ ಅಪಜಯ. ಪರಮಾತ್ಮನ ಹೃದಯದಲ್ಲಿ ಉತ್ಕೃಷ್ಟ ಪ್ರಕಾಶದಿಂದ ಕಾಣಿಸಿಕೊಂಬುವಂಥಾದ್ದೆ ಮಂಗಳ ಮಧ್ಯದಲ್ಲಿ ಅಂತ್ಯದಲ್ಲಿ ಪರಮ ಮಂಗಳಾ ಯೆಂತ ಕರೆಸುತ್ತದೆ. ಆ ನಿಮಿತ್ತದಿಂದ "ನಿತ್ಯೋತ್ಸವೋ ಭವೇತ್ತೇಷಾಂ । ನಿತ್ಯ ಶ್ರೀರ್ನಿತ್ಯಶೋ ಜಯಃ ॥" ಎಂದು ಪ್ರಮಾಣ ಉಕ್ತವಾಯಿತು. ಅಪರೋಕ್ಷ ಕಾಲದಲ್ಲಿ ಶಿರಸ್ಸು ಖಂಡನವಾದ ಕಾಲಕ್ಕೂನೂ, ತತ್ ಸಂಬಂಧ ಕ್ಲೇಶವಿಲ್ಲದೇ ಆನಂದದಿಂದ ಇರುತಾರೆ. ಎಂಬೋ ಕಾಲಕ್ಕ ಅತಿರೋಹಿತವಾದ ಜ್ಞಾನವುಳ್ಳಂಥಾ ಭೀಮಾರ್ಜುನರುಗಳಿಗೆ, ದುರ್ಯೋಧನನಿಂದ ಮಾಡಲ್ಪಟ್ಟ ಅಪಚಾರಗಳು, ಲೋಕ ಪ್ರದರ್ಶನವೇ ಹೊರ್ತು ಅವರಿಗೆ ಕಿಂಚಿತುವಾದರೂ ಲೇಪವಿಲ್ಲ. ಭೀಮಸೇನ ದೇವರು ಸರ್ವಜ್ಞನಾದ ಪ್ರಯುಕ್ತ ದುರ್ಯೋಧನನ (ಅವನ) ಪಾಪ ಪೂರ್ತಿ ಅನಂತರದಲ್ಲಿ, ಅವನು ಸಂಹಾರಕ್ಕೆ ಯೋಗ್ಯನಾಗುತ್ತಾನೆ ಯೆಂತ ಪರಮಾತ್ಮನ ಸಂಕಲ್ಪ ತಿಳಿದು ಆಗಾಗ್ಗೆ ಅವನ ಇಂದ್ರಿಯಗಳಲ್ಲಿ ತಾನೇ ಪ್ರೇರಕನಾಗಿ ಇವರಿಗೆ ಅಪಚಾರಗಳು ಮಾಡಿದಾ ಯೆಂತ ಅವಗೆ ಪಾಪಾಭಿವೃದ್ಧಿ ಮಾಡಿ ಹಾನ (ಮಾಡಿಹನು). ಅದು ದಾವದು ಎಂದರೆ ದುರ್ಯೋಧನನಿಂದ ವಿಷ ಪ್ರಯೋಗ ರೂಪವಾದ ಕೃತ್ಯ ಜ್ಞಾನದಿಂದ ತಿಳಿಯೋವಂಥನಾಗಿ, ಆ ಭಕ್ಷ್ಯಗಳು ಧರ್ಮಾದಿ

ಗಳಿಗೆ ಹಾಕಕೊಡದೆ ತಾನೇ ಭೋಜನ ಮಾಡಿ ಅವನಿಂದ ನಿರ್ಮಿತವಾದ ಮೇಲುಪ್ಪರಿಗಿಯಲ್ಲಿ ಮಲಗಿದವನೋಪಾದಿಲಿ ಚೇಷ್ಟಾ ತೋರಿಸಿ, ಅವನಿಂದ ಬಿಡಲ್ಪಟ್ಟ ಸರ್ಪಗಳಿಂದ ಕಚ್ಚಿಸಿಕೊಂಡು ಸರ್ಪಗಳ ಹಲ್ಲು ಮುರಿದು, ಮನಸ್ಸಿನಲ್ಲಿ ತನ್ನ ಚೇಷ್ಟಾಕ್ಕೆ ನಗತಾ ಪಾಶಗಳಿಂದ ಬದ್ಧಿಸಿಕೊಂಡು, ಮಡುವಿನಲ್ಲಿ ಬಿದ್ದನು. ಇದು ಸಂತೋಷದಿಂದತೋರಿಸಿದಾ ಹೊರ್ತು ದುಃಖ ಲೇಶ ಮಾತ್ರವೂ ಆಗಲಿಲ್ಲ. ಚಿಕ್ಕವರು ಮಹಾ ವಿನೋದದಿಂದ ಕ್ರೀಡಾ ಮಾಡಿಧಾಂಗ, ತಾನು ಸೋತಾಂಥ (ಸೋತಂತೆ) ತೋರಿಸೋಣ. ಏವಮಾದಿಗಳಿಂದ ಬಲ್ಲವರಿಗೆ ಆನಂದವೇ ಹೊರ್ತು ಕ್ಲೇಶ ಹ್ಯಾಗೆ ಇಲ್ಲವೋ : ಅದರೋಪಾದೇಲಿ ಕ್ರೀಡಾ ತೋರಿಸಿ ಹಾನ (ತೋರಿಸಿಹನು). ಪ್ರತಿ ಅವತಾರದಲ್ಲಿ ಇಂಥಾದ್ದು ಮಾಡಿಹಾನೆ.

ಹನುಮಂತ ದೇವರು ಸೀತಾದೇವಿ ಶೋಧನ ನಿಮಿತ್ಯ ಲಂಕಾ ಪಟ್ಟಣ ವನ್ನು ಯ್ಯೆದಿ, ಅಜ್ಞಾನಿಯೋಪಾದೆಲಿ ಮನಿಮನಿಗಳಲ್ಲಿ ಹುಡುಕಿ, ಸೀತಾಕೃತಿ ಯನ್ನು ನೋಡಿ ಅಶೋಕವನ ಕಿತ್ತಿ, ಕಡಿಗೆ ಇಂದ್ರಜಿತನ ಬ್ರಹ್ಮಾಸ್ತ್ರದಿಂದ ಹಾಗೆಯೇ ಅವನಿಂದ ಕಟ್ಟಲ್ಪಟ್ಟ ನಾಗಪಾಶಗಳಿಂದ ಬಧ್ಧಿತನಾದ. ಯಾಕ ಬದ್ಧಿತನಾದಯೆಂದರೆ, ಅಸಮರ್ಥನಾಗಿ ಅಜ್ಞಾನಿಯಾಗಿ ಬದ್ಧಿತನಾಗಲಿಲ್ಲ. ಸರ್ವಸಮರ್ಥನಾದ ಮಹತ್ತರವಾದ ಜ್ಞಾನಾನಂದ ವರ್ಧಿತನಾದನು. ಅದು ಯಾಕೆ ಅಂದರೆ ರಾಮಚಂದ್ರ ದೇವರು ಲೋಕವಲ್ಲೀಲಾ ಕೈವಲ್ಯ ವಿಗ್ರಹ ನಾದಂಥವನಾಗಿ ರಾವಣನ ಕೃತ್ಯದಿಂದ ಅವನ ಪಾಪ ಪೂರ್ತಿ ಮಾಡಿ, ಅವನನ್ನ ಕೊಲ್ಲಿ ಭೂಭಾರನಿಳಿಸಬೇಕೆಂಬೊ ಇಚ್ಛಾ ಪ್ರವೃತ್ತಿ ಉಳ್ಳಂಥ ಪರಮಾತ್ಮನ ಅನುಸರಿಸಿ, ತಾನು ಹಾಗೆಯೇ ಪ್ರವರ್ತಿಸಬೇಕೆಂದು ರಾವಣನ್ನ ಕೊಲ್ಲಬೇಕೆಂದದಕ್ಕೆ, ಇಂದ್ರಜಿತುವಿನಿಂದ ಪರಾಜಿತತ್ವ ಸೂಚನೆ ಎಂತ ತಿಳಿದು ಅವನಿಂದ ಬದ್ಧಿತನಾದ ಎಂತ ತೋರಿಸಿದನಷ್ಟೇ ಹೊರ್ತು, ಅಸಾಮರ್ಥ್ಯ ದ್ಯೋತಕವಲ್ಲ. ಸರ್ವ ಸಮರ್ಥ ಅಂತ ಹ್ಯಾಗೆ ತಿಳಿಯಬೇಕು ಎಂದರೆ, ನಾಗ ಪಾಶದಿಂದ ಹ್ಯಾಗ ಬದ್ಧಿಸಿದನೋ ತಕ್ಷಣಕ್ಕೆ ಬ್ರಹ್ಮಾಸ್ತ್ರ ಉಪಸಂಹಾರ ಮಾಡಿದ. ಇದರಿಂದ ಮಹಾಬಲಿಷ್ಟತ್ವ ಸೂಚಿತವಾಯಿತು. ಇದರಿಂದ ರಾಮಚಂದ್ರ ದೇವರಿಗೆ ಪರಮ ಪ್ರೀತಿ ಆಯಿತು. ದುಷ್ಟರಾದ ರಾವಣ, ಇಂದ್ರಜಿತರಿಗೆ, ಇದೇ ಕ್ಲೇಶಕ್ಕೆ ಸೂಚನಯೆಂತ ತಿಳಿಯದೆ ಪರಮ ಆನಂದ ಬಟ್ಟರು. ಏವಮಾದಿ ಕ್ರೀಡಾ ಅತಿರೋಹಿತಿಯಾದ ಜ್ಞಾನಿಯಾದ ಹನುಮ ಭೀಮರಿಗೆ ಯತ್ಕಿಂಚಿತ್ ಕ್ಲೇಶಯಿಲ್ಲಾ ಎಂಬೋವಂಥಾ ಬಹು ಅರ್ಥಗಳಿಂದ ಸಮರ್ಥನ ಮಾಡುತಾರೆ.

ಮೂಲಕಲಿ ಎಂಥವ ಎಂದರೆ ತಮೋತಮ ಸಂಬಂಧೀಯವಾದ ಪಾಪಗಳ ದೇಹವುಳ್ಳಂಥವ. ಅದು ಹ್ಯಾಗೆ ಎಂದರೆ –

"ಬ್ರಹ್ಮಹತ್ಯ ಶಿರಸ್ಕಂಚ ಸ್ವರ್ಣಸ್ತೇಯ ಭುಜದ್ವಯಂ ।
ಸುರಾಪಾನ ಹೃದಾಯುಕ್ತಂ ಗುರುತಲ್ಪ ಕಟಿದ್ವಯಂ॥
ತತ್ಸಂಯೋಗ ಪದದ್ವಂದ್ವಂ ಮಂಗ ಪ್ರತ್ಯಂಗ ಪಾತಕಂ ।
ಉಪ ಪಾತಕರೋಮಾಣಾಂ ರಕ್ತಸ್ಮಶ್ರುವಿಲೋಚನಂ ।
ಖಡ್ಗ ಚರ್ಮಧರಂ ಕೃಷ್ಣಂ ಕುಕ್ಷೋಪಾಪಂ ವಿಚಿಂತಯೇತ್ ॥"

ಎಂಬ ಪ್ರಮಾಣದಿಂದ, ಇಂಥಾ ಪಾಪ ದೇಹವುಳ್ಳಂಥಾ ಕಲಿ ದೇಹದಲ್ಲಿ ಬ್ರಹ್ಮಾವರ್ಕವಾದ ನಿತ್ಯ ರಜತಮೋಗುಣ ಇದ್ದಾಗ್ಯೂ, ಗುಣಸಂಬಂಧೀಯವಾದ ಧರ್ಮಗಳು ಅವಗ ಆದ ಕಾಲಕ್ಕಾನೂ, ಇವುಗಳ ಲೇಪ ಅವಗ ಇಲ್ಲ. ಏನು ಕಾರಣ ಎಂದರೆ ಸ್ವರೂಪದಲ್ಲಿ ಪ್ರಬಲವಾದ ತಮೋಗುಣವು ಇದ್ದ ಪ್ರಯುಕ್ತ, ಅದರ ಪ್ರಾಬಲ್ಯದಿಂದ ಅಲ್ಪವಾದ ಗುಣಕಾರ್ಯದ ವ್ಯಾಪಾರವು ನಡೆಯದು. ಇದು ಮೂಲ ಸ್ವರೂಪದ ಸ್ಥಿತಿ.

## ಇನ್ನು ದುರ್ಯೋಧನನ ಸ್ಥಿತಿ ಹೇಳುತ್ತಾರೆ

ಆವ (ಅವನು) ತನ್ನ ಮೂಲರೂಪದಿಂದ ಬರಲ್ಪಟ್ಟ ದೇಹವುಳ್ಳವ. ಮ್ಯಾಲೆ ಸತ್ವರಜತಮೋಗುಣಾತ್ಮಕ ಭೂಮಿಯಿಂದ ಗುಣ ಧರ್ಮಗಳು ಅನುಭವ ಆದ ಕಾಲಕ್ಕೂ, ಪ್ರಸಿದ್ಧತ್ವೇನ, ಕರೆಸಬ(ವ)ಲ್ಲವು ಮ್ಯಾಲಿನ ಸತ್ವಾವರಣದಿಂದ ಪುಣ್ಯ ಕಾರ್ಯ ಆದ ಕಾಲಕ್ಕೂ, ಪಾಪಲೇಪ ಅವಗ ಆಗದು, ಅಯೋಗ್ಯರಾದ ಮೂಢ ರಾದ ಪ್ರಾಣಿಗಳಿಂದೇ ಪ್ರಶಂಸಿತನಾದನೇ ಹೊರ್ತು, ಇದರ ಸುಖ ಲೇಶ ಅವಗ ಆಗಲಿಲ್ಲ. ಮತ್ತೂ ಮತ್ತೂ ಅವನ ಸ್ವರೂಪಾನುಸರಿಸಿ ಪಾಪವೇ ಆಗಿ ದುಃಖವೇ ಆಗುತಿತ್ತು. ಅದು ಹ್ಯಾಗ ಯೆಂದರೆ, ಅವ ಧರ್ಮ ಮಾಡಿದ ಕಾಲಕ್ಕೂ ಮನಸ್ಸಿ ನಿಂದ ಹುಟ್ಟುತಾ ಇತ್ತು ಎಂದರೆ, ಪಾಂಡವರ ಕಿಂತಾ ನಾನು ವಿಶೇಷ ಧರ್ಮ ಮಾಡಿದವ ಯೆಂತ ಜನರು ನನ್ನ ಪ್ರಶಂಸನ ಮಾಡಲಿ ಯಂತಾ ಮಾಡಿ, ಅಹರ್ನಿಶಾದಲ್ಲಿ ಸರ್ವೇಂದ್ರಿಯಗಳಿಂದ ಪಾಂಡವರಿಗೆ ಹಾಗೇ ಶ್ರೀಕೃಷ್ಣಗೆ ಹ್ಯಾಗೆ ಅಪಜಯವಾದೀತು ಎಂಬೋದು ಸರ್ವಕಾಲ ಚಿಂತನೆ ಮಾಡುತ್ತ, ಪಾಂಡವರು ತಮ್ಮ ಯಶಸ್ಸಿನಿಂದ ಪೂರ್ಣರಾಗಿ ಬಹು ಜನರಿಂದ ಪ್ರಶಂಸಿತ ರಾಗಿದ್ದು ಕೇಳಿ ನೋಡಿ, ಕ್ಷಣವಾದರೂ ತಾನು ನೋಡುವಂಥಾ ಪ್ರಾಣಿಗಳಿಗೆ

ರಾಜೋಪಚಾರದಿಂದ ಕಾಣಿಸಿಕೊಂಡ ಕಾಲಕ್ಕೂ, ಮನಸ್ಸಿನ ಖೇದವನ್ನು ಮರಣ ಕಾಲದ ಪರಿಯಂತರ ಅರಲವಕಾಲ ಬಿಡದಲೇ, ಸಾರ್ವಕಾಲ ದುಃಖ ಪಟ್ಟು ಕಡಿಗೆ ಅದರಿಂದ ಮೃತನಾಗಿ ಪೂರ್ಣ ಸಾಧನವುಳ್ಳವನಾದ.

"ಧರ್ಮೋ ಭವತ್ಯಧರ್ಮೋಽಪಿ ಕೃತೌ ಭಕ್ತೈಸ್ತವಾಚ್ಯುತ ॥
ಪಾಪಂ ಭವತಿ ಧರ್ಮೋಽಪಿ ಯೋ ನ ಭಕ್ತೈಃ ಕೃತೋ ಹರೇ ॥"

ಈ ಪ್ರಮಾಣದಿಂದ ದುರಾತ್ಮರಾದವರು ಸತ್ವಗುಣ ಧರ್ಮ ಮಾಡಿದ ಕಾಲಕ್ಕೂ, ಅವರಿಗೆ ಸ್ವರೂಪಾನುಸರಿಸಿ ಪಾಪವೇ ಆಗತದೆ. ಆದ ಪ್ರಯುಕ್ತ ಸ್ವರೂಪ ಧರ್ಮವಿಕಾರವಾಗೋದಿಲ್ಲ. ಈ ಪ್ರಕಾರ ದುರ್ಯೋಧನಗೆ ಮ್ಯಾಲಿನ ಆವರ್ಕ ಸತ್ವಾದಿ ಗುಣಧರ್ಮ ಆದರೂನೂ ಹ್ಯಾಗ ಲೇಪವಾಗೋದಿಲ್ಲೋ ಭೀಮಾರ್ಜುನಾದಿಗಳಿಗೆ ದೇಹಸತ್ವ ಗುಣಾಧಿಕ್ಯ ರಜತಮೋಗುಣ ಅಲ್ಪತ್ವದಿಂದ ಸತ್ವ ಪ್ರಾಚುರ್ಯವೇ ಆಗಿ, ರಜತಮೋಗುಣ ಬಾಧಾ ಆಗದೆ ಇದ್ದ ಪ್ರಯುಕ್ತವಾಗಿ ಸರ್ವದಾ ಜಯವುಳ್ಳವರು ಯೆಂತ ಕರೆಸುತ್ತಾರೆ.

ಅದರೊಳಗೂ ಭೀಮಸೇನ ದೇವರ ದೇಹಸತ್ವ ಪ್ರಾಚುರ್ಯ ನೂರು ಸತ್ವಗುಣ, ಹತ್ತು ರಜೋಗುಣ, ಒಂದು ತಮೋಗುಣ, ರಜತಮೋಗುಣ ವ್ಯಾಪಾರ ನಡಿಯದು. ಕ್ರಮದಿಂದ ಅರ್ಜುನಾದಿಗಳಿಗೆ ಹೀಗೆ ತಿಳಿಯಬೇಕು. ಹಾಂಗ ದುರ್ಯೋಧನ ಪಾಂಡವರಿಂದ ಲಕ್ಷಣಗಳು ದುಷ್ಟತ್ವೇನ ಹಾಗೆ ಬಹು ಋಷಿ ಮುಖ ಶ್ರುತಶ್ವೇತ ತಿಳಿಯೋವಂಥವನಾಗಿದ್ದ ಪ್ರಯುಕ್ತ ಪಾಂಡವರಿಗೆ ಅಪಚಾರ ಮಾಡಿ, ದ್ಯೂತದಿಂದ ಹದಿಮೂರು ವರುಷ ವನವಾಸ ಅಜ್ಞಾತ ವಾಸಕ್ಕೆ ಕಳಿಸಿ ತಾನು ಸುಖದಿಂದ ಇರದೇ, ಮತ್ತೂ ಅವರ ಬಲಿಷ್ಠತ್ವವನ್ನು ಸ್ಮರಣೆ ಮಾಡುತ್ತಾ, ನಿರ್ಮೂಲ ಮಾಡಬೇಕೆಂಬೋ ಇಚ್ಛಾ (ಬುದ್ಧಿ)ಯಿಂದ ಹದಿಮೂರು ವರುಷಕ್ಕೆ ಕಡಿ ಸಮಾಪ್ತಿ ಬಂದ ಹಾಗೆಲ್ಲ ಪರಮ ದುಃಖದಿಂದ ಅಜ್ಞಾತವಾಸದಲ್ಲಿ ಅವರ ಸ್ವರೂಪಗಳನ್ನು ತಿಳಿದು, ಮತ್ತೂ ರಾಜ್ಯಭ್ರಷ್ಟರನ್ನು ಮಾಡಬೇಕೆಂಬೋ ಇಚ್ಛಾದಿಂದ, ಸರ್ವ ದೇಶದಲ್ಲಿ ಕೂಡಾ ದೂತರುಗಳನ್ನು ಕಳಿಸಿದಾ. ಅವರು ಬಂದು ದಾವ ದೇಶದಲ್ಲಾದರೂ ಜ್ಞಾತರಾಗಲಿಲ್ಲಾಯೆಂತ ದೂತರು ಬಂದು ಹೇಳಿದದಕ ಅವರಿಗೆ ಮತ್ತೂ ಆಜ್ಞಾ ಮಾಡಿದನಲ್ಲ. ಅವರ ಸ್ವರೂಪ ಧರ್ಮಗಳ ಪ್ರಾಚುರ್ಯದಿಂದ ಆದರೂ ನಿರ್ಧಾರ ಮಾಡಿಕೊಂಡು ಬರಬೇಕೆಂದು ಅವರಿಗೆ ಹೇಳಿದ.

ಸ್ವರೂಪ ಧರ್ಮಗಳು ದಾವವು ಎಂದರೆ, ಪಾಂಡವರು ಇದ್ದಲ್ಲಿ ಅನಾವೃಷ್ಟಿ ಆಗದೇ, ಸರ್ವದಾಪ್ರಾಣಿಗಳ ಇಚ್ಛಾನುಸರಿಸಿ ವೃಷ್ಟಿ ಆಗತಿರಬೇಕು ಎರಡನೇದು ಭೂಮಿ, ಧನ ಧಾನ್ಯಾದಿಗಳಿಂದ ಸಮೃದ್ಧಿಯಾಗಿರುತ್ತದೆ. ಮೂರನೇದು ಸಕಲ ಪ್ರಾಣಿಗಳು ರೋಗವಿಲ್ಲದೇ ಪರಸ್ಪರ ದ್ವೇಷ ಇಲ್ಲದೇ, ಪರಮ ಸಂತೋಷ ದಿಂದ ಜನರು ದಾವ ದೇಶದಲ್ಲಿ ಇರುತ್ತಾರೋ, ಆ ದೇಶದಲ್ಲಿ ಪಾಂಡವರು ಹಾರಯೆಂತ ತಿಳಿದು ಅತಿ ಜಾಗ್ರತಿ ಬರಬೇಕೆಂದು ದೂತರನ್ನು ಕಳಿಸುತಿರಲಿಕ್ಕಾಗಿ, ಅವರು ಅದೇ ಲಕ್ಷಣಗಳು ನೋಡಿ ವಿರಾಟರಾಯನ ದೇಶದಲ್ಲಿ ಇದೇ ಲಕ್ಷಣಗಳಿಂದ ಪ್ರಾಣಿಗಳು ಹಾರ ಎಂತ ಹೇಳೋಣದರಿಂದ, ಉತ್ತರ ದಕ್ಷಿಣ ಗೋಗ್ರಹಣಕ್ಕೆ ಉದ್ಯುಕ್ತನಾಗಿ ಹೋದ. ಅವರು ಅಧಮ ಪ್ರಾಣಿಗಳ ದೃಷ್ಟಿಗೆ ರಾಜ್ಯೈಶ್ವರ್ಯ ಭ್ರಷ್ಟತ್ವೇನ ದೃಶ್ಯವಾದ ಕಾಲಕ್ಕೂ, ಸ್ವರೂಪ ಲಕ್ಷಣಗಳು ಹೋಗಲಿಲ್ಲ. ತನ್ನಿಮಿತ್ಯವಾಗೇವೆ, ಭಾರತ ಮಂಗಳಾಚರಣೆಯಲ್ಲಿ ವಿಘ್ನ ಪರಿಹಾರಾರ್ಥವಾಗಿ ಮಂಗಳಾಚರಣೆ ಮಾಡತಾರೆ. ಏನಂತ ಎಂದರೆ –

"ಧರ್ಮೋ ವಿವರ್ಧತಿ ಯುಧಿಷ್ಟರ ಕೀರ್ತನೇನ ।
ಪಾಪಂ ಪ್ರಣಸ್ಯತಿ ವೃಕೋದರ ಕೀರ್ತನೇನ ।
ಶತ್ರೋರ್ವಿನಸ್ಯತಿ ಧನಂಜಯ ಕೀರ್ತನೇನ ।
ಮಾದ್ರೀಸುತೌ ಕಥಯತಾಂ ನ ಭವಂತಿರೋಗಾಃ ॥"

ಈ ಪ್ರಮಾಣದಿಂದ ಅವರನ್ನ ಸ್ಮರಣಿ ಮಾಡಲಿಕ್ಕಾಗಿ, ಅವರ ಸ್ವರೂಪಾನು ಸರಿಸಿದ ಧರ್ಮಗಳ ಸಮ್ಮೇಲನದಿಂದ, ಅವರು ಅದರ ಫಲಗಳನ್ನು ಪ್ರಾಣಿಗಳಿಗೆ ಕೊಡುವುದಕ್ಕೆ ಪರಮ ಸಮರ್ಥರಾಗತಾರ. ಇದಕ್ಕೇ ಲೋಕ ದೃಷ್ಟಾಂತ ಆಶ್ರೀತರಾದಂಥ ಪ್ರಾಣಿಗಳಿಗೆ ಈಪ್ಸಿತವಾದ ಐಶ್ವರ್ಯಗಳು ಕೊಡಲ್ಪಟ್ಟ ಸಾಮರ್ಥ್ಯ ವುಳ್ಳವನ ಅಭಾಗ್ಯರು ಯೆಂತ ದಾವ ಪುರುಷ ಅಂದಾನು. ಪ್ರತ್ಯಕ್ಷದಿಂದ, ಆಗಮದಿಂದ, ಅನುಮಾನದಿಂದ, ಪ್ರಶಂಸಿತರಾದ ಶ್ರೀಕೃಷ್ಣನ ಅನುಗ್ರಹಕ್ಕ ಮುಖ್ಯ ಪಾತ್ರರಾದ ಪಾಂಡವರಿಗೆ ಅಪಜಯಗಳು ಹ್ಯಾಗೆ ಕೂಡ್ಯಾವು. ಅದು ಯಾಕಯೆಂದರ, ಸಾಕ್ಷಾದ್ರಮಾದೇವಿಯಿಂದ ಸಾಕಲ್ಯೇನ ತಿಳಿಸಿಕೊಂಬೋದರ ಗೋಸ್ಕರ ಯೋಗ್ಯನಾಗದೇ ಇದ್ದಂಥ ಪರಮಾತ್ಮಾ ಇವರಿಗೆ ಜ್ಞಾನದಿಂದ ಮನಸ್ಸಿನಲ್ಲಿ ಹಾಗೆ ಪ್ರತ್ಯಕ್ಷದಿಂದ ದೃಷ್ಟತ್ವೇನ ಕ್ಷಣ ಅಗಲದೇ ಇದ್ದದರಿಂದ, ಇವರ ಭಾಗ್ಯೋದಯ ದಾವ ದೇವತಿಗಳಿಗೆ ಪ್ರಾಪ್ತವಾದೀತು. ತನ್ನಿಮಿತ್ಯವಾಗೇಯೆ, ಸಾಕ್ಷಾತ ಶ್ರೀಕೃಷ್ಣನ ವಾಕ್ಯವದಲ್ಲ –

ನ ವೇದ ಯಜ್ಞಾಧ್ಯಯನೈರ್ನದಾನೈಃ ।
ನಚ ಕ್ರಿಯಾಭಿಃ ನ ತಪೋಭಿರುಗ್ರೈಃ ॥

ಈ ಪ್ರಮಾಣದಿಂದ ಸಾಕ್ಷಾತ್ ಪರಮಾತ್ಮ ಅವರಲ್ಲಿ ಜ್ಞಾನ ಚಕ್ಷುಸ್ಸಿನಿಂದ, ಹಾಗೆ ಸಾಕ್ಷಾತ್ಕಾರದಿಂದ, ಈ ಪ್ರಕಾರದಿಂದ ರಾಜೈಶ್ವರ್ಯದಿಂದ ಇದ್ದರೂ, ಅಥವಾ ವನವಾಸ ಅಜ್ಞಾತವಾಸದಲ್ಲಿ ಇದ್ದರೂ, ಕ್ಷಣ ಮೀರದೇ ಇದ್ದ ತರುವಾಯದಲ್ಲಿ ಅವರಿಗೆ ಅಪಜಯ ಹ್ಯಾಗೆ ಕೂಡೀತು .

ಒಬ್ಬ ಪರಮಾತ್ಮ ಇದ್ದಲ್ಲಿ "ಕಿಮಲಭ್ಯಂ ಭಗವತಿ ಪ್ರಸನ್ನೇ ಶ್ರೀನಿಕೇತನೆ" ಸಕಲ ಸಂಪತ್ತು ಇರುತದೆ. 'ಪ್ರಸನ್ನೇ ಶ್ರೀನಿಕೇತನೆ' ಎಂಬೋ ವಾಕ್ಯದಿಂದ, ಅವರಿಗೆ ಅಲಭ್ಯವಾದಂಥಾದ್ದುದಾವದು ? ಸಕಲವೂ ಇದ್ದವರೇ ಅನಿಸಿ, ಅದರೊಳಗೆ ಸರ್ವಕಾಲೀನ ಅಪರೋಕ್ಷ ಉಳ್ಳಂಥಾ ಭೀಮಸೇನ ದೇವರಿಗೆ ಆವ ಕಾಲಕ್ಕೂ "ಶ್ವಪಚಾದಪಿ ಕಷ್ಟತ್ವಂ ಬ್ರಹ್ಮೇಶಾ ನಾದಯೋಸುರಾಃ ॥" ಎಂಬೋ ಪ್ರಮಾಣದಿಂದ ಹಾಗೆ, "ಯತ್ರ ಧರ್ಮ ಸುತೋ ರಾಜಾ ಗದಾ ಪಾಣಿರ್ವೃಕೋದರಃ । ಕೃಷ್ಣೋಸ್ತಿ ಗಾಂಢೀವಂಚಾಪಂ ಸೃಹೃತ್ತ ಕೃಷ್ಣ ತತೋ ಅವಿಪತ್ ॥" ಎಂಬೋ ಪ್ರಮಾಣಗಳಿಗೆ ಅಪ್ರಯೋಜಕತ್ವ ಬಂತಲ್ಲಾ ಯೆಂತ ಶಂಕಾ ಬಂದರೆ ಬರೋದಿಲ್ಲಯೆಂತ ಸಿದ್ಧಾಂತ ಮಾಡುತ್ತಾರೆ. ಯಾಕೆ ಎಂದರೆ, ಜೀವರುಗಳಿಗೆ ಪ್ರಾರಬ್ಧಕರ್ಮ ಬಲೀಯವಾದಂಥಾದ್ದು. ಅಂಥಾ ವಿಶೇಷ ಏನು ಎಂದರೆ ಸಾಕ್ಷಾತ್ಪರದೇವತಿ ಕರ್ಮಶಬ್ದ ವಾಚ್ಯನಾಗಿ, ಕರ್ಮರೂಪನಾಗಿ, ಕರ್ಮಕೆ ಬೀಜ ತಾನೇ ಆಗಿದ್ದ ಪ್ರಯುಕ್ತ, ಸತ್ಯಸಂಕಲ್ಪವುಳ್ಳ ಪರಮಾತ್ಮನ ಶಾಸನ ಅವ್ಯಾಹತವಾದ ಪ್ರಯುಕ್ತ, ಅದು ತಪ್ಪಿಸಿಕೊಳ್ಳಲಿಕ್ಕೆ ದಾರೂ ಸಮರ್ಥರಲ್ಲ. ಅನುಭವ ಮಾಡೇ ತೀರಿಸಿ ಮುಕ್ತರಾಗಬೇಕು. ಪರಮಾತ್ಮನ ಶಾಸನ ಮೀರೋ ಅಂಥ ಯತ್ನ ಮಾಡಿದವರು, ಪರದೇವತಿ ಅನುಗ್ರಹ ಎಂದಿಗೂ ಐದರು. ತನ್ನಿಮಿತ್ಯ ಯಾ(ದಾ)ವ ಮಹಾತ್ಮನ ಶಾಸನಕ್ಕೆ ಅನುಸರಿಸಿ ಪ್ರವರ್ತಿಸಬೇಕು. ಅದು ಹ್ಯಾಗ ಎಂದರೆ, ದೃಷ್ಟಾಂತದಿಂದ ತೋರಿಸುತ್ತಾರೆ.

ರಾಜನಾದವ ತನ್ನ ಇಚ್ಛಾದಿಂದ ಒಂದು ಪುರದ್ವಾರ ನಿರ್ಮಿಸಿ, ಇದರಿಂದೇ ಸರ್ವರು ಸಡೆದು ಸಂಚಾರ ಮಾಡಬೇಕಂತ ನಿರ್ಮಾಣ ಮಾಡಿದಂಥಾ ದ್ವಾರದಿಂದೇ ಗಮನ ಮಾಡಬೇಕು. ಅದು ಬಿಟ್ಟು, ರಾಜ ಶಾಸನ ಮೀರಿ, ಮಧ್ಯ ಇನ್ನೊಂದು ದ್ವಾರ ಮಾಡಿಕೊಂಡು ಹೋದರೆ, ರಾಜನಿಂದ ತತ್ಕಾಲಕ್ಕೆ ಶಿಕ್ಷಿತನಾಗುತ್ತಾನೆ. ಪ್ರತ್ಯೇಕ ದ್ವಾರ ಮಾಡಿಕೊಂಡು ಹೋಗಬೇಕಾದರೆ,

ರಾಜನಕಿಂತಾ ಅಧಿಕನಾದವನೇ ಹೋಗಬೇಕು ಹೊರ್ತು, ಆಜ್ಞಾಧಾರಿಯಾದ ವನಿಂದ ಎಂದಿಗೂ ಕೂಡೋದಿಲ್ಲ. ತನ್ನಿಮಿತ್ಯ ಜರಾಸಂಧನ ಸಂಹರಿಸಲಿಕ್ಕೆ ಹೋದ ಕಾಲಕ್ಕೆ ಶ್ರೀಕೃಷ್ಣ ಭೀಮಾರ್ಜುನರು ಪ್ರತ್ಯಂತರ ದ್ವಾರದಿಂದ ಹೋದರು.

ಈ ದೃಷ್ಟಾಂತದಿಂದ ಪರಮಾತ್ಮಾ ಮಾಡಿದಂಥಾ ಕ್ಲಪ್ತಹ್ರಾಸವಿಲ್ಲದೇ ಇದ್ದ ಪ್ರಯುಕ್ತ ಬ್ರಹ್ಮಾದಿ ದೇವತೆಗಳು, ಪ್ರಾರಭ್ಧಕರ್ಮ ಅನುಭವಮಾಡಿ ಶ್ವಪಚಾದಪಿ ಕಷ್ಟತ್ವವನ್ನು ಐದುತ್ತಾರೆ. ಸಾಕ್ಷಾತ್ ಶ್ರಿಕೃಷ್ಣ ಮಿತ್ರನಾಗಿ ಇದ್ದ ಕಾಲಕ್ಕೆ ಪಾಂಡವರಿಗೆ ವಿಪತ್ತು ಬರಲಿಲ್ಲಾ ಅಂತ ಉಕ್ತವಾಯಿತು.

ಬ್ರಹ್ಮಾದಿ ದೇವತೆಗಳವಳಗೆ 'ಶ್ವಪಚಾದಪಿ ಕಷ್ಟತ್ವವು' ಐದು ವಂಥಾವರು ಹಾರ. ಕಷ್ಟತ್ವವನ್ನು ಐದದಲೆ ಮೀರಲಿಕ್ಕೆ ದುಸ್ತರವಾದ ಶಾಸನವೆಂದು, ತಮ್ಮ ಮಹಾಜ್ಞಾನದಿಂದ ಪರಮಾತ್ಮನ ಸಂಕಲ್ಪ ತಿಳಿದು, ತಾವೇ ಪ್ರಾರಭ್ಧಕರ್ಮ ಪರಮಾತ್ಮನ ಪ್ರೀತ್ಯರ್ಥ ಗ್ರಹಣ ಮಾಡಿದವರಿಗೆ "ಶ್ವಪಚಾದಪಿ ಕಷ್ಟತ್ವ" ಇಲ್ಲದೆ ಪರಮ ಸೌಖ್ಯದಿಂದ ಅನುಭವಿಸಿ, ಪರಮಾತ್ಮಗೆ ಸಮರ್ಪಣೆ ಮಾಡೋಣ ರಿಂದ, ಪರಮಾತ್ಮನ ಅಧಿಕ ಅನುಗ್ರಹಕ್ಕೆ ಪಾತ್ರರಾಗುತ್ತಾರೆ. ಅದು ಹ್ಯಾಗ ಎಂದ ಪರಮಾತ್ಮನ ಪ್ರೀತ್ಯರ್ಥವಾಗಿ, ಹಾಗೆ "ಏಕಾ ದಶೇಂದ್ರಿಯಾಃ ಪಾಪಂ" ಏಕಾದಶೇಂದ್ರಿಯ ಜನಿತವಾದ ಪಾಪ ಪ್ರಾಯಶ್ಚಿತಾರ್ಥ, ಏಕಾದಶ ಶಬ್ದ ಪರಮಾತ್ಮನ ಪ್ರೀತ್ಯರ್ಥದಿಂದ, ಏಕಾದಶಿ ವ್ರತದಿಂದ ಸೌಖ್ಯಕ್ಕೆ ಕಾರಣೀ ವಾದ, ಅನ್ನ ಮೊದಲಾದ ವಸ್ತ್ರಾಭರಣ ಆ ಒಂದುದಿವಸ ಪರಿ ತ್ಯಾಗ ಉಪವಾಸದಿಂದ ಇದ್ದಂಥಾ ಪುರುಷರಿಗೆ, ಉಪವಾಸ ದುಃಖ ಪರಮಾತ್ಮನ ಪ್ರೀತ್ಯರ್ಥವಾಗಿ, ಸಮೀಚೀನವಾದ ಪುಣ್ಯ ಸಂಘಟ ದಯೆಂತ, ಆನಂದದಿಂದ ಮನಃಸಂಕೋಚವಿಲ್ಲದೇ ಸುಖಬಡತಾ ಲೇಶತಃ ಉಪವಾಸದಿಂದ ದುಃಖವಾಯಿತು ಅಂತ ತಿಳಿಯೋದಿಲ್ಲ.

ಈ ದೃಷ್ಟಾಂತದಿಂದ ದೇವತೆಗಳವೊಳಗೆ ಶ್ರೇಷ್ಠನಾದ ಭೀಮಸೇ ತನ್ನ ಪ್ರಾರಭ್ಧಕರ್ಮ ತಿಳಿದು, ಹಾಗೇಯೇ ಪರಮಾತ್ಮಗೆ ಭೂಭಾ ಮಾಡುವದಕ್ಕ ಪ್ರಥಮಾಂಗನಾದ ಪ್ರಯುಕ್ತ, ಎರಡೇನೇದು ಪ್ರಾರ್ಥನಾದಿಂದ ಬ್ರಹ್ಮಾದಿದೇವತೆಗಳು, ಕ್ಷೀರಸಮುದ್ರದಲ್ಲಿ ತಲ್ಪನಾದ ನಾರಾಯಣನನ್ನ ಪ್ರಾರ್ಥನ ಮಾಡಿದಂಥಾ ಕಾಲ ದೇವತಿಗಳಿಗೆ ಆಜ್ಞಾ ಮಾಡಿದ. ಏನು ಎಂತಂದರೆ ಭೂಭಾ ವಾಗಿ ಕೃಷ್ಣಾವತಾರ ಮಾಡತೇವು. ನೀವು ನಿಮ್ಮ ನಿ

ಭೂಮಿಯಲ್ಲಿ ಹುಟ್ಟಿರಿಯೆಂತ ಆಜ್ಞಾ ಮಾಡಿದ. ಪ್ರಯುಕ್ತ, ಪ್ರಾಣ, ಶೇಷ, ರುದೇಂದ್ರ ಮೊದಲಾದ ದೇವತೆಗಳು ತಮ್ಮ ತಮ್ಮ ಅಂಶದಿಂದ ಹುಟ್ಟಿದರು. ಅದರೊಳಗೆ ಸ್ವರೂಪದಿಂದ ಉತ್ತಮತ್ವ ಹ್ಯಾಗೆ ಇರುತದೋ, ಹಾಗೆ ಪರಮಾತ್ಮನ ಕಾರ್ಯಸಾಧನ ಮಾಡೋ ನಿಮಿತ್ಯ, ನಾವು ಹುಟ್ಟಿ ದವರು, ದಾವ ಶ್ರೀಕೃಷ್ಣಗೆ ಅನುಸರಿಸಿ ನಾವು ಇರಬೇಕು ಎಂಬು ವದು ಸ್ವರೂಪಾನುಸರಿಸಿಯೇ ತಿರೋಧಾನ ಐದದಲೇ ಇರುತದೆ. ಅದು ಹ್ಯಾಗೆಂದರ, ಭೀಮಸೇನ ದೇವರಿಗೆ ಈ ಜ್ಞಾನ ಯಕ್ತಿಂಚಿತ್ ಕಾಲವಾದರೂ ತಿರೋಭಾವವಿಲ್ಲ. ಆ ನಿಮಿತ್ಯ ಸರ್ವದಾ ಅಚ್ಛಿನ್ನ ಭಗವದ್ಭಕ್ತನಾದಾತಯೆಂತ ಕರಸುತ್ತಾನೆ. ಇನ್ನು ಅಶ್ವತ್ಥಾಮ, ಅರ್ಜುನ, ಧರ್ಮರಾಯನು ಕೂಡಾ ಸಹದೇವ ಮೊದಲಾದವರು, ಅವರ ಸ್ವರೂಪಾನುಸರಿಸಿ, ದಾರು ಸ್ವರೂಪದಲ್ಲಿ ಸತ್ವಗುಣಾಧಿಕಯಿದ್ದು, ರಜತಮೋ ಗುಣಗಳು ಸಂಕೋಚ ಇರುತ್ತವೆ. ಹ್ಯಾಗ ಮನುಷ್ಯ ಭೂಮಿ ಮಾನುಷ್ಯಾನ್ನ ಮಾನುಷ ಸಂಸರ್ಗದಿಂದ ಜ್ಞಾನತಿರೋಭಾವ ಐದಿ, ದುಷ್ಟನಾದ ಕಲಿಯಿಂದ ಪೂರ್ವೋಕ್ತ ವಾದ ಜ್ಞಾನ ಇಲ್ಲದೆ "ಶ್ವಪಚಾಪಪಿ ಕಷ್ಟತ್ವ" ಐದುತಾರೆ ಹೊರ್ತು, ಸ್ವರೂಪದಿಂದ ಉತ್ತಮರಾದವರಿಗೆ, ಕಿಂಚಿತ ಕಷ್ಟವೆನಿಸುವುದಿಲ್ಲ. ತನ್ನಿಮಿತ್ಯವಾಗೇವೆ "ಪ್ರಥಮೋಹನುಮನ್ನಾಮಂ" ಎಂತ ಉಕ್ತವಾಗಿದೆ. ಪ್ರಥಮಾವತಾರದಲ್ಲಿ ಭಗವತ್ಕಾರ್ಯ ಸಾಧನಾರ್ಥವಾಗಿ ಮಾಡಿದಂಥಾ ಭೀಮಸೇನ ದೇವರಿಗೆ ಅಪಜಯಾ ಎಂಬೋದು ಎಂದಿಗೂ ಕೂಡದು. ಹಾಗೆ ಅರ್ಜುನಗೆ ಕೂಡದು. ಭೀಮಸೇನಪೇಕ್ಷಯಾ ನೀಚನಾದರೂ, ರುದ್ರಾಪೇಕ್ಷಯಾ ಕಿಂಚಿತ ಸತ್ವಗುಣ ನ್ಯೂನತಾವುಳ್ಳವ. ಕಿಂಚಿತ ರಜತಮೋ ಗುಣಾಧಿಕ್ಯವುಳ್ಳವ. ಸರ್ವಕಾಲೀನ ಸತ್ವಗುಣ ಪ್ರಕೃತಿಯುಳ್ಳವ. ಕಿಂಚಿತ್ಕಾಲದಲ್ಲಿ ರಜತಮೋಗುಣ ವ್ಯಾಪಾರವುಳ್ಳವ ಎಂತ ಕರಸತಾನೆ. ಆದರೂ ಸತ್ವಗುಣಾಧಿಕ್ಯ ಬಂದು ರಜತಮೋಗುಣ ವ್ಯಾಪಾರ ಮಾಡಸೋದಿಲ್ಲ. ಪ್ರಕಾಶ ಬಂದು ಅಂಧಕಾರವನ್ನು ಹ್ಯಾಗೆ ತಿರಸ್ಕಾರ ಮಾಡುತದೊ ತದ್ವತ್ ಸತ್ವಗುಣ ರಜತಮೋಗುಣ ಕಾರ್ಯಲೋಪ ಮಾಡುತದೆ.

ಎರಡನೇದು ಅರ್ಜುನ, ನರಾವೇಶವುಳ್ಳವ, ಪ್ರಾಣದೇವರ ಆವೇಶ, ಸಾಕ್ಷಾತ್ ಶ್ರೀಕೃಷ್ಣನ ಸನ್ನಿಧಾನವುಳ್ಳವನಾದ ಪ್ರಯುಕ್ತ, ಕ್ವಚಿತ್ಕಾಲ ಕಿಂಚಿತ ಅಜ್ಞಾನ ಬಂದರೂ, ನೀಚ ದೇವತಾಪೇಕ್ಷೆಯಾ ಬಹಳವಾದ ಸತ್ವಗುಣ ಸ್ವರೂಪವುಳ್ಳವ ನಾದ ಪ್ರಯುಕ್ತ, ಜೀವಿತನಾಗುವಂಗೆ ವಾಯು ಬಂದೋಪಾದೇಲಿ, ಪ್ರಾಪ್ತವಾದ ತಮೋಗುಣ ವ್ಯಾಪಾರದಿಂದ ಮುಕ್ತನಾಗುತಾನೆ. ದುಃಖಿಯೆಂತ ಅನಿಸಿಕೊಳ್ಳನು.

ಸೂರ್ಯ ಚಂದ್ರಗಳಿಗೆ ಮೇಘಾಚ್ಛಾದನದಿಂದ, ಹಾಗೆ ರಾಹುನಿಂದ ಪ್ರಕಾಶವನ್ನು ಕಿಂಚಿತು ತಿರೋಭಾವ ಐದಿದರನ್ನೂ, ಸೂರ್ಯಗೆ "ಪ್ರಭಾಕರ, ದಿವಾಕರ, ದ್ಯುತಿಮಾನ್" ಎಂಬೋ ನಾಮ ಹೋಗೋದಿಲ್ಲ. ತದ್ವತ್ ದೇವೇಂದ್ರ ಎಂಥವ ಎಂದರೆ, "ಐಶ್ವರ್ಯಾತ್ಮಕ"ನಾದವ. ಐಶ್ವರ್ಯ ಮಿಕ್ಕಾದ ದೇವತೆಗಳಿಗೆ ನಿಯಾಮಕನಾದ ಪರಮಾತ್ಮನಿಂದ ಕೊಟ್ಟರ ಬರುತದೆ. ಇಲ್ಲದಿದ್ದರೆ ಇಲ್ಲ. ದೇವೇಂದ್ರ ಹಾಗಲ್ಲ. ಪರಮಾತ್ಮನ ನೇಮದ ದಶಿಯಿಂದ ಐಶ್ವರ್ಯವೇ ದೇಹವಾಗಿವುಳ್ಳವನಾದ ಪ್ರಯುಕ್ತವಾಗಿ, ಕಮಲ ನಾಳದಲ್ಲಿ ಆಚ್ಛಾದಿತನಾದ ಕಾಲದಲ್ಲಿ ಇರಲಿಲ್ಲ ಎಂತ ತಿಳಿಯಲಿಕ್ಕೆ ಬರೋದಿಲ್ಲ. ಹಾಗೇವೆ ಮನುಷ್ಯ ಲೋಕದಲ್ಲಿ ಅರ್ಜುನಗಾದರೂ ಐಶ್ವರ್ಯದಿಂದ ಭ್ರಷ್ಟನಾದಾ ಎಂತ ತಿಳಿಯ ಬಾರದು. ಐಶ್ವರ್ಯವೇ ದೇಹವುಳ್ಳಂಥವಂಗೆ ಐಶ್ವರ್ಯ ಭ್ರಷ್ಟತ್ವ ಹ್ಯಾಗೆ ಕೂಡೀತು ? ಮಿಕ್ಕಾದ ದೇವತೆಗಳಿಗೆ ಕೂಡೀತು.

ಅನಾದಿಕರ್ಮಾನುಸರಿಸಿ ಪರಮಾತ್ಮನ ಇಚ್ಛಾದಿಂದ ಎತ್ಕಿಂಚಿತ್ಕಾಲ ಲೋಪ ಐದಿದರನ್ನೂ ಅದು ಲೋಪವೆಂದು ಕರಸದು. ಯಾಕೆಂದರೆ ರಾಜನಾದವ ಪಟ್ಟಣಸ್ಥರಾದ ಪ್ರಾಣಿಗಳ ವಾರ್ತೆ ತಿಳಿಯಬೇಕೆಂಬೋ ಇಚ್ಛಾದಿಂದ, ರಾತ್ರಿ ಭಾಗದಲ್ಲಿ ತನ್ನ ಐಶ್ವರ್ಯ ಸಂಬಂಧೀಯಾದವು ಲೋಪಮಾಡಿ ಗುಪ್ತಚಾರಿ ಯಾಗಿ ಹೋಗೋ ಮಾತ್ರದಿಂದ ತನ್ನ ಮನಸ್ಸಿಗು ಐಶ್ವರ್ಯ ಲೋಪ ವಾಯಿತೋ ಎಂತ ತಿಳಿಯೋದಿಲ್ಲ, ತದ್ವತ್ ಭಗವತ್ಕಾರ್ಯ ಸಾಧನಾರ್ಥವಾಗಿ ಬಲೀಯ ಪ್ರಾರಬ್ಧ ಉಂಡು ತೀರಸೋಣದರಿಂದ, ದುರ್ಯೋಧನನ ಪಾಪ ಮಾಡಿಸೋದರಗೋಸ್ಕರ, ರಾಜ್ಯೈಶ್ವರ್ಯದಿಂದ ಭೃಷ್ಟತ್ವ ತೋರಿಸೋಣದರಿಂದ ಜ್ಞಾನಿಗಳಾದವರಿಂದ ಹೀಗೆ ತಿಳಿಯದೇ ಭಗವತ್ಕಾಮಾನುಕೂಲ ಕಾಮಿಗಳು ಯಂತ ತಿಳಿಯಲ್ಪಡುತದೆ ಹೊರ್ತು, ಅವರು ಅಪಜಯಾದಿಗಳುವುಳ್ಳವರು ಅಂತ ತಿಳಿಯಬಾರದು. ಮುಖ್ಯತಃ ಪಾಂಡವರಿಗೆ ಭಗವತ್ಕಾರ್ಯಸಾಧಕವಾದ ಪ್ರಯೋಜನ ನಿಮಿತ್ಯ. ಲೋಕವಲ್ಲೀಲಾ ಕೈವಲ್ಯ ವಿಗ್ರಹನಾದ ಪರಮಾತ್ಮನ ಅನುಸರಿಸಿದ ವ್ಯಾಪಾರವುಳ್ಳವರಾದ ಪ್ರಯುಕ್ತ ಅವರು ಮಾಡೊ ಅಂಥಾ ಕರ್ತೃತ್ವದಿಂದ ; ಜಯಾಪಜಯ ಲೋಕ ದೃಷ್ಟಿಗೆ ಸೂಚಿತವಾದರೂ, ರಾಜಾಜ್ಞಾ ಪರಿಪಾಲನ ಮಾಡೋವಂಥ ಭೃತ್ಯರುಗಳಿಗೆ ದೂಷಣ ಭೂಷಣಗಳು ಹಾಗೆ ಲಾಭಾಲಾಭಗಳು ಬರೋದಿಲ್ಲ. ಅವರಿಗೆ ಆಜ್ಞಾ ಮಾಡಿದ ರಾಜನಿಗೆ ಹೊರ್ತು, ಭೃತ್ಯರುಗಳಿಗೆ ಲಾಭಾಲಾಭಾದ ಸುಖ ದುಃಖವಿಲ್ಲ. ತದ್ವತು ದೇವತೆಗಳಿಗೆ ಪುಣ್ಯ ಪಾಪಗಳು ಇಲ್ಲ. ನಾರಾಯಣನ ಆಜ್ಞಾದ ದೆಸೆಯಿಂದ ಸೃಷ್ಟಿ ಮಾಡತಾರೆ. ಸ್ಥಿತಿ

ಆದದರಿಂದ ಪುಣ್ಯವಿಲ್ಲ. ಪ್ರಳಯಕಾಲದಲ್ಲಿ ರಮಾದೇವಿ ಆಜ್ಞಾದಿಂದ, ಪ್ರಾಣದೇವರು ನೂರು ವರುಷ ಗಾಳಿಯಿಂದ ಜನರನ್ನು ಶೋಷಣ ಮಾಡತಾನೆ. ರುದ್ರದೇವರು ಸಹ ಮೂಲತಃ ಲಯ ಮಾಡುತಾನೆ. ದೇವೇಂದ್ರ ನವಮೇಘ ಗಳಿಂದ ಮಳೆಗರೆದು ಪ್ರಾಣಿಗಳನ್ನು ಲಯ ಮಾಡುತಾನೆ. ಸೂರ್ಯ, ಯಮಾ, ಅಗ್ನಿ, ಮೃತ್ಯು ಮೊದಲಾದವರು ಪರಮಾತ್ಮನ ಆಜ್ಞಾನುಸರಿಸಿ ಜಗತ್ತು ಪ್ರಳಯ ಮಾಡುತ್ತಾರೆ. ಅಥವಾ ಪ್ರಾಣಿಗಳು ಒಬ್ಬನ ಕೊಂದರ ಬಹು ಜನ್ಮಗಳಲ್ಲಿ ದುಃಖ ಐದಿ ನರಕದಲ್ಲಿ ಬೀಳುತಾರೆ. ಹೀಗರಲಿಕ್ಕಾಗಿ, ಮನುಷ್ಯನ ದೃಷ್ಟಾಂತದಿಂದ ಜಗತ್ತು ನಾಶಮಾಡಿದಂಥ ದೇವತೆಗಳಿಗೆ, ಮನುಷ್ಯನ ದೃಷ್ಟಿಯಿಂದ ಎಷ್ಟು ಬ್ರಹ್ಮಾಂಡಗಳಲ್ಲಾದರೂ (ಬ್ರಹ್ಮಹತ್ಯಗಳಾದರೂ) ನರಕ ಐದಬೇಕಾದೀತು. ತಸ್ಮಾತ್ ಮನುಷ್ಯ ದೃಷ್ಟಾಂತ ದೇವತಿಗಳಿಗೆ ಕೊಡಬಾರದು. ಅವರಿಗೆ ಸರ್ವದಾ ಪಾಪಪುಣ್ಯಗಳು ಇಲ್ಲ. ಜಯಾಪಜಯಗಳು ಇಲ್ಲದೇ ಮುಖ್ಯವಾಗಿ ಒಬ್ಬ ಪರಮಾತ್ಮನ ಕಾಮಾನುಕೂಲ ಕಾಮಿಗಳಾಗಿ, ಸರ್ವದಾ ಮನಸ್ಸಿನಲ್ಲಿ ಪರಮಾತ್ಮನ್ನ ನೋಡೋವಂಥ ಆನಂದದಿಂದೇ ಮಗ್ನರಾದ ಪ್ರಯುಕ್ತ ಸಾರ್ವ ಕಾಲೀನವಾದ ಜಯವುಳ್ಳವರು ಅಂತ ಕರೆಸುತಾರೆ.

ದೇವತೆಗಳಿಗೆ ನಿಯಾಮಕಳಾದ ಅಪ್ರಾಕೃತಳಾದ ನಿಯಮನ ದೆಶೆಯಿಂದ ನಿತ್ಯಾನಂದವುಳ್ಳಂಥಾ ಬ್ರಹ್ಮರುದ್ರಾದಿಗಳನ್ನು ಸೃಷ್ಟಿ ಮಾಡಿ ಅವರಿಗೆ ಗತಿಪ್ರದಳಾ ದಂಥ ರಮಾದೇವಿ ಪರಮಾತ್ಮನ ಕಾರ್ಯಸಾಧನಾರ್ಥವಾಗಿ, ಜಗತ್ತು ಸಂಹಾರ ಮಾಡುವಂಥಾಕಿಯಾಗಿ, ಸೀತಾಕೃತಿತ್ವೇನ ಲಂಕಾಪಟ್ಟಣದಲ್ಲಿ ರಾವಣನ ಅಧೀನಳಾದೋಪಾದೇಲಿ ಚೇಷ್ಟಾ ತೋರಿಸಿ, ರಾವಣನ್ನ ಸಂಹಾರ ಮಾಡಿದಳು. "ಯಂ ಕಾಮಯೇ ತಂ ತಮುಗ್ರಂ...ಣೋಮಿ" ಎಂಬೋಕ್ತಿಯುಳ್ಳ ಮಹಾತ್ಮಳು ರಾವಣನ ವನದಲ್ಲಿ ಎಂದಿಗಾದರು ಇದ್ದಾಳೆ ? ಇದು ದಾವ ಪರಮಾತ್ಮನ ಲೀಲಾವೆ ಅನುಸರಿಸಿ......... ಬ್ರಹ್ಮಾದಿಗಳು ವ್ಯಾಪಾರ ಮಾಡುತ್ತಾರೆ. ರಮಾದೇವಿ ಅಪ್ರಾಕೃತಳು. ಬ್ರಹ್ಮಾದಿಗಳು ಪ್ರಾಕೃತ ಬದ್ಧರು. ಆದ ಕಾಲಕ್ಕೂ, ತಮಗ ನೀತವಾದ ಕ್ರಿಯಾಕರ್ಮ ಪರಮಾತ್ಮನ ಅನುಗ್ರಹದ ದಶಿಯಿಂದ ದುಃಖ ವಿಲ್ಲದಲೇ ತೀರಸತಾರೆ. ಯಾಕೆಂದರೆ ಅವರು ಪರಮಾತ್ಮನ ಅನುಗ್ರಹಕ್ಕ ಮುಖ್ಯ ಪಾತ್ರರಾದ ಪ್ರಯುಕ್ತ, ಪರಮಾತ್ಮ ಅವರ ಮ್ಯಾಲೆ ಪೂರ್ಣಾನುಗ್ರಹ ಮಾಡೋವಂಥವವಾಗಿ, ತನ್ನಿಂದ ಕ್ಲಪ್ತ ಮಾಡಲ್ಪಟ್ಟ, ಬಲೀಯವಾದ ಕರ್ಮ ಅವರಿಗೆ ಲೇಶ ದುಃಖವಿಲ್ಲದೆ, ಅನುಭವ ಮಾಡಿಸಿ ಅವರ ಕರ್ಮ ತನ್ನ

ಸೇವಾರೂಪತ್ವೇನ ಸ್ವೀಕಾರ ಮಾಡಿ, ಅವರಿಗೆ ಅನಿಷ್ಟ ನಿವೃತ್ತಿ ಮಾಡಿ ಇಷ್ಟ ಪ್ರಾಪ್ತಿ ರೂಪವಾದ ಮೋಕ್ಷವನ್ನು ಕೊಡುತಾನೆ.

## ಸ್ವರ್ಗಕ್ಕೆ ಅರ್ಜುನ ಹೋದ ಕಾಲದಲ್ಲಿ

ಅಪ್ಸರಾ ಸ್ತ್ರೀ ತನ್ನ ಭೋಗಾರ್ಥ ಯಾಚನಾ ಮಾಡಿದ ಕಾಲದಲ್ಲಿ ಅಂಗೀಕಾರ ಮಾಡದೇ ಇರೋಣದರಿಂದ, ಷಂಡತ್ವ ವೊಹಿಸು ಅಂತ ಶಾಪ ಪ್ರದಾನ ಮಾಡಿದ್ದು ದೇವೇಂದ್ರ ಕೇಳಿ, ತನ್ನ ಮಗನ ಮ್ಯಾಲೆ ಅಂತಃಕರಣ ಮಾಡಿ, ತತ್ತಕಾಲಕ್ಕೆ ಶಾಪ ಪರಿಹಾರ ಮಾಡದಲೇ ಪರಮ ಸಮರ್ಥನಾದರೂ, ದೊಡ್ಡ ಅಪರೋಕ್ಷ ಜ್ಞಾನಿಯಾದ ಪ್ರಯುಕ್ತ ಅಜ್ಞಾತವಾಸದಲ್ಲಿ ಪ್ರಯೋಜಕವಾದೀತು ಯೆಂತ ಉಳಿಸೋಣದರಿಂದ, ಪ್ರಾಪ್ತವಾದ ಅಜ್ಞಾತವಾಸದಲ್ಲಿ ಬೇಕಾದದ್ದೆ ಅಂತ ಎನಿಸಿ ಪರಿಹಾರ ಮಾಡಿಕೊಂಡನು. ಇದು ಹ್ಯಾಗೋ ಹಾಗ ಸಾಕ್ಷಾತ್ಪರ ದೇವತಿ, ಬ್ರಹ್ಮ, ರುದ್ರಾದಿ ದೇವತೆಗಳಲ್ಲಿ ಪರಮಾನುಗ್ರಹ ಇದ್ದ ಪ್ರಯುಕ್ತ, ಭೀಮಾರ್ಜುನಾದಿಗಳಿಗೆ ಬದ್ಧಕವಾದಂಥ ಪ್ರಾರಬ್ಧಕರ್ಮ ತೀರಸೋದು ಮನಸ್ಸಿನಲ್ಲಿ ಮಾಡಿಕೊಂಡು, ಭೂಭಾರ ನಿವಾರಣ ಮಾಡೋ ರೂಪವಾದ ತನ್ನ ಕಾರ್ಯದಿಂದ ನಿರ್ವಾರಣ ಮಾಡಿ, ನನ್ನ ಆಜ್ಞಾ ಪರಿಪಾಲನ ಮಾಡಿದವರು ಅಂತ ಅಧಿಕವಾದ ಪ್ರೀತಿಯುಳ್ಳವನಾದ.

ಮಿಕ್ಕ ದೇವತೆಗಳು ಸಾಧಾರಣರಾದವರಿಗೆ ಬಲೀಯವಾದ ಪ್ರಾರಬ್ಧಕರ್ಮ ಉಂಬೋದರಗೋಸ್ಕರ ಭೂಮಿಯಲ್ಲಿ ಹುಟ್ಟಿಸಿ. ತನ್ನ ವಿಷಯಕವಾದ ಅಪರೋಕ್ಷಜ್ಞಾನವನ್ನು ತಿರಸ್ಕಾರಮಾಡಿ "ಶ್ವಪಚಾದಪಿ ಕ....." ವನ್ನು ಯೈದ ಸುಥಾನ, ಇವರಿಗೆ ಹಾಗಲ್ಲ. ಸ್ವರೂಪದಿಂದ ಉತ್ತಮತ್ವ, ಹ್ಯಾಗ ಹ್ಯಾಗ ಉತ್ತಮತ್ವ ಇರುತದೊ ಹಾಗೆಲ್ಲ ಜ್ಞಾನ ಭಕ್ತ್ಯಾದಿಗಳು ಅಧಿಕವಾಗಿ ಇದ್ದಾಗೆಲ್ಲ, ಸಾಕ್ಷಾತ್ ಪರದೇವತಿ ದುಃಖಬಡಸದಲೇ ಸರ್ವದಾ ತನ್ನಲ್ಲಿ ರತಿಯನ್ನು ಕೊಟ್ಟು ಆನಂದ ಬಡಸುತಿರುತ್ತಾನೆ. ತನ್ನಿಮಿತ್ಯವಾಗೇವೆ "ಯತ್ರ ಧರ್ಮ ಸುತೋ ರಾಜಾ" ಎಂಬೋ ಪ್ರಮಾಣದಿಂದ ಪ್ರಾರಬ್ಧಕರ್ಮ ಪರಮ ಬಲೀಯವಾದ ಪ್ರಯುಕ್ತವಾಗಿ, ಇವರಿಗೆ ಆ ಕರ್ಮ ದುಃಖವಾಗಬಾರದು ಎಂಬೋ ನಿಮಿತ್ಯದಿಂದ, ತಾನು ಅವರಿಗೆ ಮಿತ್ರನಾಗಿ ಅರಲವಕಾಲ ಬಿಡದೇ ಸ್ಥೂಲ ದೃಷ್ಟಿಗೆ ವಿಷಯವಾಗಿ, ದೇಹಾನುಬಂಧಿಯಾಗಿ, ಗುರುವಾಗಿ, ಸರ್ವ ಪ್ರಕಾರ ತಾನೇ ಆಗಿ, ಬಲೀಯ ಕರ್ಮ ತನ್ನ ಸೇವಾತ್ವೇನ ತೀರಿಸಿ, ಅವರಿಗೆ ಸರ್ವದಾ ಜಯವುಳ್ಳವರು ಎಂತ ಅನಿಸಿದ.

ಅವರಿಗೆ ಪ್ರಾರಬ್ಧ ನಡಸೋಪಾದಿಲಿ ಕರ್ಮ ದುಃಖ ಕೊಟ್ಟೀತು ಎಂತ ಅಂದರೆ ಹೊರ್ತು, ಸಾಕ್ಷಾತ್ ಪರದೇವತಿ ಅವರಿಗೆ ಸುಹೃತ್ತನಾದಾ ಎಂಬೋದಕ್ಕೆ ವ್ಯರ್ಥತ್ವ ಬಂದಿತು. ದಾವ ಪರಮಾತ್ಮನ ನಾಮಸ್ಮರಣ ಮಾಡಿದಲ್ಲಿ ದುಃಖಾದಿಗಳು ಕೂಡದೇ, "ನಿತ್ಯೋತ್ಸವೋ" ಎಂಬೋ ವಾಕ್ಯಕ್ಕೆ ವಿರೋಧ ಬರುತದೆ. ಆದ ಪ್ರಯುಕ್ತ, ಸಾಕ್ಷಾತ್ ಪರದೇವತೆ ಇದ್ದಲ್ಲಿ ಎತ್ಕಿಂಚಿತ ದುಃಖ ಇಲ್ಲದೇ, ಸರ್ವದಾ ಜಯವಿರತದೆ. ಅದು ಹ್ಯಾಗಯಂದರ, "ಯತ್ರ ಧರ್ಮಸುತೋ ರಾಜ ಜಯಃ" ಎಂಬೋ ಪ್ರಮಾಣದಿಂದ ದಾವ ವಿಷಯವಾದ ಧರ್ಮ ಇದ್ದಲ್ಲಿ ಜಯವಿರುತದೆ. ಎಂಬೋ ಕಾಲಕ್ಕ, ಪರಮಾತ್ಮ ಧರ್ಮಶಬ್ದವಾಚ್ಯನಾದವ, ಧರ್ಮರೂಪನಾದವ, ಧರ್ಮಪ್ರವೃತ್ತಕನಾದವ. ಇಂಥಾ ಶ್ರೀಕೃಷ್ಣ ಇದ್ದ ಸ್ಥಳದಲ್ಲಿ ದುಃಖ ಲೇಶವಿಲ್ಲದೇ, ಸರ್ವದಾ ಜಯವುಳ್ಳವರಾಗಿ ಇರುತ್ತಾರೆ. ಆದ ಪ್ರಯುಕ್ತ, ಸಂಜಯ ವೇದವ್ಯಾಸ ದೇವರ ವರಪ್ರಸಾದದಿಂದ ಬಲ್ಲವನಾದ ಪ್ರಯುಕ್ತ "ಯತ್ರ ಯೋಗೇಶ್ವರಃ ಕೃಷ್ಣೋ" ಎಂತ ಉಕ್ತವಾಯಿತು. ಆದ ಪ್ರಯುಕ್ತ ಎಲ್ಲಿ ಶ್ರೀಕೃಷ್ಣಾರ್ಜುನರು ಹಾರೆ, ಅಲ್ಲಿ ಪೂರ್ವೋಕ್ತವಾದ ವಿಜಯಾದಿಗಳು ಇರುತವೆ ಎಂಬೋಣವೇ ಸಿದ್ಧಾಂತ.

## ೧೬೫

## ಪ್ರಾಣದೇವರ ಸ್ತೋತ್ರ

ನೋಡಿದ್ಯಾ ಸೀತಮ್ಮ ನೀ ನೋಡಿದ್ಯಾ ॥ ಪ ॥

ನೋಡಿದ್ಯಾ ಹನುಮನಾರ್ಭಟವ – ಹಾಳು
ಮಾಡಿದ ಕ್ಷಣದಲಿ ವನವಾ ॥ಆಹಾ॥
ಝಾಡಿಸಿ ಕಿತ್ತು ಈಡ್ಯಾಡಿ ವೃಕ್ಷಂಗಳ ಕೊಂ–
ಡಾಡುವ ನಿನ್ನಯ ಕೋಡಗನ್ನರುಷವಾ ॥ ಅ.ಪ. ॥

ಮಾತೆ ನಿನ್ನಾಜ್ಞೆಯ ಕೊಂಡು – ಆರ
ಭೀತಿಯಿಲ್ಲದೆ ಫಲ ಉಂಡು –ದೈತ್ಯ
ದೂತ ಬರಲು ಭಾರಿ ಹಿಂಡೂ ॥ಆಹಾ॥
ವಾತ ಜಾತ ಬಂದ ಪಾತಕಿಗಳನೆಲ್ಲ
ತಾ ವಕದಿ ಕೊಂದು ಭೂತಳಕ್ಹಾಕಿದಾ ೧

ಸೊಕ್ಕಿ ರಾವಣನೆಂಬ ಗಂಡ – ಮಹ
ಲಕುಮಿಯನೆ ಕರಕೊಂಡ – ರಾಮ
ರಕ್ಕಸಾಂತಕ ಆಕೆ ಗಂಡ – ಕಪಿ–
ಗಿಕ್ಕಿರೆಂದ ಯಮದಂಡ ॥ಆಹಾ॥
ಮಿಕ್ಕ ಖಳರು ಕೂಡಿ ಲೆಕ್ಕಿಸಿ ಮಾತಾಡಿ
ಸಿಕ್ಕರೆ ಬಿಡನೆಂದು ದಿಕ್ಕು ಪಾಲಾದ ೨

ಎಷ್ಟೇಳ್ಲಲವನ ಪ್ರತಾಪ – ನೋಡು
ಸುಟ್ಟನೆಂಬ ಲಂಕಾ ದ್ವೀಪ – ಎಂಥ

ಗಟ್ಟಿಗ ನೋಡೆ ನಮ್ಮಪ್ಪ ॥ಆಹಾ॥
ಸೃಷ್ಟೀಶ ಕೇಶವ ವಿಠ್ಠಲರಾಯನ
ಮುಟ್ಟಿ ಭಜಿಸಲಜ ಪಟ್ಟಾಳೆನೆಂದ್ಹೋದಾ ೩

## ೧೬೬

## ವಾಯುದೇವರ ಸ್ತೋತ್ರ

ಕೇಳಿರೀತನ ಗಾಥ ಚರಿತೆಯ ಚಲ್ವ
ಜಾಲಿಕಾಪುರದಿದ್ದ ಧೊರೆಯಾ ಪ

ಕಾಳಾಹಿ ವೇಣಿಯಳು ದ್ರುಪದಜೆ
ಶಾಲೆ ಸೆಳಿಯುತ ಖೂಳ ಸಭೆಯೊಳು
ಗೋಳಿಸಿದ ದುರ್ಯೋಧನನ ಕುಲ
ಹಾಳು ಮಾಡಿದ ಬಹಳ ಬಗೆಯಲಿ ಅ.ಪ

ಕಟಕೆಲ್ಲ ಕುರುಕ್ಷೇತ್ರದಲ್ಲೀ ಬಹುಳ–
ದ್ಧಟಿತವಾಗಿ ನೆರದಿತಲ್ಲೀ
ಕುಟಿಲ ದುಶ್ಯಾಸಿದ್ದನಲ್ಲೀ ಭೀಮಾ–
ರ್ಭಟಿಸುತಲವನ ಕಾಣುತಲಿ
ಕಟಕಟನೆ ಪಲ್ಗಡಿದು ಅಸುರನ
ಪಟಪಟನೆ ಕರುಳನ್ನು ಹರಿಯುತ
ಪುಟಿ ಪುಟಿದ ಹಾರುತಲಿ ರಣದೊಳು
ಛಟ ಛಟಾ ಛಟಿಲೆಂದು ಸೀಳಿದ ೧

ಗಡಬಡಿಸುತ ಭೀಮನಾಗೇ ಎದ್ದು
ನಡೆದನು ತುಡುಗರ ಬಳಿಗೇ
ತಡ ಮಾಡದಲೆ ಬಹು ಬ್ಯಾಗೆ ದೊಡ್ಡ
ಗಿಡ ಕಿತ್ತಿ ಪಿಡಿದ ಕೈಯೊಳಗೇ

ಘುಡು ಘುಡಿಸಿ ರೋಷದಲಿ ಅಸುರರ
ಬಡಿ ಬಡಿದು ಮಕುಟವನೆ ಕಿತ್ತುತ
ಕಡಿ ಕಡಿದು ರಥಗಳನೆ ತರಿವುತ
ಧಡ ಧಡಾ ಧಡಲೆಂದು ಕೆಡಹಿ ೨

ಪೂಶರ ಜನಕ ತಾನೊಲಿದು ಉಪ–
ದೇಶ ಕೊಟ್ಟನು ಭೀಮಗೊಂದು
ದ್ವೇಷಿ ದುರ್ಯೋಧನನ ಹಿಡಿದು ತೊಡೆ
ನಾಶ ಮಾಡಲೊ ಎಂದು ನುಡಿದು
ರೋಷದಲಿ ಬೊಬ್ಬಿರಿದು ಅವನಾ–
ಕಾಶಕೊಗೆಯುತ ಭಾಪುರೇ ಗದೆ
ಬೀಸಿ ಬಡಿಯುತ ಕಡಿದೆ ತೊಡೆಗಳ
ಕೇಶವ ವಿಠಲೇಶನಾಜ್ಞದಿ ೩

## ೧೬೭

## ವಿಜಯದಾಸರ ಸ್ತೋತ್ರ

ವಿಜಯರಾಯರ ಪಾದಕಮಲ ಭಜಿಸಲಾಕ್ಷಣ ದಿ– ।
ಗ್ವಿಜಯ ಮಾಡಿ ಸುಜನರನ್ನು ಪೊರೆವನನುದಿನ ಪ

ದಾಸಪ್ಪನೆಂಬ ನಾಮದಿಂದ ಕರೆಸುತ ಉದರ
ಗೋಸುಗದಿ ಪರರ ಬಳಿಯ ಆಶ್ರಿಸುತ ॥
ಯೇಸುಪರಿಯ ಬಡತನವು ಸೋಸಿ ದಣಿವುತ ।
ಕ್ಲೇಶಗೊಂಡು ಸುಲಿಸಿಕೊಂಡು ಕಾಶಿಗ್ಹೋಗುತ ೧

ವಾಸವಾಗಿ ಸನ್ಯಾಸಿ ವೇಷ ಧರಿಸುತ ನಿತ್ಯ
ಬ್ಯಾಸರದಲೆ ವ್ರತಗಳು ಉಪವಾಸ ಮಾಡುತ ॥

ರಾಶಿ ರಾಶಿ ಜನರ ಕೂಡಿ ದೇಶ ಚರಿಸುತ ಮ್ಯಾಲೆ
ಕಾಶಿ ಬಿಟ್ಟು ಸೇತು ರಾಮೇಶನ್ನ ಹುಡುಕುತ ೨

ತಿರುಗಿ ತಿರುಗಿ ಚೀಕಲಾಪರಿಗೆ ಬಂದನು ಕಂಡು
ಗುರುತು ಹಿಡಿದು ಆ ಕ್ಷಣದಿ ಕರೆದು ವೈದ್ಯರು ॥
ಪರಮ ಸಂತೋಷದಿಂದ ಭರಿತರಾದರು ಮೈ
ನೆರೆದ ಶೋಭನಾದಿಗಳನು ತ್ವರಿತ ಮಾಡ್ದರು ೩

ನಿತ್ಯ ಸಂಸಾರದಲ್ಲಾಸಕ್ತರಾಗುತ ದೊಡ್ಡ
ಹತ್ತು ಎಂಟು ಗ್ರಾಮವನ್ನು ವತ್ತಿ ಆಳುತಾ ॥
ಗುತ್ತಿಗೆಯ ಹೊತ್ತ ರೊಕ್ಕ ಮ್ಯಾಲೆ ಬೀಳುತ ಯಿನ್ನು
ಎತ್ತ ಸೇರಲೆಂದು ಭಾಗೀರಥಿಗೆ ಹೋಗುತ ೪

ಕಾಶಿಯೊಳಗೆ ಮಲಗಿರಲು ಸ್ವಪ್ನ ಕಂಡರು ಪುರಂದರ-
ದಾಸರೇವೆಂಬುದು ವ್ಯಾಸ ಕಾಶಿಗೊಯ್ದರು ॥
ಶ್ರೀಶನಿಂದಲಿವರಿಗೆ ಉಪದೇಶ ಕೊಡಿಸೋರು ವಿಜಯ
ದಾಸರೆಂದು ಕರೆಸಿರೆನ್ನೆ ಎದ್ದು ಕುಳಿತರು ೫

ಕನಸಿನೊಳಗೆ ದೇವರ ದರುಶನಾಗುತ ಶ್ರೀ-
ಮನಸಿಜನ ಪಿತನ ದಯವು ಘನ ಘನಾಗುತ ॥
ಜಿನಸು ಜಿನಸು ಪದ ಸುಳಾದಿಗಳನು ಪೇಳುತ ಆಗ
ನೆನಿಸಿದಾಕ್ಷಣದಲಿ ಮುಖದಿ ಕವಿತ ಹೊರಡುತಾ ೬

ಮತ್ತೆ ಹೊರಟು ಆದವಾನಿ ಸ್ಥಳಕೆ ಬಂದರು ಏನು
ಹತ್ತು ಜನರಿಗೆ ಪೇಳಿದ ವಾಕ್ಯ ಸತ್ಯವೆಂದರು ॥
ಸುತ್ತು ಮುತ್ತು ನೂರಾರು ದಾಸರು ನೆರೆದರು ಆನಿ
ಸತ್ತಿಗಿ ಪಲ್ಲಕ್ಕಿಯವರೆ ಶಿಷ್ಯರಾದರು ೭

ಯಾತ್ರಿ ತೀರ್ಥಗಳನು ಬಹಳ ಚರಿಸಿ ನೋಡುತ ಸ-
ತ್ಪಾತ್ರರಲ್ಲಿ ನೋಡಿ ಧರ್ಮಗಳನೆ ಮಾಡುತ ॥

ರಾತ್ರಿ ಹಗಲು ವಿಜಯ ವಿಠ್ಠಲನೆಂದು ಪಾಡುತ ಜನರ
ಶ್ರೋತ್ರಿಯಿಂದ್ರಿಯಗಳ ಉದ್ಧಾರ ಮಾಡುತ ೮

ಪೂರ್ತಿ ಜ್ಞಾನದಿಂದ ಕರ್ಮವೆಲ್ಲ ಕಡಿದರು ಸ–
ತ್ಕೀರ್ತಿವಂತರಾಗಿ ಬಹಳ ಖ್ಯಾತಿ ಪಡೆದರು ॥
ಕಾರ್ತಿಕ ಶುದ್ಧ ದಶಮಿ ದಿವಸ ನಡೆದರು ಶ್ರೀ
ಸತ್ಯರಮಣ ಕೇಶವ ವಿಠಲನ್ನ ಕಂಡರು ೯

೧೬೮

## ಉಗಾಭೋಗ

ಮಡದಿ ಮಕ್ಕಳ ಬಿಟ್ಟು ಚಲಿಸಿದವನೆ ಹೊಲಿಯಾ
ಹಡದ ತಾಯಿ ತಂದಿ ಬಳಲಿಸಿದವ ಹೊಲಿಯಾ
ಒಡಹುಟ್ಟಿದವರಿಗೆ ಭಾಗಾ ಕೊಡದವ ಹೊಲಿಯಾ
ಒಡಿಯಾಗ ಅವಸರ ಬರಲು ಬಿಟ್ಟುಹೋಗುವ ಹೊಲಿಯಾ
ಕಡಲಾಶಾಯಿ ನಾಮ ನೆನಿಯಾದವ ಹೊಲಿಯಾ
ಬಡವರ ಬಗ್ಗರ ಕಂಡರೆ ಮಿಡಕದವನೆ ಹೊಲಿಯಾ
ದೃಢಗನಾಗಿ ಯಾತ್ರಿ ಚಲಿಸದವನೆ ಹೊಲಿಯಾ
ಕಡಿತನಕ ಏಕಾದಶಿ ಮಾಡದವನೆ ಹೊಲಿಯಾ
ಬಿಡದೆ ದ್ವಾದಶಿ ದಿವಸ ದ್ವಿಭುಕ್ತದವ ಹೊಲಿಯಾ
ಸಡಗರದಲ್ಲಿ ಪರನಾರಿಯರ ವೊಲಿಸಿಗೊಂಬವ ಹೊಲಿಯಾ
ಹೊಡದಾನು ಯಮನೆಂದು ತಿಳಿಯಾದವನೆ ಹೊಲಿಯಾ
ಮೊಡವಿಪಾಲ ನಮ್ಮ ಕೇಶವ ವಿಠಲನ್ನ
ಕಡುನಾಮಾಮೃತವನ್ನು ಸವಿಯದವ ಹೊಲಿಯಾ ೧

## ೧೬೯

ಗುರು ವಿಜಯರಾಯರ ಪದಸರಸಿಜ ಸೇವಿಪ
ನರನೇ ಜಗನ್ಮಾನ್ಯ ಧನ್ಯಾ ಪ

ನಿರುತ ಸ್ಮರಿಸುವರ ದುರಿತ ತರಿಯಲವ
ತರಿಸಿ ನರಹರಿಯ ಪರಿಚರಿಸುವ ನಿಜ ಅ.ಪ

ಭೂಕಾಂತನ ಬಹು ಬಾಧಿಗೆ ತಾಳದೆ
ಈ ಕರುಣಿಕನ ತನವಾ
ಬೇಕಿಲ್ಲೆಂದರು ತಾಕಿಕದ ಸ್ಥಿತಿ
ಸಾಕುವ ಶ್ರೀ ದೇವಾ
ಶ್ರೀ ಕಳತ್ರನ ಕೃಪಾ ಕಟಾಕ್ಷದಿಂ-
ದೇಕ ಮನೋಭಾವಾ
ಸ್ವೀಕರಿಸುತ ಪರಲೋಕ ಸಾಧನವ
ನೀ ಕರಿಸಿದರಾನೇಕ ದುರ್ವಿಷಯವ ೧

ಇಂತುಪಯ ನಿಶ್ಚಿಂತನಾಗಿ ಗುರು-
ವಂತರಾತ್ಮ ಹರಿಯಾ
ಸ್ವಾಂತತಿ ಭಜಿಸುತ ಚಿಂತವರೇವಲಿ ಹನು-
ಮಂತನ ಪರಮದಯಾ
ಎಂತು ಪೇಳಲಿ ಬಲು ಶಾಂತರಾಗಿ ಶ್ರೀ-
ಕಾಂತನ ಪರಿಪರಿಯಾ
ಅಂತರಂಗದೊಳನುಭವಿಸುತ ಗುಣ-
ವಂತರಿವರಿಗೆ ದಿಗವಂತದಿ ಸರಿಯಾ ೨

ಲೇಸು ಜ್ಞಾನವ ಬಯಸುವ ಜನರೋಲ್
ಆ ಸೋಮಪುರದಲಿ
ವಾಸವಾದ ರಾಮದಾಸರಿಂದುಪ-
ದೇಶವ ಕೊಳ್ಳುತಲೀ
ಹೇಸಿ ವಿಷಯದಿಂದೋಷಿಯಾದ ಶ್ರೀನಿ-
ವಾಸರಾಯರಲ್ಲೀ
ಯೇಸು ಜನ್ಮದ ಸುಕೃತವು ಇವರನು ನಿ-
ರ್ದೋಷಿಗಳನು ಗೈದಿಸಿದರು ತ್ವರಿತದಲಿ ೩

ವೇದ ವೇದ್ಯನ ಗುಣಂಗಳ ಪದ ಸು-
ಳಾದಿ ಪ್ರಮೇಯವನೂ
ಸಾದರದಿಂದಲಿ ಭೂದೇವರಿಗೆ
ಬೋಧಿಸಿ ತತ್ವವನೂ
ಸಾಧಿಸಿ ಭೇದವ ಜೀವೇಶ್ವರ ಮತ
ಭೇದಿಸಿ ವಾದಿಯನೂ
ಆದಿ ವ್ಯಾಧಿ ಅನಾದಿ ಭೂತಗಣ
ಭೇದಿಸಿ ಮಾಡಿ ಪರೋದರ ಗತವನೂ ೪

ಮಿತಿ ಇಲ್ಲವರ ಚರಿತೆಗಳ ಪೊಗಳುವ
ಅತಿಶಯ ಸಮ್ಮೋದಾ
ಗತಿದಾಯಕ ಪಾರ್ವತಿ ಪತಿ ಅಚಲ ವ-
ಸತಿಯನೆ ಮಾಡೀದಾ
ಕೃತಿ ರಮಣನ ಒಲಿಸುತನಶನ ವ್ರತ
ಪಥದಿಂದಾಗಾಧಾ
ನುತಿಸುತ ಕಮಲಾಪತಿ ನರಸಾರಥಿ ಪ್ರತಿಮೆಯ
ಪ್ರತಿಷ್ಠಿಯ ಹಿತದಿಂದಗೈದಾ ೫

## ೧೭೦

## ಜಗನ್ನಾಥದಾಸರ ಸ್ತೋತ್ರ

ಅಂಬುಜಾಕ್ಷಿ ಸ್ತಂಭದಿಹನ್ಯಾರೇ – ಸಾರೇ ಪ

ನಂಬಿ ಭಜಿಸುವ ಭಕುತರ ಮನದ
ಹಂಬಲ ನೀಡುವರೆ – ನೀರೇ ಅ.ಪ

ಸುರರೊಡೆಯನೋಲ್ ಪರಿಪರಿಯಲ್ಶೈ–
ಶ್ವರ್ಯದಿಂ ರಾಜಿಸುವರ್ಯಾರೇ
ಹರಿಕಥಾಮೃತ ಗ್ರಂಥ ವಿರಚಿಸಿ
ಧರಣಿ ಸುರರುದ್ಧರಿಸಿದವರೆ ೧

ಫುಲ್ಲಲೋಚನೆ ಬಲ್ಲೆಯಾ ಇವ –
ರಿಲ್ಲಿರುವ ಕಾರಣವಿದೇನೆ
ಫುಲ್ಲನಾಭನ ಪುಡುಕುತಲೀ
ಪ್ರಹ್ಲಾದನನುಜ ಸಹ್ಲಾದರಿವರೆ ೨

ಜಲಜ ತುಳಸಿಮಣಿ ಸುಮಾಲಿಕೆ
ಗಳದಿ ಧರಿಸಿಹನ್ಯಾರೆ – ನೀರೇ
ಕಲಿಯುಗದಿ ಕಮಲಾಪತಿ ವಿ–
ಠಲನ ಒಲಿಸಿದಿಳೆಯೊಳಗೆ ಮೆರೆವರೆ ೩

## ೧೭೧

## ಹರಿಕಥಾಮೃತಸಾರದ ಫಲಶ್ರುತಿ

ಶ್ರೀ ಮದಶ್ವಗ್ರೀವನೊಲುಮೆಗೆ ಧಾಮರೆನಿಪ ಶ್ರೀ ವಾದಿರಾಜರು
ಪ್ರೇಮದಲ್ಲಿ ಜಗನ್ನಾಥದಾಸರ ಸ್ವಪ್ನದಲಿ ಬಂದು

ಶ್ರೀ ಮನೋರಮನರಿಪ ತತ್ವ ಸು ಸೌಮನದ ಮಾಲಿಕೆಯನಿತ್ತು–
ದ್ದಾಮ ಗ್ರಂಥವ ರಚಿಸಿರೆನುತಲಿ ನುಡಿದ ಕಾರಣದೀ ಪ

ಭಾರತವು ಭಾಗವತ ವಾಮನ ಗಾರುಡ ಭವಿಷ್ಯೋತ್ತರ ಪುರಾಣ
ಚಾರು ವಿಷ್ಣು ರಹಸ್ಯ ಪಂಚರಾತ್ರಾಗಮ ವಾಯು
ಸಾರ ಗುರವೃತ್ತವೃತ್ತವು ಈರ ಸಂಹಿತಾದಿತ್ಯವಾಗ್ನೇಯ
ಪಾರ ರಸಗಳ ತೋರ್ಪ ಶ್ರೀ ಗುರು ಮಧ್ವ ಶಾಸ್ತ್ರದಲೀ ೧

ಭಾರಿ ಭಾಗ್ಯವಲೋಕಿಸಿದರಲಿ ಸಾರ ಕ್ರೋಢೀಕರಿಸಿ ದೀನೋ–
ದ್ಧಾರಗೋಸುಗ ಹರಿಕಥಾಮೃತ ಸಾರವನು ರಚಿಸೀ
ಸ್ಥೈರ್ಯ ಮಾನಸದಿಂದ ಭಾವೀ ಭಾರತೀಪತಿ ವಾದಿರಾಜರ
ಭೂರಿ ತೋಷಕೊಪ್ಪಿಸುತಲಾಪಾರ ಮುದ ಪಡೆದೂ ೨

ಸಾಸಿರಾರ್ಥಗಳೊಂದು ಪದಕವಕಾಶವಿರುವೋ ಶ್ರೀದ ವಿಷ್ಣು
ಸಾಸಿರದ ನಾಮವನು ಯೋಚಿಸಿ ಇಹರು ಗ್ರಂಥದಲೀ
ಈಸು ರಹಸ್ಯವನರಿತು ಪಠಪಗೆ ಏಸು ದೂರವೊ ಮುಕ್ತಿಬರಿದಾ–
ಯಾಸ ಬಟ್ಟುದರಿಂದ ಫಲವೇನಿಲ್ಲವೀ ಜಗದೀ ೩

ಹ ಯೆನಲು ಹರಿಯೊಲಿಯುವನು ತಾ ರಿ ಯೆನಲು ರಿಕ್ತತ್ವ ಹರಿಸುವ
ಕ ಯೆನಲು ಕತ್ತಲೆಯೆಂಬಾಜ್ಞಾನವನು ಪರಿಹರಿಪಾ
ಥಾ ಯೆನಲು ಸ್ಥಾಪಿಸುವ ಜ್ಞಾನ ಮೃಯೆನಲು ಮೃತಿಜನಿಯ ಬಿಡಿಸುವ
ತ ಯೆನಲು ಹರಿ ತನ್ನ ಮೂರ್ತಿಯ ತೋರುವನು ನಿತ್ಯಾ ೪

ಸಾ ಯೆನಲು ಸಾಧಿಸುವ ಮುಕ್ತೀ ರ ಯೆನಲು ರತಿಯಿತ್ತು ರಮಿಪನು
ಕಾಯ ವಾಙ್ಮನದೆಂಟು ಅಕ್ಕರ ನುಡಿದರದರೊಳಗೇ
ಶ್ರೀಯರಸು ವಿಶ್ವಾದಿ ಅಷ್ಟೈಶ್ವರ್ಯ ರೂಪದಿ ನಿಂತು ತಾ ಪರ–
ಕೀಯನೆನಿಸದೆ ಇವನ ಮನದೊಳು ರಾಜಿಪನು ಬಿಡದೇ ೫

ಹರಿಯೆನಲು ಅನಿರುದ್ಧ ಧರ್ಮವು ದೊರಕಿಸುವ ಪರಮ್ಪುರುಷದಲ್ಲಿ ಸ–
ತ್ವರ ಕಥಾಯೆನೆ ಕೃತಿರಮಣನರ್ಥಗಳ ಹನಿಗರೆವಾ

ವರ ಅಮೃತಯೆನಲಾಗ ಶ್ರೀ ಸಂಕರುಷಣನು ಕಾಮವನು ಯೋಜಿಪ
ಸರಸ ಸಾರೆನೆ ವಾಸುದೇವನು ಮೋಕ್ಷ ಕೊಡುತಿಪ್ಪಾ ೬

ಈ ರಹಸ್ಯವನರಿತು ಪ್ರತಿದಿನ ಸಾರಸಾಕ್ಷನ ಪಾದಕಮಲಕೆ
ಆರು ಪದದಂತಿರುವ ನರರಿಗೆ ಮೇಲೆ ನುಡಿದ ಫಲಾ
ಸಾರಿ ಸಾರಿಗೆ ಒದಗಿ ಬರುತಲೆ ಸೇರಿಸುವರ್ಶೈ ವಿಷ್ಣು ಮಂದಿರ
ತೋರುವನು ನಿಂದಕರ ನಿಕರಕೆ ನಿರವಯನು ನಿತ್ಯ ೭

ಚಾರುತರದೀ ಹರಿಕಥಾಮೃತ ಸಾರಕೃತ ಋಷಿ ಭಾರದ್ವಾಜರು
ಸಾರ ಹೃದಯದಿ ನಿಂತು ಸಕಲ ಸು ಶಾಸ್ತ್ರದಾಲೋಕಾ
ಸಾರಿ ಸಾರಿಗೆ ಮಾಡಿ ಮಾಡಿಸಿ ಸೂರೆಗೊಟ್ಟಾನಂದ ಚಿನ್ಮಯ
ಪಾರವಾರಾಶಯನ ಶ್ರೀ ಕಮಲಾಪತಿ ವಿಠಲಾ ೮

## ೧೭೨

### ಧ್ರುವತಾಳ

ಮನವೆ ಚಿತ್ತೈಸುವದು ಭೋಜನ ಪ್ರಕ್ರೀಯವು
ಅನುವಾಗಿ ಪೇಳುವೆನು ವಿವರದಿಂದ
ಘನ ಘನ ವಾಕು ಕಾಯ ಮನದಿಂದ ನೀವಂಧಾ
ಅನ್ನಾದ್ಯ ಚೌಷ್ಯ ಲೇಹ್ಯ ಪೇಯವೆಂಬ ಚತುರನ್ನ
ಮನುಜರಿಗೊಪ್ಪುವದು ನಿತ್ಯದಲ್ಲಿ
ತೃಣ ಫಲವೆಂಬೋದನ ಪಶುಪಕ್ಷಿಗಳಿಗೆನ್ನು
ಮಿನುಗುವ ಸುರರಿಗೆ ಸ್ವಹಾವೆನ್ನು
ಮನದಿಂದಲಾ ಸ್ವಧಾ ಪಿತೃಗಳಿಗನ್ನವೆನ್ನು ಭು–
ವನದೊಳಗೆ ಇದೆ ಸಪ್ತಾನ್ನವೂ
ಇನಿದು ಓದನದೊಳು ಚತುರ ವಿಧ
ಅನ್ನವನು ಸುಜನರಿಗೆ ನೀಡಬೇಕಾದಡೆ
ಸು ನರರಲ್ಲಿರುತಿಪ್ಪ ಹರಿ ಮೂರ್ತಿಗಳು
ಕ್ಷಣ ಕ್ಷಣಕೆ ಚಿಂತಿಸಿ ಅನ್ನವನಿತ್ತವಗೆ
ವನಜನಾಭನ ಲೋಕ ಕರತಳಸ್ಥ ಸಿದ್ಧ
ಅನುಮಾನ ಮಾಡದಿರು ಹರಿಯಾ ಸಾಕ್ಷಿ
ವನಜಾಕ್ಷ ಕಮಲಾಪತಿ ವಿಠಲ ಎನ್ನ ಹೃದಯ
ವನರುಹದಲ್ಲಿ ನಿಂತು ನುಡಿಸಿದ್ದು ನುಡಿವೆನು ೧

### ಮಟ್ಟತಾಳ

ಸಿರಿ ಅಜಿತಾದ್ಯಾನಂತಾ ಪರಮುಖ ಬಹುರೂಪ
ವರ ಸಾಸಿರ ರೂಪ ನಾರಾಯಣ ಶತವು

ಅರಿ ಧರ ಅಜ ಏಕ ಅರ್ದ ಶತರೂಪ
ಸ್ಮರಿಸು ಕೇಶವ ಮುಖ್ಯ ಚತುರ ವಿಂಶತಿ
ಪರಮ ಶಕ್ತ್ಯಾ ದ್ವಾದಶರೂಪಗಳು
ಹರಿಯ ಮಚ್ಛಾದಿ ದಶ ಭಗವನ್ಮೂರ್ತಿಗಳು
ನಿರುತದಿ ಪೂರ್ವೋಕ್ತ ಕ್ರಮದಿಂದ ಸ್ಥೂಲ
ಶರೀರಕ್ಕೆ ಕವಚಾ ಕೃತಿಯಾಗಿಪ್ಪೋದು
ಮರಳೆ ಈ ಕವಚದ ವೊಳಗೆ ವಾಸುದೇವ
ವಿರಜೆ ಸಂಕರುಷಣ ಪ್ರದ್ಯುಮ್ನನಿರುದ್ಧಗಳಿ–
ರುವರೆ ಮೋದದಿ ಪಂಚಾವರಣವಾಗಿ ಹೋರು
ಅರಿವದು ಇವರೊಳಗೆ ತ್ರಿಗುಣಾತ್ಮಕ ತತ್ವ
ವಿರಿಂಚಿ ಮೃಡನಭವು ಮರುತಾಗ್ನಿ ಉದಕ
ಸರಸದಿ ತಿಳಿ ಸಪ್ತ ತತ್ವಗಳಾವರಣಾ
ನರರಾ ತನುವೆಂಬ ಪಿಂಡಾಂಡಕ್ಕೆಲ್ಲ
ಬೆರದಿಹುದು ವೊಳಗೆ ದಶಗುಣ ಕಡಿಮ್ಯಾಗಿ
ನರಸಖ ಕಮಲಾಪತಿ ವಿಠಲನ ದಯದಿಂದ
ಮೆರವುತಲಿಹ್ಯನೊ ವರಣೆಂದು ೨

## ತ್ರಿವಿಡಿತಾಳ

ಪದವಿಡಿದು ಶಿರತನಕ ಇಪ್ಪ ರೋಮಗಳಲ್ಲಿ
ಹುದುಗಿಪ್ಪೊದಯ್ಯಾ ನವ ಕೋಟಿ ರೂಪ
ಇದು ಕೇಳು ಕಟಿಯಿಂದ ಶಿರತನಕ ಇಹೊ ರೋಮ
ಸದನಗಳಲ್ಲಿ ಒಂದೊಂದು ತೀರ್ಥ
ಒದಗಿಪ್ಪೊರಲ್ಲಿ ಸುರರು ಮಾನಿಗಳೆನಿಸುತ್ತ
ಪೆದರಾದೆ ಸಾರ್ಧತ್ರಯ ಕೋಟಿ ಜನರು
ಚದುರ ಮಾನಿಗಳಲ್ಲಿ ತೀರ್ಥದಲ್ಲಿ ಸಹ
ಚದರಾದೆ ಏಳು ಕೋಡಿ ರೂಪವಿಹುದು
ಮೇದಸ್ಸು ಮುಖ ಸಪ್ತ ಧಾತುಗಳಲ್ಲಿ ನಿತ್ಯ
ಮದನನಯ್ಯಾ ಸಪ್ತ ರೂಪದಿಂದಿಹನೊ

ಇದರಾನಂತ ಸಪ್ತ ಧಾತುಗಳಲ್ಲಿ ಬಿ-
ಡದೆ ತತ್ವ ಸಹಿತ ಪಂಚ ಕೋಶವಿಹುದು
ಇದರಲ್ಲಿ ಪಂಚಲಕ್ಷ ಪಂಚಾಶತಿ ಸಹಸ್ರ
ಚತುಃಶ ಶತರೂಪದಿಂದಿಹದೊ
ಸುದತಿ ಸಹಿತ ಮೂವತ್ತು ನಾಲ್ಕು ಲ-
ಕ್ಷದಾ ಐವತ್ತಾರು ಸಾವಿರದ ನೂರಾವೊಂದು ಹದವರಿತು
ನಾಡಿಯಲಿ ರೂಪಗಳಿಹವೆಂದು
ಬುಧರು ಸ್ಮರಿಸಿ ಸುಖ ಬಡುವರ್‍ಯ್ಯಾ
ಸದಯದಿಂದಲಿ ಕೇಳು ದೇಹಸ್ಥ ನವಕೋಟಿ
ತತ್ವ ತತ್ವಾಭಿಮಾನಿಗಳಲ್ಲಿಪ್ಪ
ಪದುಮಜ ಪಿತ ಅಷ್ಟಾ ದಶಕೋಟಿ ರೂಪ-
ದಿಂದ ನಲಿ ನಲಿದಾಡುತಿಪ್ಪ ದೇಹದಲ್ಲಿ
ಮುದದಿಂದ ಸಾವಿರದ ಎಂಭತ್ತು ರೂಪ-
ದಿಂದ ಅಸ್ಥಿಪರ್ವ ಸಂಧಿಯಲಿ ವ್ಯಾಪಿಸಿಪ್ಪ
ಮಧುಸೂದನ ನಿತ್ಯ ಕರಣೋಪಕರಣದಲಿ ವಿ-
ಬುಧೇಶ ಐವತ್ತೆರಡು ಸಾವಿರದ ಅಧಿಕಾ-
ವಾದಾ ನೂರಾ ಮುವ್ವತ್ತಾರು ರೂಪ
ಸಿದ್ಧವಾಗಿಪ್ಪವಯ್ಯಾ ನಿರುತದಲಿ
ಪದುಮ ಬಾಂಧವ ಸಪ್ತ ವಿಂಶತಿ
ಪದುಮದಲ್ಲಿ ಮುನ್ನೂರಾ ಎಂಭತ್ತೆರಡು ರೂ-
ಪದಿಪ್ಪ ಹೃದಯದಲ್ಲಿಹ್ಯ ಪಂಚ ಕಂ-
ಜದಲಿಪ್ಪೊ ರೂಪ ಅಗಣಿತವಯ್ಯಾ ಸತತ ವಿ-
ಬುಧರಿಂದ ಮದಮತ್ಸರ ಬಿಟ್ಟು ಸ್ಥೂಲ ದೇಹದ ಕ್ರಮ
ಹದನವನು ತಿಳಿವಯವಗೆ ಹರಿವೊಲಿವ
ಇದರ ನಂತರ ಒಳ ಒಳಗೆ ಆವರಣಗಳು
ಪದರ ಪದರವಾಗಿ ಇರುತಿಪ್ಪೊವು
ಅದರ ವಿಚಾರವನು ಕಮಲಾಪತಿ ವಿಠಲ
ಸದಯಾದಿಂ ಪೇಳಿಸಿದ್ದು ಪೇಳುವೆನು ೩

## ಝಂಪಿತಾಳ

ಅನ್ನ ಪ್ರಾಣ ಚಕ್ಷು ಶ್ರೋತ್ರ ವಾಂಙ್ಮನೊ ವಿ–
ಜ್ಞಾನ ಆನಂದಮಯ ನಾರಾಯಣ
ರನ್ನ ವಾಸುದೇವ ಆವರಣ
ತನಕ ಇವು ಈರೈದು ಆವರ್ಣವೆನಿಸುತಲಿವು
ಘನ್ನ ಸ್ಥೂಲ ದೇಹ ಅದಿರುದ್ದ ದೇಹಗಳ ಮಧ್ಯದಲ್ಲಿ
ಚನ್ನಾಗಿ ಮಿನಗುವವು ಕವಚದಂತೆ
ತನ್ನಾಮ ತದ್ರೂಪದಿಂದ ಆವರಣದಲಿ
ಅನ್ನ ನಾಮಕ ಹತ್ತು ರೂಪದಿಹನೊ
ಚಿನ್ನ ಅನಿರುದ್ಧ ದೇಹದಲಿ ದೈತ್ಯರು ಎಲ್ಲ
ಸನ್ನಿಹಿತರಾಗಿಹರು ತ್ರಿದಶರಲ್ಲಿ
ಹನ್ನೆರಡು ನೂರಾ ಹತ್ತು ಅಧಿಕವೊಂದು ಲಕ್ಷ
ಸಣ್ಣ ಬಿಂದುಗಳಿಹವೊ ಅನಿರುದ್ಧದಿ
ಕನ್ಯ ಲಕುಮಿಯು ಅಭಿಮಾನಿಯೆನಿಸುತ ಲಕ್ಷ
ಹನ್ನೆರಡು ನೂರು ಹತ್ತು ರೂಪದಿಪ್ಪಳೊ
ಪನ್ನಗಾಶಯನ ಲಕುಮಿಯಲ್ಲಿ ಬಿಂದುಗಳಲ್ಲಿ
ಮುನ್ನೆ ಪೇಳಿದ್ದ ದ್ವಿಗುಣ ರೂಪದಿಹನೊ
ಇನ್ನು ಈ ದೇಹದಲಿ ಅನಿರುದ್ಧ ಪ್ರ–
ದ್ಯುಮ್ನ ಎರಡೆರಡು ಆವರಣದಿಂದೊಪ್ಪೊರೊ
ಪುಣ್ಯವಂತರು ಸಪ್ತ ಆವರಣದಲಿ ಸ್ಮರಣೆ–
ಯನ್ನೆ ಮಾಳ್ಪವದೇಳು ರೂಪಗಳನು
ಚೆನ್ನಾಗಿ ತಿಳಿವೊದೆ ಏಳು ಆವರ್ಣದಲ್ಲಿ
ಘನ್ನ ನಾಲ್ಕೊಂದು ಕೋಶ ಇಹದು ನಿತ್ಯ ಅ–
ಯಿನೂರು ಎಂಭತ್ತೈದು ಸಾವಿರ ಮ್ಯಾಲೆ
ನನ್ನೂರು ರೂಪ ಈ ಕೋಶದಿಹದು
ಮನ್ನಿಪುದು ಇಪ್ಪತ್ತನಾಲ್ಕು ತತ್ವಗಳು
ತನ್ಮಾನಿ ಸುರರು ಸಹ ಅಲ್ಲಿಪ್ಪರು
ಅನ್ವಯಿಸು ಒಬ್ಬೊಬ್ಬ ತತ್ವ ದೇವತೆಯಲ್ಲಿ
ಮುನ್ನೆ ಚತುರ್ವಿಂಶತಿ ತತ್ವಇಪ್ಪವೆಂದು

ಇನ್ನಿದೇ ರೀತಿಯಲಿ ಹರಿರೂಪ ಗುಣಿಸಲದು
ಅನ್ನಂತ ರೂಪಗಳುವೆನಿಸುತಿಹವು
ತನ್ನ ನಂಬಿದ ಜನಕೆ ಈ ಪರಿಯ ತಿಳಿಸುತಲಿ
ಬನ್ನ ಬಡಿಸದೆ ಪೊರೆವ ಕ್ಷಣ ಬಿಡದಲೆ
ಪನ್ನಗಾಚಲವಾಸ ಕಮಲಾಪತಿ ವಿಠಲ
ತನ್ನನಾಡುವನೆಂದು ಶ್ರುತಿ ಸ್ಮೃತಿಯು ಪೊಗಳುತಿದೆ ೪

## ರೂಪಕತಾಳ

ಮುದ್ದಾಗಿ ತಿಳಿವದು ಅನಿರುದ್ಧ ಪ್ರದ್ಯುಮ್ನ
ಸಿದ್ಧ ಸಂಕರುಷಣ ವಾಸುದೇವ ನಾರಾಯಣ
ಬದ್ಧಾಗಿ ವೊಳಗೆ ಆವರಣ ರೂಪದಲಿ
ಪೊದ್ದಿಹರೊ ನಿರುತದಿ ಪರಮ ಮೋದದಲಿ
ಚದ್ದುರಾ ಪರಮಾ ಜೀವಾಚ್ಛಾಧಿಕ ದ್ವಯದಲ್ಲಿ
ಸದ್ದು ಮಾಡದೆ ಅಷ್ಟಾದಶ ರೂಪದಿಹ್ಯನೊ
ಬುದ್ಧಿವಂತರು ಕೇಳಿ ಕಮಾವರಣದಲಿ
ಇದ್ದು ಅಷ್ಟ ಷಷ್ಟಿರೂಪದಲ್ಲಿ ಮೆರೆವ
ಹೆದ್ದೈವ ಶ್ರೀ ಹರಿಯು ಕಾಮಾವರಣದಲ್ಲಿ ತ್ರಯ ಷಷ್ಠಿ
ಸದ್ದರ್ಶನೇಯ ರೂಪದಲ್ಲಿಹ್ಯನೊ ಅ-
ವಿದ್ಯಾವರಣದಲ್ಲಿ ಏಳು ವಿಂಶತಿ
ಮದ್ದಾನೆ ತೆರ ಮೆರೆವ ರೂಪದಲಿ ತಾನು
ಶುದ್ಧ ಮನದಲಿ ತಿಳಿಯೊ ಅನಿರುದ್ಧ ತನುವಿನಿಂದ
ಖದ್ಯೋತ ವರ್ಣಾಭ ಅವ್ಯಕ್ತ ತನಕ
ಇದ್ದದ್ದು ನೋಡಲು ದಶ ಆವರಣ ಇಹವು
ಮುದ್ದು ಮೋಹನ ಸ್ವಾಮಿ ಕಮಲಾಪತಿ ವಿಠಲ
ನಿದ್ದುರ (ನಿದ್ರಾ) ದಲ್ಲಿರೆ ತಾ ತಿಳಿಸುವ ತನ್ನವಗೆ ೫

## ಅಟ್ಟತಾಳ

ಈರ ವಿಧಿ ವಾಣಿ ಭಾರತಿ ಇವರಿಂದ
ಬಾರಿ ಬಾರಿಗೆ ಸ್ತೋತ್ರ ಧೀರನು ಕೊಳ್ಳುತ್ತ

ಸಾರ ಅವ್ಯಕ್ತ ಸುಶರೀರದಲ್ಲಿ ಶತ
ಚಾರು ಸಪ್ತತಿ ನವ ಸ್ವರೂಪದಲ್ಲಿಪ್ಪ
ಮೀರಿದ ಲಿಂಗದಿ ನಾರಾಯಣ ತಾನು
ನಾರಿ ಸಹಿತ ಅರವತ್ತಾರೊಂದು ರೂಪದಿ
ಸೇರಿಪ್ಪನಿದರೊಳಗೆ ಮಾರ ಜನಕ ತನ್ನ
ಸ್ವರೂಪ ಜೀವಕ್ಕೆ ತೋರದಂತೆ ಈಶ್ವರೇಚ್ಛಾವರ್ಕವು
ಹಾರೈಸಿ ಮಾಡಿಹ ನೀರಜಾಕ್ಷ ತನ್ನ ಸಾರಿಗೆ ಬಂದಾಗ
ಭೂರಿ ಕೃಪೆಯ ಮಾಡಿ ತಾರತಮ್ಯದಿಂದ
ಘೋರ ಆವರ್ಕವು ತೀರ ಕಡಿಗೊತ್ತುವ
ಸಾರಸದಳಾಕ್ಷ ಕಮಲಾಪತಿ ವಿಠಲ
ಪಾರು ಮಾಳ್ಪ ಭವ ಕೂಪಾರದಿಂದ ೬

## ಆದಿತಾಳ

ದಾವ ಸ್ಥೂಲದಿಂದ ಸ್ವರೂಪ ಪರಿಯಂತರ
ಆವರ್ಕ ಯಿಪ್ಪತ್ತೈದು ಎನಿಸುವದರೊಳಗೆ
ಜೀವ ದೇಹದಲ್ಲಿ ಎರಡು ಅರ್ಬುದ ಶತ ನವ
ಪಾವನ್ನವಾದಂಥ ನರಸಿಂಹ ರೂಪವು
ತವಕದಲ್ಲಿ ನಿಂತು ಮೃತ್ಯುವಿಗೆ ಮೃತ್ಯುವೆನಿಸಿ
ಜೀವೋತ್ತಮನಿಂದ ಸೇವ್ಯ ಮಾನ್ಯನಾಗಿ
ಆವಾವ ಕಾಲದಲ್ಲಿ ಇರುತಿಪ್ಪನಲ್ಲದೆ
ಶ್ರೀವರನೆಂಬೊ ಅಂತರಾತ್ಮನು ಇಹೊ ಹೃದಯಾ
ದೇವೇಂದ್ರಾಭಿದ ವೈಕುಂಠವೆನಿಪದು
ಆವರಿಸಿಪ್ಪವಲ್ಲಿ ಭಾಗತ್ರಯಂಗಳು
ದೇವೋತ್ತುಮನಾದ ಮುಕ್ತ ಬ್ರಹ್ಮಾದಿಗಳಿಗೆ
ಆವ ಸ್ಥಳವೆಂದು ಶೃತಿಯು ಪೊಗಳುತಿದೆ
ಈ ವಿಧ ಸುರರೆಲ್ಲ ಇದ್ದ ಬಳಿಕ ಅಲ್ಲಿ
ದೇವವರೇಣ್ಯನ ರೂಪಗಳೆಂತು ಅರಿದು
ಅವಗಣನೆ ಮಾಳ್ಪ ಅಗಣಿತವೆನಿಪದು
ಜೀವ ತನುವಲಿಪ್ಪ ಮಹಿಮೆಯ ತಿಳಿಸೋದಕ್ಕೆ

ಕೋವಿದನೊಬ್ಬನಿಗೆ ಅನ್ನೋದಕವನು
ಭೂವರ ಧರ್ಮನಿಂದ ಕೊಡಿಸಿ ತದನಂತರ
ಆ ವಿಪ್ರನುಚ್ಛಿಷ್ಟ ತೆಗೆಯೆಂದು ಪೇಳಿದ್ದಕ್ಕೆ
ಧಾವಿಸಿ ತೆಗೆದದು ಕೊನೆಯಗಾಣದಿರೆ
ಹಾವಭಾವ ನೋಡಿ ಧರ್ಮರಾಜನ ಬಿಡಿಸಿ
ತಾ ವೊಲಿದು ತೆಗೆದು ಮಹಫಲ ತಂದಿತ್ತನು
ಈ ವಿಧ ಮತಿಯಿಂದ ಆವರ್ಕಗಳರಿತು
ಕೋವಿದರಲ್ಲಿಪ್ಪ ರಮಾಯುತ ರೂಪಗಳು
ಝಾವ ಝಾವಕೆ ತಿಳಿದು ಚಿಂತನೆ ಪೂರ್ವಕ
ಸಾವಧಾನದಿ ಉದಕ ಅನ್ನಾದಿ ಕೊಟ್ಟರು
ಮೌನದಿ ಮನೆಯಲ್ಲಿ ನಿತ್ಯ ತಾ ವುಂಡರು
ಆ ವಿಪ್ರನ ಪುಣ್ಯ ಇಷ್ಟೆಂದು ಗಣನಿಗೆ
ಆವಂಗು ಬಾರದು ತಿಳಿ ಕಂಡ್ಯಾ ಮನವೆ ನೀ–
ಸಾರ್ವಭೌಮ ಹರಿ ಎಡಬಿಡದಿಪ್ಪವನಲ್ಲಿ
ಜೀವೇಶ ಕಮಲಾಪತಿ ವಿಠಲ ಪ್ರಾಂತ್ಯಕ್ಕೆ
ತಾ ವೀವ ತನ್ನ ನಿಲಯ ಪರಮ ಸಂತೋಷದಿಂದ ೭

**ಜತೆ**

ಭೋಜನೆಂಬ್ಯಾಜನಾ ನಿರ್ವ್ಯಾಜದಿಂದಲಿ ನಡಿಸೆ
ಭೋಜ ಕಮಲಾಪತಿ ವಿಠಲನವರಲ್ಲಿಪ್ಪ ॥

## ೧೭೩

## ಗಣೇಶ ಸ್ತೋತ್ರ

ಗಣಪತೇ ಎನ್ನ ಪಾಲಿಸೋ – ಗಂಭೀರಾ ಪ

ಪಾರ್ವತಿ ನಂದನ ಸುಂದರ ವದನ
ಶರ್ವಾದಿ ಸುರವಂದ್ಯ ಶಿರಬಾಗುವೆನು ೧

ಆದಿ ಪೂಜಿತ ನೀನು ಮೋದ ಭಕುತರಿಗಿತ್ತು
ಮಾಧವನಲಿ ಮನ ಸದಾ ನಿಲಿಸು ನೀ ೨

ಪಂಕಜ ನಯನ ವೆಂಕಟ ವಿಠಲನ
ಕಿಂಕಿರನೆನಿಸೆನ್ನ ಶಂಕರ ತನಯನೆ ೩

## ೧೭೪

## ಭಗವಂತನ ಸಂಕೀರ್ತನೆ

ಚೆಂದವೇನೇ ಗೋಪಿ ಚೆಂದವೇನೇ
ನಿನ್ನ ಮಗನ ದುಡುಕು – ಚೆಂದವೇನೇ ಪ

ಚೆಂದದಿಂದಲಿ ಅರವಿಂದಾಕ್ಷ ಬೆಣ್ಣೆಯ
ತಿಂದು ಬೇಗದಿ ಕೃಷ್ಣ ಬಂದೋಡಿ ನಿಂತನೆ ೧

ಸದ್ದು ಮಾಡದೆ ಪಾಲು ಕದ್ದು ನಮ್ಮನೆಯೊಳ
ಗಿದ್ದ ಸ್ತ್ರೀಯರನೆಲ್ಲ ಮುದ್ದಾಡಿ ಪೋದನೆ ೨

ಚೋರನೆನಿಸಿಕೊಂಬ ಧೀರ ವೆಂಕಟವಿಠ್ಠಲ*
ವಾರಿಜಾಕ್ಷನ ಪಾದ ಸೇರಿದೆ ನಾನೀಗ ೩

೧೭೫

## ಲಕ್ಷ್ಮೀದೇವಿ ಸ್ತೋತ್ರ

ಎಂದು ಬರುವಳೋ ಗೋ–
ವಿಂದನೊಲ್ಲಭೆ ಲಕ್ಷ್ಮೀ ರಂಗನ ಸನ್ನಿಧಿಗೆ ಪ

ಮಂಗಳಾಂಗಿ ಸರ್ವಾಂಗ ಬಳಲಿ ಮುಖ
ಕಂದಿ ಕಳೆಗುಂದಿದಂತೆ । ಬಲು ವ್ಯಥೆಯಂತೆ ಅ.ಪ

ಶೇಷನ ಶಿಖಿ ಮ್ಯಾಲೆ
ವಾಸುದೇವರು ಲಕ್ಷ್ಮೀ ಸಮೇತರಾಗಿರುತಿರಲು
ಆ ಸಮಯದಿ ಭೃಗುಮುನಿ ಬಂದು ಕೋ–
ಪಿಸೆ ಸೋಕಿಸಿದನು ಪಾದವಾ । ವಕ್ಷ ಸ್ಥಳವಾ ೧

ಥಟ್ಟನೆ ಇಳಿದಾಳು
ಸಿಟ್ಟಿನಿಂದಲಿ ಬಹು ಧಿಕ್ಕಾರ ಮಾಡಿದಳು
ಲಕ್ಷ್ಮೀರಮಣನೆಂಬೊ ಬಿರುದು ನಿಮಗೆ ಈ
ಹೊತ್ತಿಗೆ ಅಲ್ಲೆಂದಾಳು । ತೆರಳಿದಳು ೨

ನಿಲ್ಲದೆ ಪೊರಟಾಳು
ಫುಲ್ಲಾಕ್ಷಿ ಮನದೊಳು ತಲ್ಲಣಿಸುತಿರಲು
ವಲ್ಲಭನರಿಯದ ಸ್ಥಳವಿಲ್ಲದಿರೆ ತಾಯಿ
ಕೊಲ್ಲಾಪುರಕೆ ಬಂದಾಳು । ನೆಲೆಗೊಂಡಾಳು ೩

ಜಾತೆ ಬಾ
ಮಾರನ ಮಾತೆ ಬಾ ವಾರಿಜದಳನೇತ್ರೆ ಬಾ
ಮೂಲೋಕದೊಳಗೆ ನೀ ಪ್ರಖ್ಯಾತೆ ಬಾರೆಂದು ಶ್ರೀಮ-
ನ್ನಾರಾಯಣನೆ ಕರೆಯಲು । ನಸುನಗೆಯೊಳು ೪

ಜಯ ಲಕ್ಷ್ಮೀರಮಣಗೆ
ಜಯ ಶ್ರೀನಿವಾಸಗೆ ಜಯ ಮೋಕ್ಷದಾಯಕಗೆ
ಜಯತು ಕೊಲ್ಹಾಪುರದೊಳ್ ನೆಲಸಿದವಳಿಗೆ
ಶ್ರೀದೇವಿಯಳಿಗೆ ೫

ವೆಂಕಟ ವಿಠಲ
ವೈಕುಂಠಪತಿ ಲಕ್ಷ್ಮೀ ಶಾಂತ ಏಕಾಂತದೊಳು
ಶಂಖಚಕ್ರಧರ ಸರ್ವಮಂಗಳಕಾರ
ಸಂಚಿತಾಗಮದೂರನು ಮಲಗಿರುವನು ೬

## ೧೭೬

## ಹನುಮಂತದೇವರ ಸ್ತೋತ್ರ

ಬಿಡುವೇನೇನಯ್ಯಾ ಹನುಮ ನಿನ್ನ
ಬಿಡುವೇನೇನಯ್ಯಾ ಪ

ಬಿಡುವೇನೇನೋ ಹನುಮ ನಿನ್ನ
ಅಡಿಗಳಿಗೆ ಶಿರವ ಕಟ್ಟಿ (ಎರಗುವೆ ನಾನು)
ದೃಢ ಭಕ್ತಿ ಸುಜ್ಞಾನವನ್ನು
ತಡಮಾಡದಲೆ ಕೊಡುವೋ ತನಕ ಅ.ಪ

ಹಸ್ತವ ಮ್ಯಾಲಕೆ ಎತ್ತಿದರೇನು
ಹಾರಗಾಲ ಹಾಕಿದರೇನು

ಭೃತ್ಯನು ನಿನ್ನವನು ನಾನು
ಹಸ್ತಿ ವರದನ ತೋರೋ ತನಕ ೧

ಹಲ್ಲು ಮುಡಿಯ ಕಟ್ಟಿದರೇನು
ಗುಲ್ಲು ಮಾಡಿದರಂಜುವನಲ್ಲ
ಫುಲ್ಲನಾಭ ಲಕುಮೀಲೋಲನ
ಇಲ್ಲಿಗೆ ತಂದು ತೋರುವ ತನಕ ೨

ಡೊಂಕು ಮೋರೆ ಬಾಲವ ತಿದ್ದಿ
ಹುಂಕರಿಸಿದರೆ ಅಂಜುವನಲ್ಲ
ಕಿಂಕರನು ನಿನ್ನವನೋ ನಾನು
ವೆಂಕಟವಿಠಲನ ತೋರುವ ತನಕ ೩

## ೧೭೭

## ವಾದಿರಾಜರ ಸ್ತೋತ್ರ

ಇದಿರ್ಯಾರೋ ಗುರುವೆ ಸಮರ್ಯಾರೋ ಶ್ರೀ ಹಯ
ವದನ ಪದ ಪ್ರಿಯ ವಾದಿರಾಜ ಪ

ಸಿರಿನಿಲಯನ ಗುಣಗಳ ಸ್ಮರಿಸುತ
ಗುರು ಮಧ್ವ ಮುನಿಪನ ಮಹಿಮೆಯ ಪೊಗಳುತ
ನೆರೆದಿದ್ದ ಮಾಯ್ಮದ ಕರಿಗಳ ಶಿರವನು
ಭರದಿ ಛೇದಿಪ ಬಲಿ ವಿಬುಧ ಕೇಸರಿಯೆ ೧

ಹರಿ ತತ್ತ್ವ ಸಾರ ಸಜ್ಜನರಿಗೆ ತಿಳಿಯದೇ
ಪರಿಪರಿ ಕುಸಮಯ ತಮ ಕವಿಯಲು ನೀ
ಸರಸ ಭಾರತಿ ಮೊದಲಾದ ಗ್ರಂಥಗಳನು
ವಿರಚಿಸಿ ತಮ ಹರಿಸಿದ ದಿನಕರನೇ ೨

ಸೋದೆಯ ಪುರದಲ್ಲಿರುವ ಹಯವದನನ
ಮೋದದಿ ಭಜಿಸುತ ಈ ಧರೆಯೊಳ್ ಪೂರ್ಣ
ಬೋಧ ತೀರ್ಥರ ಪಾದಸೇವಕರಿಗೆ
ಆದರ ಮಾಳ್ಪ ಯತಿಕುಲ ಶಿರೋಮಣಿಯೇ ೩

ಮುದ್ದು ಲಕ್ಷ್ಮೀಶ ವೆಂಕಟ ವಿಠ್ಠಲನ
ಹೊದ್ದಿದ ಭಕ್ತರ ಸಂತಾಪ ಕಳೆಯುತ
ಮಧ್ವಮುನಿಯ ಮತ ದುಗ್ಧವಾರಿಧಿಯೊಳು
ಉದ್ಭವಿಸಿದ ಪೂರ್ಣ ಶುದ್ಧ ಚಂದ್ರಮನೇ ೪

## ೧೭೮

## ಪುರಂದರದಾಸರ ಸ್ತೋತ್ರ

ಶ್ರೀ ಪುರಂದರದಾಸರಾಯ ನಿಮ್ಮ
ಶ್ರೀ ಪಾದ ಪದ್ಮಕ್ಕೆ ಎರಗುವೆನು ಸಲಹೆಮ್ಮ ಪ

ಸುರಮುನಿಯು ನಾರದರೆ ಹರಿಯಾಜ್ಞದಿಂದ ಶ್ರೀ
ಪುರಂದರಾ ಗಡದಲ್ಲಿ ಅವತರಿಸಿದೆ
ತರುಣಿ ಮಕ್ಕಳು ಕೂಡೆ ಪರಮ ಸೌಖ್ಯದಲಿರುತ
ಹರುಷದಲಿ ಮನೆಧನವ ಭೂಸುರರಿಗರ್ಪಣೆ ಮಾಡ್ದೆ ೧

ಆದಿಕಾರಣ ನೀವು ದಾಸಮಾರ್ಗಕೆ ಪ್ರ–
ಹ್ಲಾದನವತಾರ ಶ್ರೀ ವ್ಯಾಸಮುನಿಯಾ
ಪಾದಕೆ ನಮಿಸಲುಪದೇಶವನು ಕೈಕೊಂಡು
ಮೋದತೀರ್ಥರ ಚರಣ ನಾದದಿಂದಲಿ ತುತಿಪೆ ೨

ಅದ್ವೈತ ಮತವ ಕಾಲಿಲೊದ್ದು ಶ್ರೀ ಗುರು
ಮಧ್ವ ಸಿದ್ಧಾಂತವನು ಮಾಡಿದ

ಶುದ್ಧ ಭಕ್ತಿ ಜ್ಞಾನ ವೈರಾಗ್ಯ ಪರರಾಗಿ
ಮಧ್ವ ವಲ್ಲಭನ ಪದ ಹೃದ್ಗುಹದಿ ಪೂಜಿಸುವ ೩

ಹರಿ ಸರ್ವೋತ್ತಮನೆಂದು ಧರೆಯೊಳಗೆ ನೀವು ಡಂ–
ಗುರವ ಹೊಯ್ಸಿ ಮೆರೆವ ಶ್ರೀ ಗುರುವರ್ಯರೆ
ತರತಮವು ಪಂಚಭೇದ ಸತ್ಯವೆಂದು ಪೇಳಿ
ಹರಿಪುರವ ಸಾರ್ದ ಶ್ರೀ ಪುರಂದರರಾಯ ೪

ತತ್ತ್ವ ಶೋಧನ ಮಾಡಿ ತತ್ತ್ವೇಶರನು ತಿಳಿದು
ತತ್ತತ್ಕಾಲಕೆ ಮಾಳ್ಪ ಕರ್ಮಗಳನಾ
ಉತ್ತಮ ಶ್ಲೋಕ ಪುರುಷೋತ್ತಮನಿಗರ್ಪಿಸಿ
ಮುಕ್ತಿ ಮಾರ್ಗವ ಪಿಡಿದೆ ಅತ್ಯಂತ ಮಹಾಮಹಿಮ ೫

ಎರಡ್ಹೊತ್ತು ನಾಲ್ಕು ತತ್ತ್ವದ ವಿಚಾರವ
ಅರುಹು ಹರಿಯೆ ದೈವ ಸಿರಿ ಬ್ರಹ್ಮ ವಾಯು
ಗರುಡ ಭುಜಂಗ ಮಾರಹರ ಇಂದ್ರ ಸುರರೆಲ್ಲ
ತರತಮದಿ ದಾಸರೆಂಬುವ ಜ್ಞಾನ ಕರುಣಿಸುವುದು ೬

ದಾಸವರ್ಯರೆ ವಿಜಯದಾಸರಾಯರಿಗುಪ
ದೇಶಿಸಿದ ಪುರಂದರದಾಸರಾಯ
ಶೇಷಗಿರಿವಾಸ ವೆಂಕಟ ವಿಠ್ಠಲನ ನಿಜ
ದಾಸರಾ ದಾಸನೆಂದೆನಿಸೆನ್ನ ೭

## ೧೭೯

## ರಾಘವೇಂದ್ರ ಸ್ವಾಮಿಗಳ ಸ್ತೋತ್ರ

ವೃಂದಾವನ ನೋಡಿರೋ – ಗುರುಗಳ
ವೃಂದಾವನ ಪಾಡಿರೋ ಪ

ವೃಂದಾವನ ನೋಡಿ - ಆನಂದ ಮದವೇರಿ
ಚೆಂದದಿ ದ್ವಾದಶ ಪೌಂಡ್ರಾಂಕಿತಗೊಂಬ ಅ.ಪ

ತುಂಗಭದ್ರಾ ನದಿಯ ತೀರದಿ ಇದ್ದ
ತುಂಗ ಮಂಟಪ ಮಧ್ಯದಿ
ಶೃಂಗಾರ ತುಲಸಿ ಪದ್ಮಾಕ್ಷ ಸರಗಳಿಂದ
ಮಂಗಳಕರ ಮಹಾ ಮಹಿಮೆಯಿಂದೊಪ್ಪುವ ೧

ದೇಶ ದೇಶದಿ ಮೆಚ್ಚುತ - ಇಲ್ಲಿಗೆ ಬಂದು
ವಾಸವಾಗಿ ಸೇವಿಪ
ಭಾಷೆ ಕೊಟ್ಟಂದದಿ ಬಹುವಿಧ ವರಗಳ
ಸೂಸುವ ಕರ ಮಹಾಮಹಿಮೆಯಿಂದೊಪ್ಪುವ ೨

ನಿತ್ಯ ಸನ್ನಿಧಿ ಸೇವಿಪ - ಭಕ್ತರಿಗೆಲ್ಲ
ಮತ್ತಭೀಷ್ಟವ ಕೊಡುತ
ಪತ್ಯಾಧಿಗುಣ ಸಿಂಧು ವೆಂಕಟವಿಠ್ಠಲನ
ನಿತ್ಯ ಸನ್ನಿಧಿಯಿಂದ ನಿರುತ ಪೂಜೆಯಗೊಂಬ ೩

## ೧೮೦

## ವಿಜಯದಾಸರ ಸ್ತೋತ್ರ

ನಂಬಿದೆ ನಾ ನಿನ್ನ ಚರಣಕಮಲವನ್ನು ವಿಜಯರಾಯ ಪ

ಬೆಂಬಿಡದಲೆ ವಿಷಯ ಹಂಬಲ ಬಿಡಿಸಯ್ಯ ವಿಜಯರಾಯ ಅ.ಪ

ತಾಯಿ ಎಳೆಯ ಶಿಶುವನು ಬಿಟ್ಟಿರುವುದುಂಟೆ ವಿಜಯರಾಯ
ಬಾಯ ಬಿಡುವೆ ನಾ ಭವದಲ್ಲಿ ಸಿಗಬಿದ್ದು ವಿಜಯರಾಯ

ನೋಯಲಾರೆನೂ ಎನ್ನ ಕಾಯೊ ಕರುಣದಿಂದ ವಿಜಯರಾಯ
ಕಾಯ ಮನವು ನಿನ್ನ ಚರಣಕ್ಕೊಪ್ಪಿಸಿದೆನೊ ವಿಜಯರಾಯ ೧

ಎತ್ತಗಾಣದೆ ಕರ್ಮ ಕತ್ತಲೆಯೊಳು ಸುತ್ತಿ ವಿಜಯರಾಯ
ತತ್ತಳಗೊಳುತಿಪ್ಪೆ ಎತ್ತಿರೊ ಎನ್ನ ವಿಜಯರಾಯ
ಪೆತ್ತ ತಂದೆಗೆ ಮಗ ಭಾರವಾಗುವುದುಂಟೆ ವಿಜಯರಾಯ
ವಿತ್ತ ಭಾಗ್ಯವನೊಲ್ಲೆ ಎಂದೆಂದಿಗೂ ನಾನು ವಿಜಯರಾಯ ೨

ತುಂಬಿದ ಭಂಡಾರ ಸಂಪತ್ತು ಎನಗೆಂದು ವಿಜಯರಾಯ
ಹಂಬಲಿಸುತ ಬಲು ಸಂಭ್ರಮದಿರುತಿಪ್ಪೆ ವಿಜಯರಾಯ
ಸಂಬಳಕಾರ ಶಿಷ್ಯ ನಿನಗಲ್ಲ ಕೇಳಯ್ಯ ವಿಜಯರಾಯ
ಬಿಂಬ ಶ್ರೀ ವೆಂಕಟ ವಿಠ್ಠಲನ ತೋರೊ ನೀ ವಿಜಯರಾಯ ೩

## ೧೮೧

## ಪ್ರಾಣೇಶದಾಸರ ಸ್ತೋತ್ರ

ಪ್ರಾಣೇಶ ದಾಸಾರ್ಯರ ಭಜಿಪರಿಗೆ
ಏನೇನು ಭಯವಿಲ್ಲವೊ
ಸಾನುರಾಗದಲಿಂದ ಜ್ಞಾನ ಭಕುತಿಯಿತ್ತು
ಶ್ರೀನಿವಾಸನ ಪಾದ ಕಾಣಿಸುವರು ನಿತ್ಯ ಪ

ದಾಸರೊಳಗ್ರೇಸರಾ ಜಗನ್ನಾಥ
ದಾಸಾಖ್ಯ ಗುರುವರರ
ಏಸೇಸು ಕಾಲ ಸೇವಿಸುತವರಲ್ಲಿದ್ದು
ಲೇಸಾಗಿ ಮುದ್ರೆ ಪ್ರಾಣೇಶ ವಿಠ್ಠಲನೆಂದು
ತೊಷದಿಂದಲಿ ಕೊಂಡು ಶ್ರೀ ಜಗ–
ದೀಶ ಗುಣಗಳ ಕವನ ರೂಪದಿ

ದೇಶ ದೇಶದಿ ಮೆರೆಸಿ ಕರುಣವ
ಸೂಸುತಿಪ್ಪರು ಭಕ್ತ ಜನರಿಗೆ ೧

ಶ್ರೀ ರಂಗ ಪದಗಳರಾವಿಂದದಿ ಮನ
ಆರಡಿಯಂತೆ ಧೀರಾ
ಸೇರಿಸಿ ಜಪಗಳ ಪೂರೈಸುತಿಹರು
ಪೂರಕಾದಿಗಳಿಂದ ಕ್ರೂರರಾರ್ವರ ಗೆದ್ದೂ
ತೋರುವರು ತತ್ವಧಿಪ ಸುರರಿಗೆ
ಪ್ರೇರಕನು ಶ್ರೀಹರಿಯೇ ಇನ್ನೋ-
ಬ್ಬಾರು ಇಲ್ಲೆಂದೆನುತ ಇಹ ಸಂ-
ಸಾರದಲಿ ಆಚರಿಸುತಿಪ್ಪರು ೨

ಭೂಮಿಯೊಳವತರಸೀ ಸರ್ವದ ಮ-
ಹಾಮಹಿಮನ ಸ್ಮರಿಸಿ
ಹೇಮಾದಿಗಳು ಪರ ಕಾಮಿನಿಯರುಗಳ-
ಲೀ ಮನವಿಡದೆ ಶ್ರೀರಾಮಧ್ಯಾನದಿ ಬಲು
ಪ್ರೇಮದಿಂದಲಿ ಲಯವ ಚಿಂತಿಸಿ
ಕಾಮಪಿತ ವೆಂಕಟ ವಿಠಲನಡಿ
ತಾಮರಸಗಳ ಧೇನಿಸುತ ಹರಿ-
ಧಾಮವನು ಸಾರಿದರು ಹರುಷದಿ ೩

## ಆತ್ಮನಿವೇದನೆ

### ೧೮೨

ಏನು ಕಾರಣವೆನಗೆ ತಿಳಿಯಲಿಲ್ಲ
ದೀನ ರಕ್ಷಕನಾದ ಹರಿಯೆ ತಾ ಬಲ್ಲ ಪ

ಕಾನನದೊಳಗೆ ಕಡುತಪಿಸಿ ತೃಷಿಯಾದವಂಗೆ
ತಾನಾಗೆ ಮೋಡೊಡ್ಡಿ ಮೇಘ ಕವಿದು
ನಾನು ಧನ್ಯನೆಂದು ನರ್ತಿಸುವ ಸಮಯದಲಿ
ಕಾಣದೇ ಪೋಯಿತು ಬಿಂದು ಮಾತ್ರ ೧

ವರುಷದಿಂದಲಿ ನಿಮ್ಮ ದರುಶನಾಕಾಂಕ್ಷಿಸಿ
ಪರುಶರಾಮನ ಪಾದ ಭಜನೆಯನ್ನು
ಹರುಷದಲಿ ಪಾಡಿ ಹಗಲಿರುಳು ಪ್ರಾರ್ಥಿಸುವಂಗೆ
ಪುರುಷಾರ್ಥ ಪೂರೈಸಿ ಬಾರದಿಪ್ಪ ಬಗಿಯು ೨

ಅನ್ನಾದಿಯಿಂದ ಅನ್ನಂತ ಜನ್ಮದಿ ಬಂದು
ಉನ್ನಂತ ಮಾಡಿದ ಪಾಪರಾಶಿ–
ಯನ್ನು ಉಣದನಕ ಭೂವನ್ನದೊಳು ಮತ್ತೆ ಪಾ–
ವನ್ನರಾ ಪಾದಗಳು ಪಡೆಯಲರಿಯದೊಯೇನೊ ೩

ಅನ್ನಾಥ ಬಂಧು ಹರೆಯೆನ್ನುವಾ ಬಿರುದಿಗೆ
ನಿನ್ನಂಥ ಮಹಿಮನಾ ಕರೆದು ವೊಂದೂ
ಎನ್ನಂಥ ಪರಮ ಪಾತಕಿಯನುದ್ಧರಿಸಿತಾ–
ಸನ್ನಗೊಳಿಸಿ ಸತತ ಸಲಹದಿಹುದು ಏನು ೪

ಅರಸಿನಾಲೋಚನಿಯು ಸತತ ಸನ್ನಿಧಿಯೊಳನು–
ಸರಿಸಿದ ಆಳುಗಳು ಬಲ್ಲ ತೆರದಿ
ಸರಸಿಜ ನಯನ ವೆಂಕಟ ವಿಠಲನ ಪಾದ
ಸರಸಿಜದಿ ಸರಸರೊಳು ನಲಿದು ನೀ ಬಾರದಿಹುದು ೫

ಹೆಜ್ಜೆ ಹೆಜ್ಜೆಗೂ

ಪಾಪೋಸು – ಒಂದು ಬಗೆಯ ಪಾದರಕ್ಷೆ (ನಿಘಂಟಿನ ಅರ್ಥ) ಪಾಪ + ಓಸು = ಅಷ್ಟೂ ಪಾಪಗಳು (ಪ್ರಾದೇಶಿಕ ಅರ್ಥ) (ಶ್ಲೇಷಾಲಂಕಾರದ ಬಳಕೆ)

**ಬ**

ಬ್ಯಾಗಡಿ – ಬಂಗಾರ ವರ್ಣದ ಮಿಂಚುವ ಕಾಗದ

**ಮ**

ಮರಾಳ – ಹಂಸ

ಮಾತಿ – ಮಾತೆ

ಮಿಸುನಿ – ಚಿನ್ನ

ಮೋರೆ – ಮುಖ

**ವ**

ವಿರಿಂಚಿ – ಬ್ರಹ್ಮ

ವ್ಯೋಮಕೇಶ – ಶಿವ

**ಶ**

ಶ್ರೀ ಧರಣಿ – ಶ್ರೀದೇವಿ, ಭೂದೇವಿ

**ಸ**

ಸಾರಮೇಯ – ಶ್ವಾನ

ಸುಪರ್ಣ – ಉತ್ತಮವಾದ ಗರಿಗಳನ್ನು ಹೊಂದಿರುವವನು, ಗರುಡ

ಸುಪರ್ಣ ವಾಹನ– ವಿಷ್ಣು

**ಹ**

ಹಂಚು – ಕಾವಲಿ, ತವ

## ಶ್ರೀವೇಣುಗೋಪಾಲದಾಸರ ಕೃತಿಗಳು

**ಅ**

ಅಂಗಸಿಂಗ – ನರಸಿಂಹ ರೂಪಿ

ಅಪನಿಯ – ಮನಃಪೂರ್ವಕ

ಅರುಣನಿಭನೆ – ಸೂರ್ಯಕಿರಣದಂತೆ ಹೊಳೆಯುವ

ಅಷ್ಟ ಮದಗಳು – ಧನ, ಕುಲ, ವಿದ್ಯೆ, ರೂಪ, ಯೌವ್ವನ, ಬಲ, ಪರಿವಾರ ಹಾಗೂ ಅಧಿಕಾರ

ಅಹಿಪದಿ – ಹಾವುಗಳು

**ಇ**

ಇಂದ್ರಾನುಜ – ಉಪೇಂದ್ರ, ವಿಷ್ಣು

ಇನ – ಸೂರ್ಯ

**ಊ**

ಊರ್ಮಿ – ಭೂಮಿ

**ಕ**

ಕಾಕುಗೊಳಿಸು – ನೀಚನನ್ನಾಗಿಸು

| | |
|---|---|
| | ವದು, ತುಚ್ಛ ಗೊಳಿಸುವದು |
| ಕಕ್ಷಕ್ರಮ | – ತಾರತಮ್ಯದ ಪ್ರಕಾರ |
| ಕಾವಳ | – ಕತ್ತಲೆ, ಮಂಜು |

**ಖ**

ಖತಿ – ಸಿಟ್ಟು, ಕ್ರೋಧ

ಖ್ಯಾಪಿ – ಖ್ಯಾತಿ

**ಗ**

ಗಿರಿವೈರಿ – ಇಂದ್ರ

**ಚ**

ಚಾಲವರಿ – ದೈನ್ಯದಿಂದ ಬೇಡು

**ತ**

ತತು – ಅದರಂತೆ

ತನಿಸಲಾ – ಹೆಚ್ಚಾಗಿ ಮಾಡುತ್ತಿರಲು

ತುಂಗಳೆ – ಶ್ರೇಷ್ಠಳೆ

ತುಡುಕಿ – ಮುನ್ನುಗ್ಗಿ

**ದ**

ದನುಜೇಂದ್ರ – ರಾಕ್ಷಸರೊಡೆಯ

ದುಷ್ಟಾಸಿ – ದುಷ್ಟ ವಿಚಾರ, ದುಷ್ಟ ಆಸೆಗಳು

**ನ**

ನಿಭ – ಸಮಾನನಾದ

ನಿದ್ರೆ – ಅಜ್ಞಾನ

ನಿವಿಷ್ಟನ – ದೂರ ಮಾಡುವವ

**ಪ**

ಪರಣ – ಹರಣ – ಪ್ರಾಣ, ಜೀವ

ಪೀಯೂಷ – ಅಮೃತ

**ಬ**

ಬಲದೇವಾನುಜ – ಬಲದೇವನ ತಮ್ಮ, ಕೃಷ್ಣ

ಬಿಸಜ ಮಿತ್ರ –

ಬಿಸಜ – ಕಮಲ

ಮಿತ್ರ – ಸೂರ್ಯ

ಭ್ರುಕುಟಿ–

ಪಿತನೊಡೆಯ – ವಿಷ್ಣು

**ಮ**

ಮಕ್ಷಕ – ದುಷ್ಟ

**ರ**

ರುತು – ಝೇಂಕರಿಸು

ಋತು – ಸತ್ಯ

ರೇಣು – ಧೂಳು

**ವ**

ವಕ್ಷಮಾನರಲ್ಲಿ – ಜ್ಞಾನಿಗಳಲ್ಲಿ

ವಾತಜಾತ – ವಾಯುದೇವರ ಮಗ, ಆಂಜನೇಯ

ವಿನುತಸುತ – ವೈನತೀಯ,

ಗರುಡ

ವಿರಿಂಚಿ – ಬ್ರಹ್ಮ

ವ್ರಜತಾಧಿಪ – ಕೃಷ್ಣ

## ಶ

ಶಕಟ – ಬಂಡಿ, ಒಬ್ಬ ರಾಕ್ಷಸ

ಭಂಜನ – ಕೊಂದವನು, ಕೃಷ್ಣ

ಶಕಲ – ಅಲ್ಪ, ದಾಸ

## ಸ

ಸಪ್ತ ಋಷಿಗಳು – ವಿಶ್ವಾಮಿತ್ರ, ಜಮದಗ್ನಿ, ಭಾರದ್ವಾಜ, ಗೌತಮ, ಅತ್ರಿ, ವಸಿಷ್ಠ ಹಾಗೂ ಕಶ್ಯಪ

ಸಪ್ತದ್ವೀಪಗಳು – ಜಂಬೂ, ಪ್ಲಕ್ಷ, ಶಾಲ್ಮಲಿ, ಕುಶ, ಕ್ರೌಂಚ, ಶಾಕ ಹಾಗೂ ಪುಷ್ಕರ

ಸಪ್ತಸಾಗರಗಳು – ಲವಣ, ಇಕ್ಷು (ಕಬ್ಬಿನ ಹಾಲು), ಸುರಾ(ಮದ್ಯ), ಸರ್ಪಿಸ್(ತುಪ್ಪ), ದಧಿ(ಮೊಸರು), ಕ್ಷೀರ(ಹಾಲು) ಹಾಗೂ ಜಲ

ಸಾಕಲ್ಯ – ಸಂಪೂರ್ಣ

ಸಾಮನಸೀಮನ – ಶಾಂತಿಯಲ್ಲಿ ನಿಸ್ಸೀಮ

ಸಾಸಿರ ವತ್ಸರ – ಸಾವಿರ ವರ್ಷ, ಸಾವಿರ ಸಂವತ್ಸರ

ಸೋಮನ – ಚಂದ್ರನಂತೆ ಆಹ್ಲಾದದಾಯಕನ

## ಹ

ಹಕಲಗೊಳಿಸಿದೆ – ದೋಷಗಳೆಣಿಸಿದೆ

ಹೀನ ಪೂಯಾವ– ದುಷ್ಟಸಂಗ

ಹೃಷ್ಟಪುಷ್ಟ – ಸಮೃದ್ಧ

## ಕ್ಷ

ಕ್ಷುಧಿ – ಬಾಯಾರಿಕೆ

# ಶ್ರೀವ್ಯಾಸವಿಠಲರ ಕೃತಿಗಳು

## ಅ

ಅಂಬುಚರಗೆ – ನೀರಿನ ಸೆಳವು (ಸಂಸಾರವೆಂಬ ನೀರು)

ಅಣುಗ – ಪ್ರೀತಿಗೆ ಪಾತ್ರ ನಾದವನು, ಮಗ

ಅನಘ – ಪಾಪರಹಿತ

ಅರ್ಭಕ – ಚಿಕ್ಕದು, ಎಳೆಯ ಕೂಸು

ಆಗಮವಾಕ್ಯ – ವೇದವಾಕ್ಯ

ಆಪನ್ನ – ಹೊಂದಿದ

## ಇ

ಇಭರಾಜವರದ – ಇಭ – ಆನೆ. ಗಜೇಂದ್ರ ವರದ

## ಉ

ಉರುಟಣೆ – ಹೊಸ ದಂಪತಿಗಳೊಳಗಿನ ಆಟ

## ಕ

ಕಂದು ಕಂಧರ – ಕಂದು – ಕೆಂಪು ಮಿಶ್ರವಾದ ಕಪ್ಪು

ಕಂಧರ – ಕೊರಳು

ಕಂಬು – ಶಂಖ

ಕರ್ಬುರ – ಕಲಿ, ದೈತ್ಯ

ಕವಲಬುದ್ಧಿ – ಚಂಚಲಬುದ್ಧಿ

ಕ್ರತು – ಯಜ್ಞ

ಕಾಸುವೀಸ – ಕಾಸು – ತಾಮ್ರದ ಸಣ್ಣ ನಾಣ್ಯ, ಹಣ

ವೀಸ – ಒಂದು ನಾಣ್ಯ ಸ್ವಲ್ಪ

## ಗ

ಗಭಿರ – ಗಂಭೀರ, ಆಳವಾದ, ರಹಸ್ಯವಾದ, ಪರಿಚಯಕ್ಕೆ ಅಸಾಧ್ಯವಾದ

ಗುಣತ್ರಯ – ಸತ್ವ, ರಜ, ತಮ

## ಚ

ಚಿದಾತ್ಮಕ – ಜ್ಞಾನಸ್ವರೂಪವಾದುದು

## ಜ

ಜೂಟನುಳುಹಿದ – ಜೂಟ – ಜಟ್ಟು, ಜಡೆ, ತ್ರಾಣವುಳ್ಳ

## ತ

ತಂಬಲಾಪಾಣಿ – ಬೊಗಸೆ ಒಡ್ಡಿ ಬೇಡುವದು

ತೋಂಡ – ಆಳು

ತೋಯಜ – ಕಮಲ

ತ್ರಿಗುಣರಹಿತ – ಸತ್ವ, ರಜ, ತಮಗಳಿಲ್ಲದ ನಾರಾಯಣ

ತ್ರಿಯಂಬಕ – ರುದ್ರ, ಶಿವ

## ದ

ದಿತಿ ಸುತಾಂತಕ – ದಿತಿ – ಕಶ್ಯಪ ಋಷಿಯ ಪತ್ನಿ : ಸುತ – ಹಿರಣ್ಯಕಶಿಪು : ಅಂತಕ – ನಾಶ ಮಾಡಿದವ : ವಿಷ್ಣು

ದೋರ್ದಂಡ – ತೋಳು

## ನ

ನಿರಯ – ನರಕ

## ಪ

ಪರಾಕು – ಎಚ್ಚರಿಕೆ, ಕಡೆಗಣಿಸುವಿಕೆ,

ಅಲಕ್ಷ್ಯ,
ಹೊಗಳಿಕೆ,
ಸ್ತುತಿ

ಪರಿಚ್ಛೇದ – ವಿಂಗಡಿಸುವಿಕೆ, ಸರ್ಗ, ಅಧ್ಯಾಯ, ನಿರ್ಧಾರ

ಪಿನಾಶ – ಶಿವನ ಕೈಯ ತ್ರಿಶೂಲ

ಫುಲ್ಲನಾಭ – ಫುಲ್ಲ – ಅರಳಿದುದು, ಹೂ

ನಾಭ – ಹೊಕ್ಕಳು, ಹೊಕ್ಕಳಲ್ಲಿ ಹೂವುಳ್ಳವ, ವಿಷ್ಣು

ಪ್ರಣತ – ಬಾಗಿದ, ನಮಸ್ಕರಿಸಿದ

## ಬ

ಭಾವಜ – ಮನ್ಮಥ

## ಮ

ಮುಚಕುಂದಾ – ಸೂರ್ಯವಂಶದ ಒಬ್ಬ ರಾಜ, 'ಕಾಲಯವ' ಎಂಬ ದೈತ್ಯನನ್ನು ಕೊಂದವನು

## ಯ

ಯಮ ನಿಯಮ
ಅಷ್ಟಾಂಗ ಅಣುಮಾದಿಗಳು –

ಅ. ಪ್ರಣಾಮದ : ಉರಸ್ಸು, ಶಿರಸ್ಸು, ದೃಷ್ಟಿ, ಮನಸ್ಸು, ಶ್ರದ್ಧೆ, ಪಾದಗಳು ಕರಗಳು,ಕರ್ಣಗಳು

ಆ. ಯೋಗದ : ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ.

## ವ

ವೃಜನ – ಪಾಪ, ಪಾಪಕರ್ಮ, ಮರದ

ವ್ಯೋಮಕೇಶ–
ನೊಡಿಯಾ –

ವ್ಯೋಮಕೇಶ – ಆಂಜನೇಯ

ಒಡೆಯ – ನಾರಾಯಣ

## ಶ

ಶಂಬರಾರಿ – ರುದ್ರ, ಶಿವ

ಶತಕಲ್ಪ – ನೂರುವರ್ಷ, ಬ್ರಹ್ಮನ ಒಂದು ದಿವಸ

ಶಿಂಶುಮಾರ – ಧ್ರುವ ಮಂಡಲವೇ ಮೊದಲಾದ ಸಕಲ ಮಂಡಲ ಗಳಿಗೂ ಆಶ್ರಯಭೂತ ವಾಗಿ, ಕಣದೊಳ ಗಣ ಮೇಟಿಯ ಮರದಂತೆ ಇದೆ.

## ಸ

ಸಂಕೇರುಹೇಕ್ಷ - ಸಂಕೇರುಹ - ಕೆಸರಿನಲ್ಲಿ ಹುಟ್ಟಿದುದು, ತಾವರೆ

ಸಾಮಜ - ಆನೆ

ಸಾಲೋಕ್ಯ - ಯಾವಾಗಲೂ ಇಷ್ಟದೈವದ ಎದುರಿಗೆ ಇರುವಿಕೆ, ಮೋಕ್ಷದ ನಾಲ್ಕು ಪ್ರಕಾರ ಗಳಲ್ಲಿ ಒಂದು

ಸ್ಥಾವಿರಾಯ - ಸ್ಥಿರವಾಗಿ ಉಳ್ಳವನು, ಪರಮಾತ್ಮ

## ಹ

ಹವಣ - ಪ್ರಮಾಣ, ಸಂಧಿ, ಸಮಯ, ಯೋಗ್ಯ ಸಂದರ್ಭ

ಹೇಯೋಪಾದೇಯ -

ಹೇಯ - ಬಿಡಲು ಯೋಗ್ಯ ವಾದುದು, ಅಲ್ಪ, ತ್ಯಾಜ್ಯ

ಉಪಾದೇಯ - ತೆಗೆದುಕೊಳ್ಳಲು ಯೋಗ್ಯವಾದುದು.

# ಶ್ರೀಗುರುವಿಜಯವಿಠ್ಠಲರ ಕೃತಿಗಳು

## ಅ

ಅಪ್ರತಿ - ಎಣೆಯಿಲ್ಲದ, ಬಹಳ ಹೆಚ್ಚಿನ

ಅನುಜರಾದವರಲಿ– ನಕುಲ, ಸಹದೇವರು

ಅತಿ ವ್ಯಾಮಾ ಪ್ರೀಯಾ - ಅತ್ಯಂತ ಪ್ರಿಯ

ಅಘ - ದುಃಖ, ಪಾಪ

ಅಮಸ್ಥಿತಿ - ವಿಘ್ನ ಬಂದರೂ ಶಿಥಿಲವಾಗದೇ ಇದ್ದ, ದೃಢವಾದ

ಅಂಶಿಗೆ - ಮೂಲರೂಪಕ್ಕು

ಅವ್ಯವಧಾನ - ತಡಮಾಡದೆ

ಅನಪೇಕ್ಷದಿ - ಆಪೇಕ್ಷಿಸದಲೆ, ಬಯಸದಲೆ

ಅನಾವೃಷ್ಟಿ ಮಯವಾದ ಭೂಮಿ - ಮಳೆಬಂದರೂ ಬಿತ್ತಲಿಕ್ಕೆ ಯೋಗ್ಯವಾಗದ ಭೂಮಿ

ಅಭಾವಜ್ಞಾನಿ - ಅಜ್ಞಾನಿ

ಅಧಿಷ್ಠಾನ - ಆಧಾರ, ತಳಹದಿ

ಅಪಾಂಗದೃಷ್ಟಿ - ಕಡೆಗಣ್ಣ ನೋಟ

ಅಜ - ಬ್ರಹ್ಮ

ಅಂಶಕ್ಕೆ - ಅವತಾರ ರೂಪಕ್ಕೂ

## ಆ

ಆರೂಢ – ಏರಿದ
ಆಪಜಾಸನ – ಕಮಲಾಸನ (ಬ್ರಹ್ಮ)
ಆಪನ್ನರ – ಹೊಂದಿದವರ

## ಈ

ಈಪ್ಸಿತ – ಆಸೆ

## ಉ

ಉನ್ನತ ಭಕ್ತ – ಬ್ರಹ್ಮದೇವರು
ಉಪಗೂಢ – ಎನ್ನೊಳಗೆ ಗುಪ್ತನಾಗಿರುವ ಮಹಾಕರುಣಾ ಸಮುದ್ರನೆ : ಕಣ್ಣಿಗೆ ಕಾಣಿಸದಿದ್ದ, ಗುಪ್ತನಾಗಿದ್ದ
ಉಪಸ್ಪರ್ಶದಿ – ಸಮೀಕ್ಷಿಸು, ಮುಟ್ಟುವುದರಿಂದ

## ಕ

ಕೈವಲ್ಯ – ಮೋಕ್ಷ
ಕರುಣೆ – ಗುಪ್ತವಾದ ಕಾರುಣ್ಯಸಾಗರ, ಆಲಂಗಿತವಾದ ಕಾರುಣ್ಯ, ದಯಾಲಿಂಗತನ
ಕುಪತಿ – ಕು–ಭೂಮಿ, ಭೂಮಿಪತಿ, ರಾಜ ನುಡಿದ ಕ್ರಮದಂತೆ
ಕ್ಲಿಪ್ತ – ನಿಶ್ಚಿತ, ಗೊತ್ತು ಮಾಡಿದ
ಕಲ್ಪ – ಬ್ರಹ್ಮನ ಒಂದು ದಿವಸ, ಸಹಸ್ರ ಯೋಗ, ಪ್ರಳಯ, ವೇದದ ಒಂದು ಅಂಗ :
ಕಾಕುದರನನ್ಪೂ – ಶೇಷನ ಅಯ್ಯ ಅಧಿಪತಿ : ಶೇಷಶಾಯಿ
ಕೇಡು – ಕೇಡು, ಕೆಟ್ಟಕರ್ಮ
ಕುಜನ – ಕೆಟ್ಟಜನ, ದುರ್ಜನ
ಕುಂಭಿಣಿ – ಭೂಮಿ
ಕಂದುಕಂಧರ – ನೀಲಕಂಠ : ಮಹಾರುದ್ರ ದೇವರು
ಕಂಟಕಾರಿ – ಪಾದರಕ್ಷೆ, ಕೆರಹು
ಕಿಂಜಲ್ಕ – ಹೂವಿನ ಕುಸುರು
ಕೃತ್ಯಾಭಿಮಾನಿಗಳು – ಕ್ರಿಯೆ ತತ್ತ್ವ ಕಾರ್ಯಮಾಡುವ ತತ್ತ್ವಾಭಿಮಾನಿ ದೇವತೆಗಳು

## ಖ

ಖಪತಿ – ಭಗವದ್ರೂಪ, ಖಂ=ಖ ಪತೇ ನಮಃ

## ಗ

ಗಾಢವಾದ – ಅತಿಶಯ, ಬಹಳವಾದ

ಗಾಡಿಕಾರ – ಸೋಸುಗಾರ ; ಚೆಲುವ ; ಎನ್ನ ದೇಹಾಖ್ಯ ಬಂಡಿ ನಡೆಸುವವ

## ಚ

ಚಿನ್ಮಯ – ಪರಬ್ರಹ್ಮ

ಚಂಡಾರ್ಕ – ತೀಕ್ಷ್ಣವಾದ ಕಿರಣಗಳುಳ್ಳವ ಸೂರ್ಯ

## ಜ

ಜೀವನ್ಮುಕ್ತಾ – ಹುಟ್ಟುವಿಕೆಯಿಂದ ಬಿಡುಗಡೆ, ಮೋಕ್ಷ

## ತ

ತ್ರೈತಾಪ – ಅಧಿಭೂತ, ಅಧ್ಯಾತ್ಮ, ಅಧಿದೈವ

ತ್ರಿವಿಧ ಕರಣ – ಮಾತು, ಮನಸ್ಸು ಮತ್ತು ದೇಹ

ತರುಸ್ಥಿತ – ಗಿಡ, ಮರ

ತಂದೆಲೋಕ – ಐತಿಹಾಸಿಕ ; ಇಂದ್ರಲೋಕ

ತೋಷ – ಆನಂದ ; ತೃಪ್ತಿ

## ದ

ದನುಜ – ರಾಕ್ಷಸ

ದಾಯಿಗಾರರು – ವೈರಿಗಳಾದ ; ದಾಯಾದಿಗಳು, ದಾಳಿಗಾರರು

ದಂಧನ – ದಹಿಸದಲೆ ; ಪಾಪಗಳಿಂದ ಬಾಧಕವಾಗದಂತೆ

ದಶರೂಪ – ಜೀವರಿಗೆ ಪ್ರೇರಿಸುವ ಶ್ರೀಹರಿರೂಪಗಳು

## ನ

ನಿಖಿಳ – ಶೇಷವಿಲ್ಲದ, ಸಕಲ

ನೋಯನೀಯನೆ – ನ ಕರ್ಮಾಣಾ ವರ್ಧತೇ ನೋಯನೀಯಾ, ಸಾಧನರಹಿತ ನಿತ್ಯಪೂರ್ಣಕಾಮ ;

ನಿಸ್ತ್ರೈಗುಣ್ಯ – ಸತ್ವರಜತಮೋ ಗುಣ ಬಂಧ ದೂರ

ನಿರುಪಮ – ಸಾಟಿಯಿಲ್ಲದ

ನಿರ್ಹಣ – ಪೂರೈಕೆ ಅಥವಾ ನಾಶ, ಪರಿಹಾರ್ಯ

ನಿರ್ಜರ – (ಜರಾ– ಮುಪ್ಪು) ಮುಪ್ಪಿಲ್ಲದ ; ದೇವತೆ ; ಅಮೃತ

ನಿಗ್ರಹಕೆ – ಸ್ವೀಕಾರ ಮಾಡದಿರುವಿಕೆ,

ಭರ್ತ್ಸನಕ್ಕೆ
ನಿವೃತ್ತಿವರ್ತ್ಮ – ಕಡೆಹಾಯುವ, ಬಿಡುಗಡೆಯ ಮಾರ್ಗ, (ವರ್ತ್ಮ–ಮಾರ್ಗ)
ನಿರ್ಭರ – ಸಂಪೂರ್ಣಭಾರ, ಬಹಳ, ಅತಿಶಯ
ನಿರ್ಘಣತನ – ದಯಾಶೂನ್ಯ, ನಿರ್ದಯ
ನಿರ್ಭಾರಕ – ಸಂಪೂರ್ಣ, ಭಾರವಹಿಸುವ,
ನುಡಿ ಅಂಬು – ವಾಕ್ಯವೆಂಬ ಬಾಣ
ನಾಖತಿ – ಶಾಂತಿ (ಖತಿ– ಕೋಪ, ಸಿಟ್ಟು)
ನಮ ನಮಮ – ನಾನಲ್ಲ, ನನ್ನದಲ್ಲಿ
ನಿರ್ದಯವಾದ ಖಣಿ – ನೀನು ದಯಾಪರ ನಾದರೂ ನಿರ್ದಯ ಉತ್ಪತ್ತಿಗೆ ಸ್ಥಾನನಾದಿ
ನಾ ಅಸತು – ಸತ್ಪದಾರ್ಥ ದಿಂದ ಭಿನ್ನ, (ನಾ ಅಸತು – ಶಶಿ ವಿಷಾಣಾದಿ ಅಸತ್ತ್ವ ಪದಾರ್ಥ ದಿಂದ ಭಿನ್ನ ; ಮೂರ್ತಾಮೂರ್ತ ಪದಾರ್ಥಗತ ; ಮೂರ್ತಂ – ಪದತಿ ಸಂಪ್ರೋಕ್ತಮ ಮೂರ್ತಂ ತ್ವ ಸದುಚ್ಯತೆ)
ನಿರ್ಘಣವೃತ್ತಿ – ಅಂತಃಕರುಣ ಶೂನ್ಯ, ಕಟುಕ
ನೀರಧಿ – ಸಮುದ್ರ
ನಿಕ್ಷೇಪ – ಗುಪ್ತಧನ, ಇಡು ಗಂಟು ಇಡಲ್ಪಟ್ಟ ದ್ರವ್ಯ
ನಿಶಿತಿ – ತೀಕ್ಷ್ಣವಾದ
ನಿರ್ಘರ್ಣಾದಿ – ದಯಾಶೂನ್ಯ, ನಿರ್ದಯ

## ಪ

ಪಂಚಪ್ರಾಣ – ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ
ಪರಾಂಙ್ಮುಖ – ವಿಮುಖ, ತಿರುಗಿಸಿದ ಮುಖ
ಪ್ರವರ್ತಿ – ಕಾರ್ಯ ನಡೆಸುವ
ಪ್ರಾರಬ್ಧ – ವಿಧಿ, ದೈವ
ಪರಿತೋಷ – ಅತ್ಯಂತ ಆನಂದ
ಪ್ರಾಕಾಮ್ಯಾದಿ – ಇಚ್ಛಿಸಿದ ಕಾರ್ಯ ನೆರವೇರಿಸುವ ಒಂದು ಸಿದ್ಧಿ
ಪ್ರೀಣ – ತೃಪ್ತನಾಗು, ಸಂತುಷ್ಟನಾಗು
ಪರಿಭ್ರಮಣ – ಸುತ್ತುವುದು
ಪಿತೃ ಸಮಾನ ರೆಂಬೋ ದ್ವಯರು – ಅಣ್ಣಂದಿರಾದ ಧರ್ಮ, ಭೀಮಸೇನ ದೇವರು
ಪಂಚಮುಖ – ಸದ್ಯೋಜಾತ, ವಾಮದೇವ ಅಘೋರ,

ತತ್ಪುರುಷ, ಈಶಾನ ಎಂಬ ಪರಶಿವನ ಐದು ಮುಖಗಳು

ಪಂಚಾಗ್ನಿ - ಪವನ (ಆವಸಥ್ಯ), ಪಾವನ (ಸಭ್ಯ) ತ್ರೇತಾ (ದಕ್ಷಿಣಾಗ್ನಿ), ಗಾರ್ಹಪತ್ಯ, ಆಹವನೀಯ

ಪ್ರತಿತಿ - ಸಮೂಹ

ಪರಿಯಾಪ್ತ - ಪೂರ್ಣ

ಪಂಚಕೋಶಗಳು- ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ

ಪೂಯಲೆಸಹ - ಏಳು ನಾಯಕ ನರಕಗಳಲ್ಲಿ ಒಂದು

ಪ್ರತಿಹತ - ಎದಿರೇಟು, ಕೆಳಕ್ಕೆ ಬಿದ್ದ

## ಬ

ಬಿನಗು - ಕ್ಷುದ್ರವಾದ, ಅಲ್ಪ, ನೀಚ

ಬಧಿರ - ಕಿವುಡ

## ಭ

ಭವ - ಶಿವ

ಭ್ರುಕುಟಿ - ಸಿಟ್ಟಿನಿಂದ ಗಂಟಿಕ್ಕಿದ ಹುಬ್ಬಿನವ, ಮರುದ್ರದೇವರು, ಭೂಭ್ರಂಗಿ

ಭೃತ್ಯ - ಸೇವಕ, ಆಳು

ಭೂರುಹ - ಮರ, ಗಿಡ, ತರುಸ್ಥಿತ, ಭೂರುಹಸ್ಥಿತ, ಜಡಸ್ಥಾವರ ಜೀವ, ನಿಯಾಮಕ ಹರಿ ಮರಗಳಂತೆ ಫಲ ಕೊಡು

ಭೂತಿ - ಪಾರಲೌಕಿಕ ಸಂಪತ್ತು, ಕಾಂತಿ

ಭಂಜನ - ಒಡೆಯುವುದು

ಭಾವಾಧೀಶ - ಸರ್ವಾಂತರ್ಯಾಮಿ

## ಮ

ಮಾತರಿಶ್ವ - ಆಕಾಶದಲ್ಲಿ ಚಲಿಸುವುದು, ಗಾಳಿ ;

ಮಲತಮರುಹು - ಪಾಪದಿಂದ ಕೂಡಿದ ಅಜ್ಞಾನ

ಮಲತ ಮಲ್ಲರ ಗಂಡ -ಎದುರಿಲ್ಲದ ಬಲಿಷ್ಠರಾದ ಜಟ್ಟಿಗಳ ಗಂಡ, ಭೀಮಸೇನ

ಮುಕ್ತಾರ್ಥ - ಸಂಸಾರದಿಂದ ಬಿಡುಗಡೆ ಹೊಂದಲು ಮಹಾವಟಿಕೆಗೆ

ಸ್ವಹಲೋಲ - ಮಹಾಕಾಡು, ಅರಣ್ಯಕ್ಕೆ ಅಗ್ನಿ

ನೀನೆ
ಮಖ – ಯಜ್ಞ

## ಯ

ಯ ಃ ಪ್ರಾಣ–
ದಾತಿ ಮದ್ಭಕ್ತ – ಇದೆ ಶ್ರುತಿ ಇದೆ. ಇದರ ಅರ್ಥ ಯಾವಾತನು ತನ್ನ ಭಕ್ತರಿಗೆ ಪ್ರಾಣ ಸದೃಶನೋ, ಅಂದರೆ, ಬಿಡದೆ ಇರುವವನೊ.

## ರ

ರಜನಿಯ ಚರರು –(ರಜನಿ – ಕತ್ತಲು) ರಾತ್ರಿ ಚರಿಸುವವರು, ದೈತ್ಯರು

## ವ

ವಾಜಪೇಯ – ಒಂದು ಬಗೆಯ ಯಜ್ಞ
ವರಲುತಿವೆ – ಹೊಗಳುತಿವೆ
ವಾರುಣಿ – ಪಶ್ಚಿಮ, ಮಧ್ಯ
ವಿಮಲ – ಕಲ್ಮಶವಿಲ್ಲದ, ಸ್ವಚ್ಛ
ವೈಶೇಷ – ಷಡ್ದರ್ಶನಗಳಲ್ಲಿ ಒಂದು ;
ವೈಶೇಷಕ – ವೈಶೇಷಕವನ್ನು ಅನುಭವಿಸುವವ
ವೈಖಾನಸ ವಂದ್ಯ– ಬ್ರಹ್ಮಾದಿದೇವತೆಗಳಿಂದ ವಂದ್ಯ
ವಿಖನಸಾಂಡ – ಬ್ರಹ್ಮಾಂಡ
ವಿಕತ – ಪ್ರಚಂಡ, ವಿಕಾರವಾದ, ಭಯಂಕರವಾದ
ವಿಲಯ – ನಾಶ
ವ್ಯವಹಿತ – ಬೇರೆ ಇರುವವನಾಗಿ, ದೂರನಾಗಿ
ವಿತತ ಪ್ರಖ್ಯಾತ – ವಿಸ್ತಾರವಾದ, ಸಕಲ ಬ್ರಹ್ಮಾಂಡಗಳಲ್ಲಿ ಪ್ರಖ್ಯಾತನಾದವನಿಗೆ
ವಿಶಿಖಾತಲ್ಲಾದಕ್ಕಿಂತ –ಬಾಣದಿಂದ ಆದಗಾಯ ;
ವ್ಯಭಿಚಾರವಾಗದೇನೋ– ಅಸಂಗತ, ಸ್ಥಾಯಿಯಲ್ಲದ
ವೈಶೇಷ – ಅಶೇಷಕಾರಣ, ಅನುಗ್ರಹ
ವೀತಿಹೋತ್ರ – ಅಗ್ನಿ
ವನ – ನೀರು
ವಿರಿಂಚ – ಬ್ರಹ್ಮ
ವಿಹಿತ – ಯೋಗ್ಯ, ಇಟ್ಟ, ಹೊಂದಿಸಿದ

## ಶ

ಶುಂಭಿಣಿ – ಭೂಮಿ
ಶಂಕರ – (ಶಂ+ಕರ) ಸುಖಕರ, ಮಂಗಳಕರ
ಶೇಷ – ಸಾಧಾರಣಾ ಕಾರಣ ಅನುಗ್ರಹ ;
ಶಣಿಸಲಿಬೇಡ – ದುಃಖಪಡಿಸಲಿ

ಬೇಡ

ಶರತಲ್ಪ – ಬಾಣಗಳ ಹಾಸಿಗೆ (ಮಂಚ)

## ಷ

ಷೋಡಶ ಉಪಚಾರ–ದೇವರು ಇಲ್ಲವೆ ಅತಿಥಿಗೆ ಅರ್ಪಿಸುವ ಹದಿನಾರು ಬಗೆಯ ಉಪಚಾರಗಳು : ಅ. ಆವಾಹನ, ಆಸನ, ಪಾದ್ಯ, ಅಷ್ಟರ, ನೈವೇದ್ಯ, ಆಚಮನ, ಫಲ, ತಾಂಬೂಲ, ಸ್ನಾನೋದ್ವರ್ತನ, ವಸ್ತ್ರ, ಉಪವೀತ, ಗಂಧ, ಪುಷ್ಪ, ಧೂಪ, ದೀಪ. ಪ್ರದಕ್ಷಿಣೆ ; ಆ. ಆಸನ, ಸ್ವಾಗತ, ಪಾದ್ಯ, ಅಷ್ಟರ, ಆಚಮನೀಯ, ಮಧುಪರ್ಕ, ಆಚಮನ, ಸ್ನಾನ, ವಸನ, ಆಭರಣ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ವಂದನೆ.

ಷೋಡಶ ಮಹಾದಾನ –ಗೋ, ಭೂ, ಹಿರಣ್ಯ, ವಸ್ತ್ರ, ಆಭರಣ, ಛತ್ರ, ಚಾಮರ, ಶಯ್ಯೆ, ವ್ಯಜನ,ಸಾಲಗ್ರಾಮ, ಧನ, ಧಾನ್ಯ, ದೀಪ, ಪಾದುಕ, ಆಜ್ಯ, ಕನ್ಯೆ.

ಷಡ್ರಸ – ಸಿಹಿ, ಕಹಿ, ಒಗರು, ಉಪ್ಪು, ಖಾರ, ಹುಳಿ ಎಂಬ ಆರು ರುಚಿಗಳು

ಷಾಡ್ಗುಣ್ಯ – ಷಡ್ಗುಣ : ಸಂಧಿ, ವಿಗ್ರಹ, ಯಾನ ಆಸನ, ದ್ವೈದೀಭಾವ, ಸಂಶ್ರಯಗಳೆಂಬ ರಾಜನೀತಿಯ ಆರು ನಿಯಮ ಗಳು : ಐಶ್ವರ್ಯ, ಜ್ಞಾನ, ಯಶಸ್ಸು, ಸಂಪತ್ತು, ವೈರಾಗ್ಯ, ಧರ್ಮಗಳೆಂಬ ಆರು ಲಕ್ಷಣಗಳು.

## ಸ

ಸಧಿ – ಸಲುಗೆ

ಸಪ್ತದ್ವಯಲೋಕ– ಭೂಲೋಕ, ಭುವರ್ಲೋಕ, ಸ್ವರ್ಲೋಕ, ಮಹರ್ಲೋಕ,

ಜನೋಲೋಕ,
ಸಪ್ತಲೋಕ +
ಸಪ್ತ ಪಾತಾಳಗಳು

ಸುಮ್ಮನಸರು – ದೇವತೆಗಳು, ಶುದ್ಧವಾದ ಮನಸ್ಸುಳ್ಳವರು

ಸಿಂಧುಜಾದ್ಯ – ಲಕ್ಷ್ಮ್ಯಾದಿಗಳು

ಸೊಲಗಿ – ಒಂದು ಅಳತೆ : ಸೇರು

**ಹ**

ಹಾಟಕ – ಚಿನ್ನ

ಹೃಷ್ಟ – ಸಂತೋಷಗೊಂಡ

**ಕ್ಷ**

ಕ್ಷಪಿಸು – ಕ್ಷಮಿಸು

ಕ್ಷಿತಿಪ – ಅರಸ

ಕ್ಷಿಪಣರು – ದೀನರು

## ಶ್ರೀಕೇಶವವಿಠಲರ ಕೃತಿಗಳು

**ಆ**

ಆನಿ – ಆನೆ (ಕೀರ್ತನೆ)

**ಇ**

ಇಕ್ಕು – ಹೊಡಿ (ಪ್ರಾದೇಶಿಕ ಪದ) (ಕೀ)

**ಎ**

ಎತ್ತ – ಯಾವ ಕಡೆಗೆ (ಕೀ)

**ಒ**

ಒಡಿಯ – ಒಡೆಯ, ದೊರೆ. (ಉಗಾಭೋಗ)

**ಜ**

ಜಿನಸು ಜಿನಸು – ವಿಧ ವಿಧವಾದ (ಪ್ರಾದೇಶಿಕ ಪದ) (ಕೀ)

**ಮ**

ಮಿಕ್ಕ – ಉಳಿದ, ಇತರ (ಕೀ)

ಮಿಡುಕದ – ಅನುಕಂಪ ಪಡೆದ (ಉಗಾ)

**ಯ**

ಯೇಸು – ಎಷ್ಟು (ಪ್ರಾದೇಶಿಕ ಪದ) (ಕೀ)

**ರ**

ರಕ್ಕಸಾಂತಕ – ರಕ್ಕಸ – ರಾಕ್ಷಸ : ಅಂತಕ – ಯಮ (ಕೀ)

ರೊಕ್ಕ – ಹಣ, ದುಡ್ಡು (ಕೀ)

**ವ**

ವಾತಜಾತ – ವಾಯುವಿನ ಮಗ, ಆಂಜನೇಯ (ಕೀ)

## ಸ

ಸತ್ತಿ – ಛತ್ರಚಾಮರ (ಕೀ)

## ಶ್ರೀಕಮಲಾಪತಿವಿಠ್ಠಲರ ಕೃತಿಗಳು

ಅಷ್ಟಾದಶ – ಹದಿನೆಂಟು
ಎಂತು – ಹೇಗೆ
ಓದನ – ಅನ್ನ, ಓಗರ
ಕೂಪಾರ – ಸಾಗರ, ಸಮುದ್ರ
ಖದ್ಯೋತ – ಸೂರ್ಯ, ಮಿಂಚುಹುಳ
ಝಾವಝಾವಕೆ – ಕಾಲಕಾಲಕ್ಕೆ
ಫುಲ್ಲಲೋಚನೆ – ಹೂವಿನಂಥ ಕಣ್ಣುಳ್ಳವಳು
ವನರುಹ – ನೀರಿನಲ್ಲಿ ಹುಟ್ಟಿದುದು, ತಾವರೆ
ವಿಂಶತಿ – ಇಪ್ಪತ್ತು
ವಿಪ್ರ – ವೇದಮಂತ್ರ ಗಳನ್ನು ಪಠಿಸು ವವನು, ಬ್ರಾಹ್ಮಣ, ಜ್ಞಾನಿ, ಕಿರಣ, ದರ್ಭೆ, ಕುಶ
ವಿಬುಧೇಶ – ವಿಬುಧ – ದೇವನೆ :
ಈಶ – ಒಡೆಯ, ವಿಷ್ಣು
ಶ್ರೀಕಳತ್ರ – ಲಕ್ಷ್ಮೀಯ ಪತಿ ; ವಿಷ್ಣು
ಸದಯ – ದಯೆ, ಕರುಣೆ, ದಯದಿಂದ ಕೂಡಿದವನು
ಸುದತಿ – ಸುಂದರವಾದ ಹಲ್ಲುಳ್ಳವಳು ; ಸುಂದರಿ : ಲಕ್ಷ್ಮೀ
ಸ್ತಂಭ – ಕಂಬ
ಸ್ವಾಂತತಿ – ಸಂತತ, ಸತತ
ಹದನ – ಪದನು, ತೀಕ್ಷ್ಣತೆ, ಹರಿತವಾದುದು

## ಶ್ರೀವೆಂಕಟೇಶವಿಠ್ಠಲರ ಕೃತಿಗಳು

ಆದಿ – ಮೊದಲಾಗಿ
ಏಸೇಸು ಕಾಲ – ಎಷ್ಟೆಷ್ಟು ಕಾಲ
ದುಗ್ಧ ವಾರಿಧಿ – ದುಗ್ಧ – ಹಾಲು,
ಫುಲ್ಲನಾಭ – ಫುಲ್ಲ = ಹೂವು ನಾಭಿಯಲ್ಲಿ ಹೂವುಳ್ಳವ, ವಿಷ್ಣು
ಭುಜಂಗ – ಸರ್ಪ, ಡೊಂಕಾಗಿ ಚಲಿಸಬಹುದು
ಮೋಡೊಡ್ಡಿ – ಮೋಡವನ್ನು ಒಡ್ಡಿ
ವಾರಿಧಿ – ಸಾಗರ
ಶರ್ವಾದಿ – ಶರ್ವ = ಶಿವ, ಶಂಕರ

ನಿತ್ಯ ನೈಮಿತ್ಯಕವ ಮಾಡಿ ದಿವಿಜರ ಪತಿಯ
ಚಿತ್ತ ಸಂಪಾದಿಸುವರ
ಮತ್ತ ಗಜದಂತೆ ದುರ್ಮತಿಗಳೆಂಬ ಕದಳಿಯನು
ಕಿತ್ತಿ ಈಡಾಡುತಿಹರಾ ಇವರ ||೧||

ಗುರುಗಳಾ ಪಾದುಕವ ಶಿರದಲ್ಲಿ ಧರಿಸಿನ್ನು
ನರರನುದ್ಧರಿಸುತಿಹರಾ
ಹರಿ ವ್ಯಾಘ್ರಗಳಿಗೆ ತೀರ್ಥವನೆರದು ಅಂಗಾರ
ಕರ ಮುಟ್ಟಿ ಪಚ್ಚುವವರಾ
ವರ ಮಂತ್ರಾಕ್ಷತೆ ನಿತ್ತು ಮುದದಿಂದ ಪಾಮರರಿ–
ಘರುಷ ವರುಷವಗರೆವರಾ
ಸುರಧೇನುವಿನಂತೆ ಸಕಲಾಭೀಷ್ಟವನಿತ್ತು ತ್ವರಿತ–
ದಿಂ ರಕ್ಷಿಸುವರಾ ಇವರಾ ||೨||

ಲಕ್ಷ್ಮೀಪತಿ ಶ್ರೀನಿವಾಸಾರ್ಯ ತಮ್ಮನುಬಿಡದೆ
ರಕ್ಷಿಸಾಲೆಂತೆಂದೆನೊ
ಪಕ್ಷಿವಾಹನ ಪಾದಾಶ್ರಯವೆ ನಮಗಿನ್ನು
ಮೋಕ್ಷವನೆ ಈಯೆಂಬೆನೊ
ಅಕ್ಷರಾ ಪುರುಷ ಅಪ್ರಾಕೃತನ ತೋರಿ ಮದ
ಮತ್ಸರವ ಬಿಡಿಸೆಂಬೆನೋ
ದಕ್ಷಾರಿ ಸಖ ವರದ ಗೋಪಾಲ ವಿಠ್ಠಲನು–
ಪೇಕ್ಷಿಸದೆ ತೋರೆಂಬೆನೊ ನಾನು ||೩||

## ವೇಣುಗೋಪಾಲದಾಸರು

"ಸಂತೈಸು ತವ ದಾಸನೆಂದೆನ್ನನು" ಕೀರ್ತನೆಯಲ್ಲಿ ಐದನೆಯ ನುಡಿಯಲ್ಲಿ ಬರುವ ಶ್ರೀ ಭಾರತೀ ರಮಣನಂತೆ ಹರಿ ಕರುಣದಲಿ ಎಂಬ ಸಾಲಿಗೆ "ಶ್ರೀ ಭಾವಿ ಭಾರತಿರಮಣ ನರಹರಿ ಕರುಣದಲಿ" ಎಂಬ ಪಾಠಾಂತರವಿದೆ ಎಂದು ಹರಿದಾಸ – ಪರಂಪರೆ ಶ್ರೀಪಾದರಾಜಾದಿ ದಾಸವರ್ಯರ ಸ್ತೋತ್ರ ಪದಗಳು ಪ್ರಕಾಶಕ : ಹನುಮಂತರಾವ್ ಗೊರಬಾಳ ಇವರ ಕೃತಿಯಲ್ಲಿ ಕೀರ್ತನೆಯ ಮಧ್ಯದಲ್ಲೇ ತಿಳಿಸಲಾಗಿದೆ (ಪು. ೫೨). ಆ ಕೀರ್ತನೆಯನ್ನೂ ಇಲ್ಲಿ ಕೊಡಲಾಗಿದೆ.

## ವಾದಿರಾಜರ ಸ್ತೋತ್ರ

ಸಂತೈಸು ತವ ದಾಸನೆಂದೆನ್ನನು ॥ಪ॥
ಸ್ವಾಂತದಲಿ ನೆಲಸಿ ಏಕಾಂತ ಭಕ್ತೋತ್ತಮನೆ ॥ಅ.ಪ॥

ವಾಗೀಶ ಮುನಿ ಕರಾಂಬುಜದಿಂದ ಸಂಭವಿಸಿ
ಆಗಮೋಕ್ತಾರ್ಥಗಳ ಶಿಷ್ಯರಾದ
ಭಾಗವತ ಜನರಿಗುಲ್ಲಾಸದಲಿ ಬಿಡದೆ ಚ-
ನ್ನಾಗಿ ವ್ಯಾಖ್ಯಾನವನು ಪೇಳ್ದ ಗುರು ಸುರತರುವೆ ೧

ಮೋದತೀರ್ಥಾರ್ಯರ ಸುವಂಶಾಂಬುನಿಧಿ ಚಂದ್ರ
ಸಾಧಿಸುವೆ ದುಃಶಾಸ್ತ್ರಗಳನೆ ಮುರಿದು
ವಾದದಿಂದಲ್ಲಿ ಸಕಲ ಮೇದಿನಿಯೊಳಿಪ್ಪ ದು-
ರ್ವಾದಿಗಳ ಭಂಗಿಸಿದಿ ಮಾಧವನ ಪ್ರಿಯ ಪಾಹಿ ೨

ಕಲಿ ಕೃತಾಚರಣೆಗಳು ಬಲಿಯಲ್ಬರಿ ಆಜ್ಞದಿಂ-
ದಿಳಿಯೊಳವತರಿಸಿ ಸಜ್ಜನರಿಗೆಲ್ಲ
ತಿಳುಹಿ ಪರತತ್ವವನು ಶಾಸ್ತ್ರಮುಖದಿಂದ ಯತಿ-
ಕುಲ ತಿಲಕ ನಂಬಿದವರಿಗೆ ನಿತ್ಯ ಸುರಧೇನು ೩

ಪಾದಚಾರಿಗಳಾಗಿ ತೀರ್ಥಯಾತ್ರೆಗಳ ಸ-
ಮ್ಮೋದದಲಿ ಚರಿಸುತ್ತ ಚಮತ್ಕೃತಿಯಲಿ
ಸಾಧು ಸಮ್ಮತವಾದ ತೀರ್ಥ ಪ್ರಬಂಧವನು
ಆದರದಿ ರಚಿಸಿದ ಮಹ ದಯಾಂಬುಧಿಯೆ
ಕ್ಷೋಭ ಕಾಲದಲಿ ಸಂಚಾರ ಮಾಡುತ್ತಿರಲ-
ಹೋಬಲದಿ ನೈವೇದ್ಯ ಕಲಹದಿಂದ ಆ-
ಕ್ಷೋಭಿಗರ ಗರ ಮಿಶ್ರಿತಾನ್ನವನುಂಡು ಅರಗಿಸಿದಿ
ಶ್ರೀ ಭಾರತಿರಮಣನಂತೆ ಹರಿ ಕರುಣದಲಿ ೪

ಚಂದ್ರಿಕಾಚಾರ್ಯರಲಿ ಶಿಷ್ಯನೆಂದೆನಿಸಿ ಆ-
ನಂದದಲಿ ವ್ಯಾಸ ಪ್ರತೀಕವನೆ ತಂದು
ನಿಂದೆ ನಿರ್ಭಯದಿ ಸರ್ವತ್ರದಲಿ ಮೆರೆದ ಯೋ-
ಗೀಂದ್ರ ಕಾಷಾಯ ದಂಡಧರನೆ ಸುಗುಣಸಾಂದ್ರ ೬

ಅಂಕದಲ್ಲಿಪ್ಪ ಬಾಲಕನ ಬರುತಲೆ ಕಂಡು
ಶಂಖ ಚಕ್ರಾಂಕಿತನೆ ಈತನೆಂದು
ಶಂಕಿಸದೆ ಎನಗೆ ಪ್ರಾಗ್ಜನ್ಮದಲಿ ಪೇಳ್ದ ಅಕ-
ಳಂಕ ಸನ್ಮಹಿಮ ಹಯಮುಖನ ದಾಸಾಗ್ರಣಿಯೇ ೭

ಮಾರಪಿತ ಮಂದಜಾಸನ ಪದವಿ ತೀವ್ರ ಗಮನ
ಪದುಮಾರಿ ಮೌಳಿಗಳಿಂದ ಸಹಿತನಾಗಿ
ಸಾರ ಶ್ವೇತ ದ್ವೀಪದೊಳಗಿಪ್ಪ ತೆರನಂತೆ
ಧೀರ ವೃಂದಾವನದಿ ತೋರುವಿ ನಿರಂತರದಿ ೮

ಸನ್ಮಹಿಮ ವೇಣುಗೋಪಾಲ ವಿಠಲ ಯದು ವ-
ರೇಣ್ಯನ ಕೃಪಾ ಪಾತ್ರರೆಂದೆನಿಸುವ
ಘನ್ನ ಋಜುಗಣದೊಳಗೆ ಮಾನ್ಯನಾಗಿಹ ಸುಪ್ರ-
ಸನ್ನ ಯತಿಕುಲರನ್ನ ನಂಬಿದೆನೋ ನಿನ್ನ ೯

## ವ್ಯಾಸವಿಠ್ಠಲರು

ಮಧುಕೈಟಭಾರಿ : ಕಲ್ಪಾದಿಯಲ್ಲಿ ವಿಷ್ಣು ವಟಪತ್ರಶಾಯಿಯಾಗಿ ಮಲಗಿದ್ದಾಗ ಆತನ ಕಿವಿಯ ಮಲದಿಂದ ಮಧು, ಕೈಟಭರೆಂಬ ಇಬ್ಬರು ರಾಕ್ಷಸರು ಜನಿಸಿ, ನಾಭಿಕಮಲದಲ್ಲಿದ್ದ ಚತುರ್ಮುಖನನ್ನು ಪೀಡಿಸತೊಡಗಿದರು. ಚತುರ್ಮುಖನು ವಿಷ್ಣುವನ್ನು ಹೊಗಳಲಾಗಿ ಎಚ್ಚೆತ್ತ ವಿಷ್ಣು, ಚತುರ್ಮುಖನಿಗೆ ಅಭಯವಿತ್ತು ಅವರಿಬ್ಬರನ್ನು ತನ್ನ ತೊಡೆಯ ಮೇಲೆ ಸಂಹರಿಸಿದ.

## ಶ್ರೀಗುರುವಿಜಯವಿಠ್ಠಲರು

**(ಸುಳಾದಿಗಳಿಂದ)**

೧. *ಉಭಯ ಅಂಶಾಂಶದಲ್ಲಾಗೆ* : ಇಂದ್ರ ಅರ್ಜುನನಾದಾಗ್ಗೆ ಮತ್ತು ಜಯತೀರ್ಥರಾದಾಗ್ಗೆ ಇಂದ್ರದೇವರು ತತ್ವಾಭಿಮಾನಿಗಳು. ಇವರಿಗೆ ಮೂಲದಲ್ಲಿ ಕಲಿಯ ಆವೇಶವಿಲ್ಲ.

೨. *ತಮೋಗುಣವೆಂಬ ಹೀನಾಶ್ರಯ* : ಸಂಸಾರದಲ್ಲಿ ಬಾಧಿಪ ಕಾಮ ಕ್ರೋದಾಧಿಗಳು

ಯಾವವೆಂದರೆ, ತಮೋಗುಣ ಹೆಚ್ಚಿಸುವ ಅನ್ಯಥಾ ಮತಿಗಳು ಸಹವಾಸವೇ ಹೀನ ಆಶ್ರಯ.

*೩. ಕಾಮವೆಂಬೋ ಪಂಥ ಗಹನಾರಣ್ಯದಿ* : ವಿಷಯೇಚ್ಛಾ ಕಾಮ ವೆಂಬ ಗಹನ ಅರಣ್ಯ.

*೪. ಕ್ರೋಧಾಖ್ಯ ವ್ಯಾಘ್ರ* : ಕಾಮದಿಂದ ಕ್ರೋಧ – ಸಿಟ್ಟು ಎಂಬ ಹುಲಿ ನುಂಗಿ ಬಾಧಿಸುತ್ತಿದೆ

*೫. ವ್ಯಾಮೋಹವೆಂಬುವ ವರಹ* : ಅನಿತ್ಯ ವಸ್ತುಗಳಲ್ಲಿ ನಿತ್ಯವೆಂದು ಪ್ರೀತಿ ಮಾಡುವದು ವ್ಯಾಮೋಹ – ಎಂಬ ಕಾಡುಹಂದಿ ಬೆನ್ನುಹತ್ತಿದೆ

*೬. ಲೋಭದ ಸರ್ಪ* : ಇದ್ದದರಲ್ಲಿ ಒಬ್ಬರಿಗೂ ಕೊಡದೆ ತಾನೂ ಉಣದೆ ಸರ್ಪದ ಸಮಾನ ಲೋಭ, ಕೃಪಣತೆ ನುಂಗಹತ್ತಿದೆ.

*೭. ಮದವೆಂಬಂಥ ಅಷ್ಟಗಜಂಗಳು* : ಅನ್ನಾದಿ ಅಷ್ಟ ಮದಗಳೇ ಅಷ್ಟಗಜಗಳು ಬೆನ್ನಟ್ಟಿವೆ.

*೮. ಕುಮತ್ಸರಿಯಾದ ಕಂಟಕಗಳ ನಟ್ಟು* : ಸಜ್ಜನರಲ್ಲಿ ಕೆಟ್ಟ ಮತ್ಸರವೆಂಬೊ ಮುಳ್ಳುಗಳು ನಡುತ್ತವೆ.

*೯. ಮಾಯಾಂಧಕಾರ* : ಅಜ್ಞಾನಾಂಧಕಾರ

*೧೦. ಈ ಮನವೆಂಬುವ ವೃಶ್ಚಿಕ* : ಕೆಟ್ಟ ವಿಷಯಾದಿಗಳಲ್ಲಿ ಚರಿಸುವ ಕೆಟ್ಟ ಚೇಳು ಕಡಿತದಿಂದ

*೧೧. ದಾಮರೂಪವಾದ ಅಜ್ಞಾನ ಪಾಶದಿ* : ಸಂಸಾರ ಪಾಶದಿಂದ ಕಟ್ಟಿ ಹಾಕಿರುವುದನ್ನು ಬಿಡಿಸು.

*೧೨. ಪ್ರಾರಬ್ಧ ಕರ್ಮದಲಿ ಚತುರ್ಮುಖ ದೇವನು* : ಬ್ರಹ್ಮ ವಾಯುಗಳಿಬ್ಬರು ಸುಖಪ್ರಾರಬ್ಧರು.

*೧೩. ದ್ವಿತೀಯ ರೂಪವಾದ ಯತಿರೂಪದಿ* : ಇಂದ್ರಾಂಶರಾದ ಜಯ ತೀರ್ಥರಾಗಿ ಎರಡನೇ ರೂಪದಿ ಅವತರಿಸಿದಾಗ್ಗೆ ಅನುಗ್ರಹಿಸಿದ್ದು ಕಥಾ.

*೧೪. ಸಥಿಯಿಂದಲಿ ಎನ್ನ ಸಖನೆಂದು ಬಗೆದ* : ಪಾರ್ಥರಾಗಿ ಅವತರಿಸಿದ ಕಾಲ.

*೧೫. ಕೃಷ್ಣನಿಂದಲಿ ಎನಗೆ ಉತ್ಕೃಷ್ಟ ಸುಖವಯ್ತಾ* : ಪಾರ್ಥ ಅರ್ಜುನ ನಾದಾಗ್ಗೆ ಕೃಷ್ಣನು ಅನುಗ್ರಹಿಸಿದ ಚರಿತೆ ಪ್ರಮೇಯ.

*೧೬. ಇನಿತುಕಾಲ* : ಪೂರ್ವದ ನಲವತ್ತು ವರ್ಷ ಪರಿಯಂತರ ಆದ ಕೃತ್ಯಗಳ ಕ್ಷಮಾಪಣೆ.

## ಶ್ರೀವೆಂಕಟೇಶವಿಠ್ಠಲರು

'ಬಿಡುವೆನೇನಯ್ಯಾ ಹನುಮ ನಿನ್ನ ಬಿಡುವೆನೇನಯ್ಯಾ' ಎಂಬ ಕೀರ್ತನೆ ಕೆಲವು ಮುದ್ರಿತ ಪುಸ್ತಕಗಳಲ್ಲಿ 'ಪುಲ್ಲನಾಭ ಶ್ರೀಪುರಂದರ ವಿಠಲನ' ಎಂದು ಪುರಂದರ ವಿಠಲಾಂಕಿತದಲ್ಲಿ ಪ್ರಕಟವಾಗಿದೆ. (ಭಜನ ಕೌಸ್ತುಭ)

ಹನುಮಂತರಾವ್ ಗೊರಬಾಳ, ಶಕೆ ೧೮೮೦ ಶ್ರಾವಣ – ಭಾದ್ರಪದ, ಪ್ರಕಟಣೆ : ೬೫. ಸಂಪುಟ : ೨ ಸಂಚಿಕೆ : ೪

೮. ಶ್ರೀ ವಿಜಯದಾಸರು ಸ್ತೋತ್ರಗಳು ೭೮, ಸಂಕ್ಷಿಪ್ತ ಜೀವನ ಚರಿತ್ರೆ. ಸಂ : ಪ್ರ : ಹನುಮಂತರಾವ್ ವೆಂಕಟರಾವ್ ಕುಲಕರ್ಣಿ ಗೊರಾಬಾಳ ವಕೀಲ, ಲಿಂಗಸೂಗೂರು. ಶ್ರೀ ವರದೇಂದ್ರ ಹರಿದಾಸ ಸಾಹಿತ್ಯ ಮಾಲೆ ಕುಸುಮ – ೧೧–೧೨. ಜಯ ಸಂವತ್ಸರ ಅಕ್ಷಯ ತೃತೀಯ.

೯. ಸಂಕ್ಷಿಪ್ತ ಕನ್ನಡ ನಿಘಂಟು (ಕನ್ನಡ–ಕನ್ನಡ) ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ ಬೆಂಗಳೂರು – ೧೮. ೧೯೭೫ ಪ್ರಧಾನ ಸಂಪಾದಕರು : ಪ್ರೊ.ಜಿ. ವೆಂಕಟಸುಬ್ಬಯ್ಯ.

೧೦. ಹರಿದಾಸ ಪರಂಪರೆ : ಶ್ರೀ ಪಾದರಾಜಾದಿ ದಾಸವರ್ಯರ ಸ್ತೋತ್ರ ಪದಗಳು ಚರಿತ್ರಾತ್ಮಕ (೧೦೯)

ಪ್ರ : ಹನುಮಂತರಾವ್ ಗೊರಾಬಾಳ ಸಂ : ಶ್ರೀ ವರದೇಂದ್ರ ಹರಿದಾಸ ಸಾಹಿತ್ಯ ಮಂಡಲ, ಲಿಂಗಸೂಗೂರ ಶಕೆ ೧೮೮೦.

೧೧. ಶ್ರೀ ಹರಿಭಕ್ತ ವಿಜಯ – ಭಾಗ – ೩ ಪಂಚದಶ ಪುಷ್ಪ. ಗುರುಕೃಪಾಗ್ರಂಥಮಾಲೆ. ಲೇ : ಗುರುಗೋವಿಂದವಿಠಲದಾಸರು ೧೯೭೦

೧೨. ದಾಸ ಸಾಹಿತ್ಯದ ಹಾದಿಯಲ್ಲಿ – ಲೇಖಕರು : ಪ್ರೊ. ವಸಂತ ಕುಷ್ಟಗಿ.

## ಶ್ರೀವೇಣುಗೋಪಾಲದಾಸರ ಕೃತಿಗಳು

## ಶ್ರೀವ್ಯಾಸವಿಠ್ಠಲರ ಕೃತಿಗಳು

## ಶ್ರೀಗುರುವಿಜಯವಿಠ್ಠಲರ ಕೃತಿಗಳು

| ಕ್ರಮ ಸಂಖ್ಯೆ | ಕೀರ್ತನೆ / ಉಗಾಭೋಗ / ಸುಳಾದಿಗಳ ಮೊದಲ ಸಾಲು | ಕೀರ್ತನೆ ಸಂಖ್ಯೆ |
|---|---|---|
| ೧೫೩. | "ಭವಾಮಿ ನ ಚಿರಾತ್ವಾರ್ಥ" (ಸುಳಾದಿ) | ೧೪೮ |
| ೧೫೪. | ಬೊಮ್ಮ ಜನಕ ರಹಸ್ಯ ಪೇಳಿದ (ಸುಳಾದಿ) | ೧೫೯ |
| ೧೫೫. | ಬೊಮ್ಮಾದಿಗಳಿತ್ತ ವರ (ಸುಳಾದಿ) | ೧೫೫ |
| **ಮ** | | |
| ೧೫೬. | ಮಖವನ್ನೆ ಮಾಡುವದು ಮರ್ಮವೆ (ಸುಳಾದಿ) | ೧೬೧ |
| ೧೫೭. | ಮಾಡಿದ ಋಣವನ್ನು ತೀರಿಸದಲೆ (ಸುಳಾದಿ) | ೧೫೩ |
| ೧೫೮. | ಮಾಯಗಾರನೆ ನಿನ್ನ ಮಾಯ ತಿಳಿಯುವದಕ್ಕೆ (ಸುಳಾದಿ) | ೧೪೨ |
| ೧೫೯. | ಮಿತ್ರನು ಎಂದು ನಿನ್ನ ಮನದಿ (ಸುಳಾದಿ) | ೧೨೫ |
| **ಯ** | | |
| ೧೬೦. | ಯಾಕೆ ಮುನಿಸು ನಿನಗೆ (ಸುಳಾದಿ) | ೧೫೧ |
| **ವ** | | |
| ೧೬೧. | ವ್ರತವನಲ್ಲದೆ ಅನುವ್ರತ ಮಾಡಬಹುದೇ (ಕೀರ್ತನೆ) | ೧೧೫ |
| ೧೬೨. | ವೈವಾಹ ಮಾಡಿದೆ ವಿಭವ ಪೂರ್ವಕದಿಂದ (ಸುಳಾದಿ) | ೧೬೦ |
| **ಹ** | | |
| ೧೬೩. | ಹರಿ ನಿನ್ನ ನಿರ್ಘಣತನಕೆ (ಸುಳಾದಿ) | ೧೪೩ |
| ೧೬೪. | ಹಿತಮಾಳ್ಪ ಜನಕನಾಗಿ ರಕ್ಷಿಸು (ಸುಳಾದಿ) | ೧೩೬ |
| **ಕ್ಷ** | | |
| ೧೬೫. | ಕ್ಷಿತಿಯ ಜನರು ನಿನ್ನ ದಯದಿ (ಸುಳಾದಿ) | ೧೫೭ |

## ಶ್ರೀಕೇಶವವಿಠ್ಠಲರ ಕೃತಿಗಳು

**ಕ**

## ಶ್ರೀಕಮಲಾಪತಿವಿಠ್ಠಲರ ಕೃತಿಗಳು

ಕನ್ನಡ ಸಾಹಿತ್ಯದ ಇತಿಹಾಸದಲ್ಲಿ
ಹರಿದಾಸ ಸಾಹಿತ್ಯ ಒಂದು ಪ್ರಮುಖ ಮಜಲು.
ಹರಿದಾಸರು ರಚಿಸಿರುವ ವಿಪುಲ ಕೀರ್ತನೆಗಳು
ಕರ್ನಾಟಕ ಸಾಂಸ್ಕೃತಿಕ ತವನಿಧಿಗಳಾಗಿವೆ.
ದಾಸ ಸಾಹಿತ್ಯದಲ್ಲಿ ಕಂಡುಬರುವ
ಭಾಷಿಕ ಹಾಗೂ ಸಾಹಿತ್ಯಕ ಸೊಬಗು,
ಆಧ್ಯಾತ್ಮಿಕ ಬೆಡಗು, ಸಂಗೀತದ ಮೆರುಗು ಅನನ್ಯ.
ದಾಸ ಸಾಹಿತ್ಯವು ಜ್ಞಾನ, ಮನೋಲ್ಲಾಸ
ಮತ್ತು ಜೀವ ಸಂಸ್ಕಾರಗಳ ತ್ರಿವೇಣಿ ಸಂಗಮ.
ಇಂಥ ದಾಸ ಸಾಹಿತ್ಯವನ್ನು
ಸಮಗ್ರವಾಗಿ ಸಂಗ್ರಹಿಸಿ, ಸಂಪಾದಿಸಿ,
ಬಹುಮಾಧ್ಯಮದಲ್ಲಿ ಹಾಗೂ ಸುಲಭ ಬೆಲೆಯಲ್ಲಿ
ಕನ್ನಡ ಜನತೆಗೆ ನೀಡುವ ಮಹತ್ವದ ಆಶಯವೇ
**ಸಮಗ್ರ ದಾಸ ಸಾಹಿತ್ಯ ಯೋಜನೆ**



ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಕನ್ನಡ ಭವನ, ಜೆ.ಸಿ. ರಸ್ತೆ
ಬೆಂಗಳೂರು